ಮಾರ್ಚ್ 2000 ರೂ. 10

ಬಿಸಿಲ



- ಸ್ತನಗಳ ಸ್ವಯಂ ಪರೀಕ್ಷೆ
- ಟಿ.ವಿ.ಯಿಂದ ದಿಕ್ಕೆಟ್ಟ ಮಕ್ಕಳು
- ಗಂಗೆಗೆ ಬಿದ್ದ ಬೆಂಕಿ!
- ಬೆಳಕು ನೀಡುವ ಬದುಕು
- ಕ್ಯಾನ್ಸರ್‌ಗೆ ಟೊಮೆಟೊ ಮದ್ದು

## ಕಾಂಗ್ರೆಸ್‌ನಲ್ಲಿ ಭಿನ್ನಮತ!

# ಸ್ತನ ಕ್ಯಾನ್ಸರ್




# ನೀವು 'ಸ್ವಂತ ಮನೆ' ಕನಸು ಕಾಣುತ್ತಿದ್ದೀರಾ?

ಸ್ವಂತ 'ಮನೆ' ಹೊಂದಲು ಬಯಸುವವರು ತಿಳಿದಿರಲೇಬೇಕಾದ ಸಂಪೂರ್ಣ ವಿವರಗಳನ್ನು 'ಬದುಕು' ಒದಗಿಸುತ್ತದೆ. ಮನೆ ಕಟ್ಟುವವರಿಗಾಗಿಯೇ ''ಸ್ವಂತ ಮನೆ'' ಹೆಸರಿನ ವರ್ಣರಂಜಿತ ಲೇಖನಮಾಲೆ ಆರಂಭಿಸುತ್ತಿದ್ದೇವೆ. ಈ ವಿನೂತನ ಲೇಖನಮಾಲೆಯಲ್ಲಿ ಈ ಕೆಳಗಿನ ವಿಷಯಗಳಿರುತ್ತವೆ.

- ನಿವೇಶನ ಆಯ್ಕೆ
- ಬ್ಯಾಂಕ್ ಸಾಲ ಸೌಲಭ್ಯ
- ಮನೆ ಅಂದಕ್ಕಾಗಿ ಸರಳ ಉಪಾಯಗಳು
- ನಿವೇಶನ ನೋಂದಾವಣೆ
- ಕಾಂಟ್ರ್ಯಾಕ್ಟರ್ ಜೊತೆಗಿನ ವ್ಯವಹಾರ
- ಕಟ್ಟಡ ಸಾಮಗ್ರಿಗಳ ಗುಣ ಪರೀಕ್ಷೆ
- ಕಡಿಮೆ ವೆಚ್ಚದ ಮನೆ ನಿರ್ಮಾಣ

....ಇತ್ಯಾದಿ ಪ್ರತಿಯೊಬ್ಬರೂ ತಿಳಿದಿರಬೇಕಾದ ಸರಳ ಮಾಹಿತಿಗಳು

**'ಬಿಸಿಲ ಬದುಕು' ಮೇ ಸಂಚಿಕೆಯಿಂದ ಲೇಖನಮಾಲೆ ಆರಂಭ!**

**ಹತ್ತಿರದ ಏಜೆಂಟರಲ್ಲಿ ನಿಮ್ಮ ಪ್ರತಿ ಕಾಯ್ದಿರಿಸಲು ಮರೆಯಬೇಡಿ!**

**ಮನೆ ಕಟ್ಟುವ ವಿಷಯಕ್ಕೆ ಸಂಬಂಧಿಸಿದಂತೆ ನಿಮ್ಮ ಪ್ರಶ್ನೆ, ಅನುಮಾನ, ಸಂದೇಹಗಳಿದ್ದರೆ ಈ ವಿಳಾಸಕ್ಕೆ ಬರೆಯಿರಿ, ತಜ್ಞರ ಮೂಲಕ ಉತ್ತರ ಒದಗಿಸುತ್ತೇವೆ.**

ವಿಳಾಸ: 'ಬಿಸಿಲ ಬದುಕು', 552, 15ನೇ ಮೇನ್, 3ನೇ ಸ್ಟೇಜ್, 4ನೇ ಬ್ಲಾಕ್, ವಾಟರ್ ಟ್ಯಾಂಕ್ ರೋಡ್, ಬಸವೇಶ್ವರನಗರ, ಬೆಂಗಳೂರು - 560 079 ಫೋನ್ : 3227810.

# ಬದುಕು

ಮಾರ್ಚ್ 2000 ಸಂಪುಟ 3 ಸಂಚಿಕೆ 9

ಸಂಪಾದಕ : ಚಂದ್ರಕಾಂತ ವಡ್ಡು

## ● ಹೊಸ ವಿಳಾಸ ●

'ದಾರಿ' ವಾರಪತ್ರಿಕೆ, 'ಬದುಕು' ಮಾಸಪತ್ರಿಕೆ ಹಾಗೂ 'ಅಂಕುರ ಪ್ರಕಾಶನ'ದ ಕಛೇರಿ ಸ್ಥಳಾಂತರಗೊಂಡಿದೆ.
ಹೊಸ ಕಛೇರಿ ವಿಳಾಸ : 552, 15ನೇ ಮೇನ್, 3ನೇ ಸ್ಟೇಜ್, 4ನೇ ಬ್ಲಾಕ್, ವಾಟರ್ ಟ್ಯಾಂಕ್ ರೋಡ್, ಬಸವೇಶ್ವರ ನಗರ, ಬೆಂಗಳೂರು - 560079 ✆ : 3227810
ಮೊಬೈಲ್ : 98440 87433

- ಬೇಡ ಎನ್ನುವವರು ಇರುವವರೆಗೂ ಬೇಡ ಎಂದದ್ದನ್ನು ಮಾಡುವವರು ಇದ್ದೇ ಇರುತ್ತಾರೆ. ನಿಷೇಧಾತ್ಮಕವಾದ ಎಲ್ಲ ವಿಚಾರಗಳಿಗೂ ತೀವ್ರ ಪ್ರತಿರೋಧ ಇದ್ದೇ ಇರುತ್ತದೆ.
  -ಅನಾಮಿಕ

- ಮಾಂಸ ತಿನ್ನುತ್ತೇನೆ ಎಂದು ಸಾಬೀತುಗೊಳಿಸಲು ಮೂಳೆಯ ಹಾರ ಹಾಕಿಕೊಂಡು ಅಡ್ಡಾಡಬೇಕಿಲ್ಲ.
  -ಉಪಾಧ್ಯೆ

- ಮನುಷ್ಯ ತಾನು ಚಿರಂಜೀವಿ ಎಂದೇ ಬದುಕಿರುವಷ್ಟು ಕಾಲವೂ ಭಾವಿಸುತ್ತಾನೆ. ಸಾವೊಂದು ಇದೆ ಎಂಬ ಅರಿವು ಆತನಲ್ಲಿ ಬಂದರೆ ಆತ ಮಾಡುವ ಎಷ್ಟೋ ದುಷ್ಟ ಕೆಲಸಗಳು ನಡೆಯುತ್ತಲೇ ಇರಲಿಲ್ಲ.
  -ಡ್ಯೂ ಬೈಟ್

- ಸರ್ಕಾರ ತನ್ನಿಂದ ತಾನೇ ಜನಕ್ಕೆ ಏನಾದರೊಂದು ಕೊಡಲಾರದು. ಜನರಿಂದ ಏನಾದರೊಂದು ಕಿತ್ತುಕೊಂಡೇ ಅದು ಮತ್ತೊಂದನ್ನು ನೀಡುವುದು ಮಾತ್ರ ಸಾಧ್ಯ.
  -ಹೆನ್ರಿ ಹ್ಯಾಜ್ಲಿಡ್

- ಹೊಸ ವರ್ಷದ ಮೊದಲ ದಿನದಂದು ನಿನ್ನ ಬಲಗೈ ಸದಾ ಸ್ನೇಹಕ್ಕಾಗಿ ಚಾಚಿರಲಿ, ಬೇಡಲಿಕ್ಕಾಗಿ ಅಲ್ಲ.
  -ಐರಿಷ್ ಗಾದೆ

- ಆತ್ಮವಿಶ್ವಾಸ ಮೂಡುವುದು ನಾವು ಸದಾ ಸರಿಯಾಗಿಯೇ ವರ್ತಿಸುತ್ತೇವೆ ಎಂಬ ನಂಬಿಕೆಯಿಂದ ಅಲ್ಲ. ತಪ್ಪು ಮಾಡುವ ಬಗ್ಗೆ ಅಳುಕು ಇಲ್ಲದೇ ವರ್ತಿಸುವುದರಿಂದ. ಯಾಕೆಂದರೆ ಸರಿಯಾದುದನ್ನೇ ಮಾಡಬೇಕೆಂದು ತೀರ್ಮಾನಿಸಿದ ಮನುಷ್ಯ ಏನನ್ನೂ ಮಾಡಲು ಸಾಧ್ಯವೇ ಆಗದಿರಬಹುದು.
  -ಪೀಟರ್ ಮ್ಯಾಕಿಂಟೈರ್

## ದಾನ

ಇದೊಂದು ಜಪಾನೀ ಕತೆ.

ಊರಲ್ಲೊಬ್ಬ ಶ್ರೀಮಂತ. ಬೇಕಾದಷ್ಟು ಹಣ ಇತ್ತು. ಜನ ಗೌರವಿಸುತ್ತಾ ಇದ್ದರು. ಇದು ಸಾಲದು. ಕೀರ್ತಿ ಪಡೆಯಬೇಕು ಎನ್ನಿಸಿತು. ಒಳ್ಳೆಯ ಕೆಲಸ ಮಾಡು, ಹೆಸರು ಬರುತ್ತದೆ ಅಂದರು. ಅವನಲ್ಲಿ ಹಣ ಇತ್ತು. ಬಿಡುವು ಇರಲಿಲ್ಲ. ಮುಖ್ಯ, ಒಳ್ಳೆಯ ಕೆಲಸ ಮಾಡುವ ವ್ಯವಧಾನ ಇರಲಿಲ್ಲ. ಅಲ್ಲದೇ ತಾನಾಗಿ ಏನೋ ಮಾಡಲು ಹೊರಟರೆ ಖರ್ಚು ಮೈಮೇಲೆ ಬರಬಹುದು ಎಂದು ಚಿಂತೆ ಮಾಡಿದ.

ಊರಾಚೆ ಒಬ್ಬ ಧರ್ಮ ಗುರು. ಆತನನ್ನು ಕಂಡಿದ್ದ. ಚಿಂದಿ ತೊಟ್ಟು ಭಿಕಾರಿಯಂತೆ ಅವನು ಕಾಣುತ್ತಿದ್ದ. ಆದರೆ ಜನಕ್ಕೆ ಅವನೆಂದರೆ ತುಂಬಾ ಅಭಿಮಾನ. ಏನೇ ಕಷ್ಟ ಬರಲಿ ಅವನ ಬಳಿ ಹೋಗುತ್ತಿದ್ದರು. ಕಷ್ಟ ಹೇಳಿಕೊಳ್ಳುತ್ತಾ ಇದ್ದರು. ಮೊದಲೇ ಭಿಕಾರಿ. ಅವನೇನು ಮಹಾ ಮಾಡಬಲ್ಲ. ಜನಕ್ಕೆ ಹುಚ್ಚು. ಇದು ಶ್ರೀಮಂತನ ಯೋಚನೆಯ ಶೈಲಿ. ಅಂಥ ಧರ್ಮ ಗುರುವಿಗೆ ತಾನು ನಾಲ್ಕು ಕಾಸು ದಾನ ಮಾಡಿದರೆ ಕೀರ್ತಿಯೂ ಬರುತ್ತದೆ. ಖರ್ಚು ಕಡಿಮೆ.

ಹಣದ ಥೈಲಿ ಹಿಡಿದು ಗುರುವಿನ ಬಳಿ ಹೋದ. ಎಂದಿನ ಹಾಗೆ ಜನರ ಗುಂಪು ಅಲ್ಲಿತ್ತು. ಇದು ಒಳ್ಳೆ ಅವಕಾಶ. ನಾಲ್ಕು ಜನ ಕಾಣುವಾಗ ತಾನು ಹಣದ ಥೈಲಿ ಕೊಟ್ಟರೆ ಊರೆಲ್ಲ ಸುದ್ದಿಯಾಗುತ್ತದೆ. ಖುಷಿಯಾಯಿತು.

'ಗುರುಗಳೇ, ಈ ಥೈಲಿಯಲ್ಲಿ ನೂರು ಚಿನ್ನದ ನಾಣ್ಯ ಇದೆ ತಗೊಳ್ಳಿ'

'ಅಲ್ಲಿಡು.' ಕೈಯಿಂದಲೂ ಮುಟ್ಟದೆ ಗುರುಗಳು ಹೇಳಿದರು. ಶ್ರೀಮಂತನಿಗೆ ಪೆಚ್ಚಾಯಿತು. ನೂರು ಚಿನ್ನದ ನಾಣ್ಯ. ಸುಮ್ಮನೇ ಅಲ್ಲ. ಆದರೂ ಈ ಗುರು ಅದನ್ನು ಕಸ ಎಂಬಂತೆ 'ಅಲ್ಲಿಟ್ಟು ಹೋಗು' ಅನ್ನುತ್ತಿದ್ದಾನೆ. ಸಂತೋಷವಿಲ್ಲ. ಒಂದು ಕೃತಜ್ಞತೆಯ ಮಾತಿಲ್ಲ. ಇಷ್ಟೆಲ್ಲ ಮಾಡಿದ್ದಕ್ಕೆ ಹೊಗಳಿಕೆಯ ಒಂದು ನುಡಿ ಇಲ್ಲ.

ಇನ್ನೊಂದು ದಿನ ಶ್ರೀಮಂತ ಹೋದ. ಈ ಸಲ ಥೈಲಿಯಲ್ಲಿ ಸಾವಿರ ಚಿನ್ನದ ನಾಣ್ಯಗಳಿದ್ದವು. ಈ ಸಲವೂ ಗುರುವಿನದು ಅದೇ ಪ್ರತಿಕ್ರಿಯೆ

'ಅಲ್ಲಿಡು'

ಶ್ರೀಮಂತನಿಗೆ ರೇಗಿತು. ಬಹುಷಃ ಈ ಗುರು ದುರಾಸೆಯವನಿರಬೇಕು. ಇಷ್ಟು ಹಣ ಸಾಲದೇನೋ! ಮುಂದಿನ ಸಲ ಥೈಲಿಯಲ್ಲಿ ಹತ್ತು ಸಾವಿರ ನಾಣ್ಯ ಬಂದವು. ಆಗಲೂ ಸ್ಥಿತಿ ಬದಲಾಗಲೇ ಇಲ್ಲ. ಹಟ ತೊಟ್ಟವನ ಹಾಗೆ ಶ್ರೀಮಂತ ಹಣದ ಮೊತ್ತ ಹೆಚ್ಚಿಸುತ್ತಾ ಹೋದ. ಒಂದು ಲಕ್ಷ ನಾಣ್ಯ ಹೊತ್ತು ಬೀಗುತ್ತಾ ಬಂದ. ಈಗಲಾದರೂ ಗುರುವನ್ನು ಮಟ್ಟ ಹಾಕುತ್ತೇನೆ ಅಂದುಕೊಂಡ.

'ಗುರುಗಳೇ ಲಕ್ಷ ನಾಣ್ಯಗಳು ಇಲ್ಲಿವೆ'

'ಅಲ್ಲಿಡು'

ಶ್ರೀಮಂತನಿಗೆ ರೇಗಿತು.

'ಏನು ಗುರುಗಳೇ? ಇಷ್ಟು ಸಲ ಇಷ್ಟೆಲ್ಲ ಕೊಟ್ಟಿದ್ದೀನಿ. ಒಂದು ಸಲ ಆದರೂ ನೀವು ಕೃತಜ್ಞತೆಯ ಮಾತು ಹೇಳಿದಿರಾ?'

'ಕೃತಜ್ಞತೆ ಹೇಳಬೇಕಾದವನು ನಾನಲ್ಲ ನೀನು. ಕೊಡೋನು ಯಾವತ್ತೂ ಕೃತಜ್ಞನಾಗಿರಬೇಕು. ಪಡೆಯೋನು ತಿರಸ್ಕರಿಸಬಹುದು ಅಲ್ಲವೇ ನೋಡು. ನಾನು 'ಬೇಡ ಕಣಪ್ಪ ಈ ಹಣ ನನಗೆ ಅಂದಿದ್ದರೆ' ಅಲ್ಲಿ ಮೌನ ನೆಲೆಸಿತು.

ಹೊಸ ತಿಳಿವು ಕೂಡ.

■

Printed, Published and Owned by Chandrakanta Vaddu, 552 15th Main, 3rd Stage, 4th Block, Water Tank Road, Basaveshwaranagar, Bangalore-560 079. Tel : 080 3227810 Email :Ankura@rediffmail.com Mobile:98440 87433 Editor : Chandrakanta Vaddu



## ಟಪಾಲು

**ಉಪಯುಕ್ತ**

ಫೆಬ್ರವರಿ ತಿಂಗಳ ಬದುಕು ಮುಖಪುಟ 'ಗುಟ್ಕಾ ನಿಲ್ಲಿ! ಸಾಯ ಬೇಡಿ!!' ಎಂಬ ಎಚ್ಚರಿಕೆಯೊಂದಿಗೆ ಆಕರ್ಷಕವಾಗಿ ಮೂಡಿ ಬಂದಿದೆ. ಇತ್ತೀಚಿನ ದಿನಗಳಲ್ಲಿ ಗುಟ್ಕಾ ಎಂಬ ಮಾರಿಗೆ ನಮ್ಮ ಯುವಜನ ಬಲಿಯಾಗುತ್ತಿರುವುದು ಸದ್ಯದ ದುರಂತ. ಈ ನಿಟ್ಟಿನಲ್ಲಿ ಲೇಖನ ಬೆಳಕು ಚೆಲ್ಲುವಲ್ಲಿ ಯಶಸ್ವಿಯಾಗಿದೆ. ಇಂಥ ಮಾಹಿತಿ ಪೂರ್ಣ ಅತ್ಯುಪಯುಕ್ತ ಲೇಖನಗಳನ್ನು 'ಬದುಕು' ಹೊತ್ತು ತರಲಿ ಎಂದು ಆಶಿಸುವೆ.

-ಮಹಾಂತೇಶ ಕನಕಗಿರಿಮಠ, ಧಾರವಾಡ.

**ಕಡಿವಾಣ ಅಗತ್ಯ**

'ಬಡವರನ್ನೇ ಕಾಡುವ ದೇವರುಗಳು' ಎಂಬ ಲೇಖನ (ವಿಶ್ವಾರಾಧ್ಯ ಸತ್ಯಂಪೇಟೆ) ಇಂದಿನ ಜನರಲ್ಲಿಯ ಮೂಢನಂಬಿಕೆಯನ್ನು ಎತ್ತಿ ತೋರಿಸುವಲ್ಲಿ ಪ್ರಮುಖಪಾತ್ರ ವಹಿಸಿದೆ. ದೈವದ ಹೆಸರಿನಲ್ಲಿ ನಡೆಯುತ್ತಿರುವ ಇಂಥ ಅಮಾನವೀಯ ಆಚರಣೆಗಳನ್ನು ಸರ್ಕಾರವಾಗಲೀ, ಸಾರ್ವಜನಿಕರಾಗಲೀ ತೀವ್ರವಾಗಿ ವಿರೋಧಿಸಿ ಇಂಥ ಸಂಪ್ರದಾಯಗಳಿಗೆ ಕಡಿವಾಣ ಹಾಕುವುದು ತುಂಬಾ ಅಗತ್ಯ. ಮಣಿಚಂದನ ಅವರ 'ಟರ್ನಿಂಗ್ ಪಾಯಿಂಟ್' (ಸರಸ ಕತೆ) ಆರಂಭದಿಂದ ಅಂತ್ಯದವರೆಗೆ ಕುತೂಹಲಕಾರಿಯಾಗಿದ್ದು ಮುದ ನೀಡುತ್ತದೆ.

-ಎಂ. ರಾಜಶೇಖರ್, ಬೆಂಗಳೂರು.

**ಬೇಗ ಕೈ ಸೇರಲಿ**

ಇತ್ತೀಚೆಗೆ 'ಬದುಕು' ಪತ್ರಿಕೆ ಚೆನ್ನಾಗಿ ಮೂಡಿ ಬರುತ್ತಿದೆ. ಎಲ್ಲಾ ಲೇಖನಗಳು ನಮಗೆ ಹಿಡಿಸಿವೆ. ವಿಷಾದವೆಂದರೆ ಸಂಚಿಕೆಯು ತಿಂಗಳ ಮೊದಲವಾರದಲ್ಲಿ ಕೈಸೇರದೇ, ತುಂಬ ತಡವಾಗಿ ನಮ್ಮ ಕೈಸೇರುತ್ತಿದೆ. ಇನ್ನು ಮುಂದೆ ಹೀಗಾಗದಿರಲಿ ಎಂದು ಆಶಿಸುತ್ತೇವೆ.

-ಶಶಿಧರ ಬಿ. ಕಬ್ಬೂರ, ದೇವಿಹೊಸೂರು.

**ವಿಶಿಷ್ಟ**

ಫೆಬ್ರವರಿ ತಿಂಗಳ ಬದುಕು ವಿಶಿಷ್ಟವಾಗಿದೆ. ಯುವಜನರನ್ನು ಮಸಣದ ಕೂಪಕ್ಕೆ ತಳ್ಳುವ ಗುಟ್ಕಾದ ಸಾಧಕ ಬಾಧಕಗಳನ್ನು ಮಾರ್ಮಿಕವಾಗಿ ವಿಶ್ಲೇಷಿಸಲಾಗಿದೆ. ಟಾಲ್‌ಸ್ಟಾಯ್ ಹೇಳಿದ ಮಕ್ಕಳ ಕಥೆಗಳು ಮಾಲಿಕೆಯನ್ನು ಆರಂಭಿಸಿದ್ದು ತುಂಬಾ ಸಂತೋಷದ ವಿಷಯ. ಈ ತಿಂಗಳು ಪ್ರಕಟವಾದ ಪುಟ್ಟಹಕ್ಕಿ ಕಥೆ ಬಂಡವಾಳಶಾಹಿ ಸಂಸ್ಕೃತಿಯಲ್ಲಿ ಬಡಜನರ ಪಾಡನ್ನು ಬಿಚ್ಚಿಡುತ್ತದೆ.

-ರವಿ ಎಸ್ ದೇವರಡ್ಡಿ, ಹೊನ್ನಹಮ್ಮಿಗಿ.

**ವೈವಿಧ್ಯಮಯ**

ಇತ್ತೀಚೆಗೆ 'ಬದುಕು' ಬಹು ವೈವಿಧ್ಯಮಯವಾಗಿ ಮೂಡಿ ಬರುತ್ತಿರುವುದು ತುಂಬಾ ಅಭಿಮಾನದ ವಿಷಯ. ಉಳಿದ ಪತ್ರಿಕೆಗಳಲ್ಲಿ ದೊರೆಯದ ತೀರಾ ಅಪರೂಪವೆನ್ನುವಂಥ ಮಾಹಿತಿಗಳು ಈಗ 'ಬದುಕು'ದಲ್ಲಿ ಲಭ್ಯವಾಗುತ್ತಿವೆ. ಓದುಗರಿಗೆ ಅನುಕೂಲವಾಗುವಂಥ ಹೊಸ ಹೊಸ ಓದುಗರ ಅಂಕಣಗಳನ್ನು ಆರಂಭಿಸಿ. ಪ್ರಚಲಿತ, ವಿಜ್ಞಾನ, ವೈದ್ಯಕೀಯ ಕುರಿತಾದ ಮಾಹಿತಿಗಳೊಂದಿಗೆ ಇದು ನಮ್ಮ ಮನೆ ಮಂದಿಗೆಲ್ಲ ಅಚ್ಚುಮೆಚ್ಚಿನ ಪತ್ರಿಕೆಯಾಗಿದೆ.

-ವಿ.ಎಸ್. ಕುಲಕರ್ಣಿ, ಹುಬ್ಬಳ್ಳಿ.

**ದಾರಿದೀಪ**

ಗುಟ್ಕಾದ ಬಲೆಯಲ್ಲಿ ಸಿಲುಕಿ ಹೊರಬರಲಾಗದೇ ಚಡಪಡಿಸುತ್ತಿರುವ ಇಂದಿನ ಯುವಕರಿಗೆ, ಗುಟ್ಕಾದಾಸರಿಗೆ ಈ ಸಂಚಿಕೆ ದಾರಿದೀಪವಾಗಿ ಮೂಡಿ ಬಂದಿದೆ. ಹಾಗೆಯೇ ಅಡಿಕೆ ಬೆಳೆಗಾರರ ಬದುಕು ಕಣ್ಣಿಗೆ ಕಟ್ಟುವಂತೆ ಮೂಡಿ ಬಂದಿದೆ. ಆದಷ್ಟು ಬೇಗ ಈ ಗುಟ್ಕಾ ಎಂಬ ಹೆಮ್ಮಾರಿಯನ್ನು ಬೇರು ಸಹಿತ ಕಿತ್ತು ಹಾಕುವುದು ಒಳಿತು.

-ಹನುಮಂತರಾವ್ ಭಜಂತ್ರಿ, ತುಳಸಿಗಿರಿ.

**ಮನ ಕಲಕಿತು**

ಈ ತಿಂಗಳ 'ಬದುಕು'ದಲ್ಲಿ ಪ್ರಕಟವಾದ ಕೆ.ಜಿ. ನಾಗಲಕ್ಷ್ಮಿ ಬಾಯಿಯವರ ಲೇಖನ 'ಸರಳುಗಳ ಹಿಂದಿನ ನಿಟ್ಟುಸಿರು' ಯಾವುದೋ ವಿಷ ಗಳಿಗೆಯಲ್ಲಿ ಅರಿಯದೇ ತಪ್ಪು ಮಾಡಿ ಜೈಲು ಸೇರಿ ಶಿಕ್ಷೆ ಅನುಭವಿಸುತ್ತಿರುವ ಮಹಿಳಾ ಖೈದಿಗಳ ಬಗೆಗೆ ಓದಿ ಮನ ಕಲಕಿತು. ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ, ಸರಳುಗಳ ಹಿಂದೆ ಜೀವನ ನಡೆಸುತ್ತಿರುವ ಅಮಾಯಕ ಮಹಿಳೆಯರ ಬಗೆಗೆ ಈ ಲೇಖನ ಕಣ್ತೆರೆಸುವಂತೆ ಮೂಡಿ ಬಂದಿದೆ. ಇಂಥ ಮಹಿಳೆಯರಿಗೆ ಸೂಕ್ತ ರಕ್ಷಣೆ ನೀಡಿ ಜೈಲಿನಿಂದ ಮರಳಿದ ನಂತರ ಆತ್ಮ ವಿಶ್ವಾಸದಿಂದ ಬದುಕುವಂತೆ ಪ್ರೋತ್ಸಾಹಿಸುವುದು ತುಂಬಾ ಅಗತ್ಯ.

-ಎಂ. ನಾಗರತ್ನ, ತುಮಕೂರು

**ರೋಚಕ**

'ಪ್ರೇಮಿಗಳ ದಿನಾಚರಣೆ' ಎಂಬ ಸೃಜನ್ ಅವರ ಲೇಖನ ಸಕಾಲಿಕವಾಗಿ ಮೂಡಿ ಬಂದಿದೆ. ಇತ್ತೀಚಿನ ದಿನಗಳಲ್ಲಿ ಈ ದಿನಾಚರಣೆಗೆ ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಈ ಆಚರಣೆಯ ಹಿನ್ನೆಲೆ ಉದ್ದೇಶಗಳನ್ನು ತುಂಬಾ ವಿವರವಾಗಿ ಲೇಖನದಲ್ಲಿ ತಿಳಿಸಲಾಗಿದೆ. ಹಾಗೆಯೇ 'ಕ್ಲಾಸಿಕಲ್‌ನಿಂದ ಕ್ಯಾಬರೆವರೆಗೆ' ಎಂಬ ಕೆ.ಬಿ. ಬೊಮ್ಮನಾಳರ ಲೇಖನ ತುಂಬಾ ಉಪಯುಕ್ತವಾಗಿದೆ. ಚಿತ್ರರಂಗದ ಸಂಗೀತ, ನೃತ್ಯ ನಡೆದು ಬಂದ ದಾರಿ ನಿಜಕ್ಕೂ ರೋಚಕವಾಗಿದೆ.

-ಬಿ.ಎಚ್. ಭಟ್, ಹೊಸಪೇಟೆ.

**ಲಾಭ ಬಂತು**

ಗುಟ್ಕಾ ಲೇಖನ ಓದಿದಾಕ್ಷಣ ನನ್ನಲ್ಲಿ stock ಮಾಡಿಟ್ಟ ಹಳೆ ಅಡಿಕೆ 16 ಖಂಡಿ (4000 ಕೆ.ಜಿ) ಮಾರಾಟ ಮಾಡಿದೆ. (ಇಲ್ಲವಾದರೆ ಇನ್ನೂ ರೇಟ್ ಏರಬಹುದು ಎಂದು ಕಾಯುತ್ತಿದ್ದೆ) ಮತ್ತೆ ಒಂದೇ ವಾರದಲ್ಲಿ ಕೆ.ಜಿ.ಗೆ 7ರೂ.ನಂತೆ ಬೆಲೆ ಡೌನ್ ಬಂತು. ನಿಮ್ಮ ಮಾತು ಕೇಳಿ ಮಾರಾಟ ಮಾಡಿದ್ದರಿಂದ 25,000 ರೂ. ಹೆಚ್ಚು ಸಿಗುವಂತಾಯಿತು. 'ಬದುಕು' ನಿಜವಾಗಿ ಬದುಕಿಗೊಂದು ದಾರಿದೀಪವೇ ಸರಿ.

- ಜಿ.ವಿ. ಭಟ್. ಪುತ್ತೂರು.

**ಇನ್ನು ಗುಟ್ಕಾ ಮುಟ್ಟುವುದಿಲ್ಲ**

ಈ ಲೇಖನವು ಯುವಜನರಿಗೆ ಒಂದು ದಾರಿದೀಪವಾಗಿರುತ್ತದೆ ಎಂಬುದು ಉತ್ಪ್ರೇಕ್ಷೆಯಲ್ಲ. ಈ ಲೇಖನವು ನನ್ನ ಜೀವನದ ಮೇಲೆ ತುಂಬಾ ಪ್ರಭಾವ ಬೀರಿದೆ. ನಾನೊಬ್ಬ ಕಾಲೇಜು ವಿದ್ಯಾರ್ಥಿ. ದಿನಾಲು 20 ರಿಂದ 25 ಗುಟ್ಕಾ ತಿನ್ನುತ್ತಿದ್ದೆ. ನಿಮ್ಮ ಲೇಖನ ಓದಿಕೊಂಡು, ಇನ್ನು ಮೇಲೆ ಯಾವತ್ತೂ ಗುಟ್ಕಾ ಮುಟ್ಟುವುದಿಲ್ಲವೆಂದು ಪ್ರಮಾಣ ಮಾಡಿದ್ದೇನೆ. ನಿಮ್ಮ ಪತ್ರಿಕೆಯ ಮುಖಾಂತರ ಅಡ್ಡ ದಾರಿಗೆ ಹೋಗುವ ಯುವಜನರನ್ನು ಸರಿಯಾದ ದಾರಿಗೆ ತರುತ್ತೀರಿ ಎಂದು ಆಶಿಸುವೆ. ಇಂತಿ ನಿಮ್ಮ ಪತ್ರಿಕೆಯ ಅಭಿಮಾನಿ.

-ಎಚ್.ಪಿ. ಜಾಲಗೇರಿ, ರಾಮದುರ್ಗ.

# ಪರಿವಿಡಿ





## ರಾಜಕೀಯ



## ಪ್ರಚಲಿತ





## ವಿಜ್ಞಾನ-ಆರೋಗ್ಯ





## ಲೇಖನಗಳು



## ಹಾಸ್ಯ / ಪ್ರಬಂಧ





## ಕ್ರೀಡೆ





## ಕಥೆ





## ಸ್ಥಿರ ಶೀರ್ಷಿಕೆಗಳು



ಜೊತೆಗೆ



**ಮುಂದಿನ ಸಂಚಿಕೆಯಲ್ಲಿ**

**ಉದಯ ಟಿವಿಯ 'ಆದರ್ಶ ದಂಪತಿಗಳು'**

# ಜೆ. ಎಚ್. ಪಟೇಲ್ ಆ ಮುಖ! ಈ ಮುಖ!





**ಲಿಕ್ಕರ್ ಕುಳ ಒಬ್ಬರು ಸೌಹಾರ್ದ ಭೇಟಿ ನೀಡಲು ಬಂದರು. ಬಂದವರು ಸೌಹಾರ್ದಯುತವಾಗಿಯೇ ಜೊತೆಗೆ ತಂದಿದ್ದ ಸೂಟ್‌ಕೇಸನ್ನು ಜಾಣ ಮರೆವಿನಿಂದ ಬಿಟ್ಟು ಹೋದರು. ತೆಗೆದು ನೋಡಿದರೆ ಅದರ ತುಂಬಾ ನೋಟುಗಳು. ಇವರಿಗೆ ಫಜೀತಿ.**

ವಿಜಾಪುರ, ಗುಲ್ಬರ್ಗಾ ಕಡೆ ಜನ ಈಗ ಹೇಳುತ್ತಾರೆ.

'ಕೃಷ್ಣಾ ಯೋಜನೆಗೆ ಪಟೇಲರ ಹಾಗೆ ಯಾರೂ ದುಡ್ಡು ಕೊಡಲಿಲ್ಲ' ಹೀಗೇ ಬೇರೆ ಬೇರೆ ವರ್ಗದ, ಭಾಗದ ಜನ ಬೇರೆ ಬೇರೆ ಕಾರಣಕ್ಕೆ ಪಟೇಲರ ಬಗ್ಗೆ ಇವತ್ತು ಒಳ್ಳೆಯ ಮಾತಾಡುತ್ತಾರೆ. ಇಂಥ ಒಳ್ಳೆಯ ಭಾವನೆಗಳ ಆಧಾರದ ಮೇಲೆ ರಾಜಕೀಯ ಶಕ್ತಿ ಬೆಳೆಸಿಕೊಳ್ಳುವ ಆಸಕ್ತಿ ಈಗ ಪಟೇಲರಿಗಿಲ್ಲ. ಅಂಥ ಆರೋಗ್ಯವೂ ಅವರಲ್ಲಿ ಉಳಿದಿಲ್ಲ.

ಇದೆಲ್ಲ ಅವರಿಗೆ ಗೊತ್ತಿತ್ತೋ ಏನೋ! ಆ ಕಾರಣಕ್ಕೆ ಅಧಿಕಾರದಿಂದ ಇಳಿಯುವ ಮುಂಚೆ ತಮ್ಮ ಜೀವನ ಚರಿತ್ರೆ ಬರೆಸಿಕೊಂಡರು. ಅದನ್ನು ಖಾಸಗಿಯಾಗಿ ಸಾಕಷ್ಟು ಜನಕ್ಕೆ ಹಂಚಿದರು. ಸಾಲದೆಂದು ಸರ್ಕಾರೀ ಗ್ರಂಥಾಲಯಗಳು ಅದರ ಐದು ಸಾವಿರ ಪ್ರತಿ ಖರೀದಿಸಬೇಕೆಂಬ ಆದೇಶ ಕೂಡ ಹೊರಡಿಸಿದರು. ಪುಸ್ತಕದ ಬೆಲೆ ಇನ್ನೂರು ರೂಪಾಯಿ. ಬರೆದವರು ಉದ್ಧಾರವಾಗಲಿ, ಋಣ ಸಂದಾಯವಾಗಲಿ ಎಂದು ಮಾಡಿದ ಉಪಕಾರ ಇದು.

'ಅತ್ತರೆ ಅತಿರೇಕ. ನಕ್ಕರೆ ವಿಪರೀತ' ಎಂಬ ಆಡು ಮಾತಿದೆ. ಅಳುವುದು ಪಟೇಲರ ಜಾಯಮಾನ ಅಲ್ಲ. ಉಳಿದ ಎಲ್ಲ ವಿಪರೀತವೇ. ಇಂಥ ವಿಪರೀತಗಳಿಂದಾಗಿಯೇ ಅವರು ಹೆಸರು ಕೆಡಿಸಿಕೊಂಡಿದ್ದು.

ಮಾತು ಮನೆ ಕೆಡಿಸುತ್ತದೆ. ಅಂಥ ಮಾತಿನ ಬಲದಿಂದಲೇ ಅವರು ದಿನದಿಂದ ದಿನಕ್ಕೆ ಗೇಲಿಯ ವಸ್ತುವಾದರು. ಇವರು ಆಡಿದ ಆಟಗಳು ಹೊಸದೇನೂ ಅಲ್ಲ. ಹಿಂದಿನ ಎಷ್ಟೋ ಮುಖ್ಯಮಂತ್ರಿಗಳು ಇವರಿಗಿಂತ ಮಿಗಿಲಾಗಿ ಮದ್ಯ, ಮಾನಿನಿಯರ ಸುಖ ಕಂಡು ಉಂಡವರು. ಆದರೆ ಅದೆಲ್ಲ ಖಾಸಗಿಯಾಗಿತ್ತು. ಇವರ ಆಪ್ತರೆನಿಸಿದ ಹೆಗಡೆ ಕಮ್ಮಿ ಆಟ ಆಡಿದರೇ? ಆದರೂ ಅವರು ರಸಿಕರೆನಿಸಿಕೊಂಡರು. ಪಟೇಲ್ ಲಂಪಟ ಎನಿಸಿಕೊಂಡರು.

'ಮನರಂಜನೆ, ಖಾಸಗಿ ಬದುಕಿಲ್ಲದ ವ್ಯಕ್ತಿ ಗದ್ದುಗೆ ಏರಿ ಕುಳಿತರೆ ಅಪಾಯಕಾರಿ' ಎಂದು ವಿಧಾನಸಭೆಯಲ್ಲಿ ಅವರು ಸಮರ್ಥಿಸಿಕೊಂಡವರು. ಒಂದು ರೀತಿಯಲ್ಲಿ ದೇವೇಗೌಡರ ರಾಜಕೀಯವನ್ನೇ ತಿಂದುಂಡು ಮಲಗುವ ಜೀವನ ಶೈಲಿಯ ಟೀಕೆಯೂ ಅದಾಗಿತ್ತು. ಅದೇ ವೇಳೆ ರಾಜ್ಯದ ಮುಖ್ಯಮಂತ್ರಿಯಾಗಿ ಖಾಸಗಿ ಬದುಕು ಹಾಗೂ ಅಧಿಕಾರದ ಚಲಾವಣೆಯ ಸರಿಯಾದ ಬ್ಯಾಲೆನ್ಸ್ ಮಾಡುವುದರಲ್ಲಿಯೇ ಅವರು ತಪ್ಪಿದರು.

ಒಂದು ಕಾಲಕ್ಕೆ ನಾಳೆಗಳು ಇಲ್ಲವೇ ಇಲ್ಲ ಎನ್ನುವಂತೆ ಬದುಕಿದರು. ಆಗ ಅವರ ಬದುಕಲ್ಲಿ ಸಮಾಜವಾದ ಇತ್ತು. ಹಿರಿಯರಾದ ಶಾಂತವೇರಿ ಅವರಿದ್ದರು. ಗೆಳೆಯರುಗಳಾದ ಶ್ರೀನಿವಾಸರಾವ್ ಮುಂತಾದವರಿದ್ದರು. ಕುಳಿತ ಕಡೆ ಮಾತಿನ ಮಂಟಪ, ಇಸ್ಪೀಟು, ಹೆಂಡ. ಫಿಲಾಸಫಿ ಕೂಡ ಅವರ ಇಷ್ಟದ ಸಬ್ಜೆಕ್ಟು. ಅದಕ್ಕೆ ತಕ್ಕನಾದ ಗುರುವೊಬ್ಬರೂ ಅವರ ಜೊತೆ ಆಗ ಇರುತ್ತಿದ್ದರು. ರಸ್ತೆ ಬದಿಯಾದರೂ ಸರಿ. ಮುರುಕಲು ಕಾರಿನೊಳಗೆ ಆದರೂ ಸರಿ, ಮದಿರೆಯನ್ನು ಮೈಯೊಳಗೆ ತುಂಬಿಕೊಳ್ಳುತ್ತಾ ಮಾತಿನ ಮಂಟಪ ಕಟ್ಟಲು ಆರಂಭಿಸಿದರೆ ದಿನಗಳು, ರಾತ್ರಿಗಳು ಸರಿದದ್ದು ತಿಳಿಯುತ್ತಾ ಇರಲಿಲ್ಲ. ಆಗ ಅವರದು ಹುಮ್ಮಸ್ಸಿನ ಕಾಲ. ಪಾರ್ಲಿಮೆಂಟಿಗೆ ಆಯ್ಕೆಯಾಗಿ ಹೋಗಿ ಕನ್ನಡದಲ್ಲಿಯೇ ಮಾತಾಡಿ ಇತಿಹಾಸ ನಿರ್ಮಿಸಿದ ಕೆಚ್ಚು ಇತ್ತು. ಅಂಥ ಸಂದರ್ಭಗಳಲ್ಲೆಲ್ಲ ಅವರಿಗೆ ತೀರಾ ಹತ್ತಿರ ಇರುತ್ತಿದ್ದವರು 'ಎಚ್ಚರಿಕೆ' ಶ್ರೀನಿವಾಸ್. ಪಟೇಲರು ಅಧಿಕಾರಕ್ಕೆ ಬಂದಾಗ ಒಂದಿಷ್ಟು ಸುಖ ಕಾಣಬಹುದಾಗಿದ್ದ ಜೀವ. ಗೆಳೆಯನನ್ನು ಕಾಣಲು ಬೆಂಗಳೂರಿಗೆಂದು ಹೊರಟವರು ಬಸ್ಸಿನಲ್ಲಿಯೇ ಹೃದಯಾಘಾತದಿಂದ ತೀರಿಕೊಂಡರು. ಅವರ ಜೊತೆಯೇ ಶಿವಮೊಗ್ಗದಲ್ಲೊಂದು ದೊಡ್ಡ ಪತ್ರಿಕೆ ಮಾಡಬೇಕೆಂದಿದ್ದ ಪಟೇಲರ ಉಮೇದೂ ಮರೆಯಾಗಿಬಿಟ್ಟಿತು.

1983ರಲ್ಲಿ ವಿಚಿತ್ರ ಸ್ಥಿತಿಯಲ್ಲಿ ಕಾಂಗ್ರೆಸ್ ಕೆಳಗಿಳಿಯಿತು. ಚುನಾವಣೆಯ ಫಲಿತಾಂಶ ಕಾಂಗ್ರೆಸ್ಸಿಗರಿಗೆ ದಿಗ್ಭ್ರಮೆ ಮೂಡಿಸಿದ ಹಾಗೇ. ಅಧಿಕಾರಕ್ಕೆ ದಬ್ಬಲ್ಪಟ್ಟ ಜನತಾ ಪಕ್ಷದವರೂ ದಿಗ್ಭ್ರಮೆಗೊಂಡಿದ್ದರು. ಪಟೇಲರ ಹಾಗೆ ತುಂಬಾ ಜನ ಜನತಾದವರು ಮೊದಲ ಸಲ ಮಂತ್ರಿಗಿರಿಯ ಸುಖ ಕಂಡಾಗ ಅದಕ್ಕೆ ಹೊಂದಿಕೊಳ್ಳಲೂ ಮುಜುಗರಿಸುತ್ತಿದ್ದ ದಿನಗಳು ಅವು. ಪಟೇಲರದು ಆಗ ಅಬಕಾರಿ ಖಾತೆ. ಲಿಕ್ಕರ್ ಕುಳ ಒಬ್ಬರು ಸೌಹಾರ್ದ ಭೇಟಿ ನೀಡಲು ಬಂದರು. ಬಂದವರು ಸೌಹಾರ್ದಯುತವಾಗಿಯೇ, ಜೊತೆಗೆ ತಂದಿದ್ದ ಸೂಟ್‌ಕೇಸನ್ನು ಜಾಣ ಮರೆವಿಂದ ಬಿಟ್ಟು ಹೋದರು. ತೆಗೆದು ನೋಡಿದರೆ ಅದರ ತುಂಬಾ ನೋಟುಗಳು. ಇವರಿಗೆ ಫಜೀತಿ. ಆಪ್ತರೊಬ್ಬರನ್ನು ಕರೆಸಿ, ಇದನ್ನು ಹಿಂದಿರುಗಿಸಬೇಕು ಎಂದು ಕೂಗಾಡುತ್ತಿದ್ದಾಗ 'ನೀವು ವಾಪಾಸು ಕಳಿಸಿದರೆ ಅವನು ಗಡ್ಡದೋನ ಹತ್ತಿರ ನೇರವಾಗಿ ಹೋಗತಾನೆ. ಏನು ಬಂದ ಹಾಗಾಯ್ತು! ಸುಮ್ಮನೆ 'ಒಳಗಿಟ್ಟುಕೊಳ್ಳಿ' ಎಂದು ಆ ಆಪ್ತರು ಸಲಹೆ ಮಾಡಿದರು. ಆಗಲೂ ಜನತಾದವರಿಗೆ ಹೆಗಡೆ ಬಗ್ಗೆ ಗೌರವವೇನೂ ಇರಲಿಲ್ಲ.

ಆಗಲೂ, ಈಗಲೂ ಅವರು ಹೆಗಡೆ ಬಗ್ಗೆ ಮಾತಾಡೋದು 'ಗಡ್ಡಂದೇನು' ಅಂತಲೇ.

ಅದೇ ಪಟೇಲರು 1989ರಲ್ಲಿ ಕಾಂಗ್ರೆಸ್ ಅಧಿಕಾರಕ್ಕೆ ಬಂದಾಗ ಮತ್ತೆ ಯಥಾಸ್ಥಿತಿ. ಚನ್ನಗಿರಿಯಲ್ಲಿ ಹಾಲಪ್ಪನವರ ವಿರುದ್ಧ ಸೋತಿದ್ದರು. ಬೆಂಗಳೂರಲ್ಲಿ ಇರಲು ಮನೆ ಇರಲಿಲ್ಲ. ಬಾಡಿಗೆ ಕೊಟ್ಟು ಒಳ್ಳೆಯ ಮನೆ ಪಡೆಯುವಷ್ಟು ಹಣದ ವಹಿವಾಟೂ ಅವರದಲ್ಲ. ಅಂಥ ಕಾಲಕ್ಕೆ ಮದ್ಯದ ಕುಳ ಒಬ್ಬರು ಡಾಲರ್ ಕಾಲನಿಯಲ್ಲಿ ಕಟ್ಟಿಸಿಕೊಟ್ಟ ಮನೆಗೆ 'ಪುಣ್ಯ' ಎಂದೇ ಹೆಸರಿಟ್ಟು ಒಳಗೆ ಸೇರಿಕೊಂಡರು.

ಒಮ್ಮೆ ಅಧಿಕಾರದ ಗದ್ದುಗೆ ಏರಿ ರುಚಿಕಂಡು ಇಲ್ಲವಾಗಿಸಿಕೊಂಡ ಮೇಲೆ ತಾವು ಪ್ರಾಕ್ಟಿಕಲ್ ಅಲ್ಲ ಎಂಬ ಭಾವನೆ ಅವರಿಗೆ ಬಂದಿರಬೇಕು. ಹೀಗಾಗಿಯೇ ಅವರು ನಿಧಾನ ಬಿಸಿನೆಸ್‌ನಲ್ಲಿ ಹೊರಳಿಕೊಂಡಿದ್ದರು. ದಾವಣಗೆರೆಯ ಲಿಕ್ಕರ್ ಬಿಸಿನೆಸ್‌ನಲ್ಲಿ ಮಕ್ಕಳ ಹೆಸರಲ್ಲಿ ಲೈಸೆನ್ಸ್ ಪಡೆದುಕೊಂಡಿದ್ದರು. ಆದರೆ ಇದ್ಯಾವದೂ ಒಂದು ರಾಜಕೀಯ ಸಂಘಟನೆಯ ಮುಖ್ಯಸ್ಥನೊಬ್ಬನಿಗೆ ಏನೇನೋ ಸಾಲದಂಥ ಚಿಕ್ಕ ವ್ಯವಹಾರ. ಇಂಥ ವ್ಯವಹಾರದ ಹಾದಿಯಲ್ಲಿ ಅವರನ್ನು ನಡೆಸಿದವರು ಕಾಂಗ್ರೆಸ್ಸಿನ ಶ್ಯಾಮನೂರು. ಮರಳಿ 1994ರಲ್ಲಿ ಜನತಾ ಅಧಿಕಾರಕ್ಕೆ ಬಂದಾಗ ಉಪಮುಖ್ಯಮಂತ್ರಿ ಹುದ್ದೆ ಪಟ್ಟು ಹಿಡಿದು ಪಡೆದುಕೊಂಡರು. ದೇವೇಗೌಡರು ರಾಷ್ಟ್ರೀಯ ರಾಜಕೀಯಕ್ಕೆ ಜಿಗಿದಾಗ ಮತ್ತೆ ಅದೇ ಹಟ ಹಿಡಿದು ಮುಖ್ಯಮಂತ್ರಿಯೂ ಆದರು. ಅಲ್ಲಿಂದ ಶುರುವಾಯಿತು ಅವರ ನಿಜವಾದ ಇನ್ನಿಂಗ್ಸ್. 'ಮುಖ್ಯಮಂತ್ರಿಯಾಗಿ ಏನು ಮಾಡಬೇಕು ಎಂಬ ಕನಸೇನೂ ನನಗಿಲ್ಲ. ನನಗೊಂದು ವಿಷನ್ ಇದೆ. ಕನಸಲ್ಲ' ಎಂದು ನಮ್ಮೆದುರೇ ಸಂದರ್ಶನದಲ್ಲಿ ಹೇಳಿಕೊಂಡಿದ್ದರು. ಅವರ ವಿಷನ್ ಇದ್ದುದು ಶಾಲೆ, ರಸ್ತೆ, ಕುಡಿಯುವ ನೀರು, ನೀರಾವರಿ. ಅದಕ್ಕೆ ಸಾಕಷ್ಟು ಆದ್ಯತೆ ನೀಡಿದರೂ ಕೂಡ. ದೆಹಲಿಗೆ ಹೋದರೂ ಬೆಂಗಳೂರಿನ ಮೋಹ ಬಿಡದ ದೇವೇಗೌಡರು, ಅವರನ್ನು ಬಗ್ಗು ಬಡಿಯಲೆಂದೇ ಪಟೇಲರನ್ನು ದಾಳವಾಗಿ ಬಳಸುತ್ತಾ ಬಂದ ಹೆಗಡೆ ಪಟೇಲರನ್ನು ಹಣ್ಣಾಗಿಸಿದರು. ಅಪಾರ ಹಣ ಇರುವ ತರುಣನೊಬ್ಬ ಮನೆಯವರ ರೇಜಿಗೆಯಿಂದ ಬೇಸತ್ತು ಮದ್ಯ, ಮಾನಿನಿಯರ ಸಂಗದಲ್ಲಿ ಎಲ್ಲ ಮರೆಯಲು ಯತ್ನಿಸುವ ಹಾಗೆ ಪಟೇಲ್ ವರ್ತಿಸಿದರು.

ಮಲೇಷಿಯಾದ ಕೈಗಾರಿಕೋದ್ಯಮಿ ಕೊಟ್ಟಿದ್ದ ಗಡಿಯಾರದ ಬೆಲೆ ಹಲವು ಲಕ್ಷ ರೂಪಾಯಿ ಎಂದು ಪತ್ರಿಕೆಗಳು ವರದಿ ಮಾಡಿದ್ದನ್ನು ತಪ್ಪು ಎಂದು ಸಾಧಿಸಲು, ತುಂಬಿದ ಪತ್ರಿಕಾಗೋಷ್ಠಿಯಲ್ಲಿ 'ಕೆಲವೇ ಸಾವಿರ ರೂಪಾಯಿ ಕೊಡಿ ಸಾಕು ನಿಮಗಿದು ಕೊಟ್ಟು ಬಿಡ್ತೀನಿ' ಎನ್ನುವಷ್ಟು ಅವರು ಇನ್‌ಸೆನ್ಸಿಟೀವ್ ಆಗಿಬಿಟ್ಟರು. ಪ್ರಶ್ನೆ ಇದ್ದುದು ಗಡಿಯಾರದ ಮೌಲ್ಯದ್ದಲ್ಲ. ಅದನ್ನು ಉಡುಗೊರೆಯಾಗಿ ಪಡೆಯಬೇಕೇ? ಬೇಡವೇ? ಎಂಬ ಮೌಲ್ಯದ್ದು.

ಈಗ ಅವರ ಸೆಕೆಂಡ್ ಇನ್ನಿಂಗ್ಸೂ ಮುಗಿದಿದೆ. ಸ್ವಲ್ಪ ಅದೃಷ್ಟ, ಆರೋಗ್ಯ ಚೆನ್ನಾಗಿದ್ದಿದ್ದರೆ ಅವರು ಸಂಯುಕ್ತ ಜನತಾ ದಳದ ರಾಷ್ಟ್ರೀಯ ಅಧ್ಯಕ್ಷರಾಗಿ ಬಿಡುತ್ತಿದ್ದರು. ಈಗ ಅಲ್ಲಲ್ಲಿ ಭಾಷಣ ಮಾಡುತ್ತಾ, ತಮ್ಮ ಚಾಬು ಮಾತುಗಳಿಂದ ಒಂದಿಷ್ಟು ಸುದ್ದಿಯಾಗುತ್ತಿದ್ದಾರೆ.

■ ಸುಹಾಸ

---

## ಅದ್ಭುತ ಸಾಹಸ

ನೆಪೋಲಿಯನ್ ಎಲ್ಬಾ ಬಿಟ್ಟು ಪಾರಿಕ್ಲದತ್ತ ಸಾಗುತ್ತಿದ್ದಾಗ ಅವನ ಒಬ್ಬ ಸೇನಾಪತಿ 'ಮರಚೀರಾ' 6000 ಸೈನಿಕರೊಂದಿಗೆ ಅವನ ದಾರಿ ತಡೆದ. ಆತ ನೆಪೋಲಿಯನನ್ನು ಮುಗಿಸಿ ಬಿಡುವ ಹವಣಿಕೆಯಲ್ಲಿದ್ದ. ನೆಪೋಲಿಯನ್‌ನ ಬಳಿಯೂ ಸೈನ್ಯವಿತ್ತು. ಅಷ್ಟು ಸುಲಭವಾಗಿ ಅವನೇನೂ ಸೋಲುತ್ತಿರಲಿಲ್ಲ. ಆದರೆ ಆತ ತನ್ನ ದೇಶವಾಸಿಗಳ ರಕ್ತ ಹರಿಸಲು ಬಯಸಲಿಲ್ಲ.

ತನ್ನ ಸೈನ್ಯ ತೊರೆದು ಕುದುರೆಯನ್ನೇರಿ ನೆಪೋಲಿಯನ್ ಒಂಟಿಯಾಗಿಯೇ ಶತ್ರುಸೇನೆಯ ಬಳಿ ಸಾಗಿದ. ಜನ ಬೆಕ್ಕಸಬೆರಗಾಗಿ ನೋಡುತ್ತಿದ್ದರು. ನೆಪೋಲಿಯನ್ ಶತ್ರು ಸೇನೆಯ ಹತ್ತಿರ ಬಂದು ತನ್ನ ಕುದುರೆಯಿಂದಲೂ ಕೆಳಗಿಳಿದ. ಮತ್ತು ಕಾಲ್ನಡಿಗೆಯಿಂದಲೇ ಸಾಗಿ ಅದರ ಎದುರು ನಿಂತ.

ಶತ್ರು ಸೇನಾಪತಿ ನೆಪೋಲಿಯನನಿಗೆ ಗುಂಡಿಕ್ಕುವಂತೆ ಆಜ್ಞಾಪಿಸಿದ. ಒಂದು ಬೆರಳು ಅಲುಗಾಡಿದ್ದರೆ ಫ್ರಾನ್ಸಿನ ಭಾಗ್ಯವೇ ಬದಲಾಗುತ್ತಿತ್ತು. ಆದರೆ ಯಾವ ಬೆರಳೂ ಅಲ್ಲಾಡಲಿಲ್ಲ. ಸೈನಿಕರು ಸೇನಾಪತಿಯ ಆಜ್ಞೆಯನ್ನು ಪೂರ್ತಿಯಾಗಿ ಕಡೆಗಣಿಸಿದರು.

ಈಗ ನೆಪೋಲಿಯನ್ ಗಂಭೀರ ಸ್ವರದಲ್ಲಿ - 'ಸೈನಿಕರೆ,... ನಿಮ್ಮಲ್ಲಿ ಯಾರಾದರೂ ನಿಮ್ಮ ಸಾಮ್ರಾಟನನ್ನು ಕೊಲೆಗೈಯಬಯಸಿದರೆ ಅವರು ಸಂತೋಷದಿಂದ ತಮ್ಮ ಇಚ್ಛೆಯನ್ನು ಈಡೇರಿಸಿಕೊಳ್ಳಬಹುದು. ನಾನು ನಿಮ್ಮೆದುರು ನಿಂತಿರುವೆ' ಎಂದ.

ಯಾರೂ ಮಾತಾಡಲಿಲ್ಲ. ಸೈನಿಕರು ಒಬ್ಬೊಬ್ಬರಾಗಿ ತಮ್ಮ ಬಂದೂಕನ್ನು ಕೆಳ ಹಾಕಿದರು. ಇಡೀ ಸೈನ್ಯ ಸ್ವತಃ ನಿರಾಯುಧವಾಯಿತು.

'ಸಾಮ್ರಾಟ್ ನೆಪೋಲಿಯನ್‌ಗೆ ಜಯವಾಗಲಿ!' ಎಂಬ ಘೋಷ ಮೊಳಗಿತು.

ಸಂಗ್ರಹ : 'ಅಡಿಗ'

## ಯಶದ ಗುಟ್ಟು

ಹಾಲಿವುಡ್ ತಯಾರಿಸಿದ ಅತ್ಯಂತ ಯಶಸ್ವಿ ಚಲನಚಿತ್ರಗಳಲ್ಲಿ ಒಂದಾದ 'ದಿ ಸೆವೆನ್ ಇಯರ್ ಇಚ್'ನ ಚಿತ್ರೀಕರಣವು ನಡೆದಿತ್ತು. ಉತ್ಕಟ ಪ್ರೇಮದ ಆ ಚಿತ್ರದ ನಾಯಕಿ ಮರ್ಲಿನ್‌ನ ಮನ್ರೋ ಬಿಡು ಬೀಸಾಗಿ ನಟಿಸಿದರೆ ನಾಯಕ ಟಾಂ ಎವೆಲ್ ಅದೇಕೋ ಮುದುರಿಕೊಳ್ಳುತ್ತಿದ್ದ. ಒಂದು ದಿನ ಅವರು ಏಕಾಂತದಲ್ಲಿ ಸರಸ ಪ್ರಸಂಗವೊಂದರ ರಿಹರ್ಸಲ್ ನಡೆಸುತ್ತಿದ್ದಾಗ ಮೈಮರೆತರು. ಉರುಳಾಡಿದರು. ಏನೇನೋ ಆಗಿ ಹೋಯಿತು. ಮೇಲೆದ್ದು ಸಾವರಿಸಿಕೊಂಡ ನಾಯಕ ನಾಚುತ್ತಾ 'ಇಂಥದು ಹಿಂದೆ ಎಂದೂ ನಡೆದಿರಲಿಲ್ಲ' ಎಂದ. ಆದರೆ ನಾಯಕಿ ಏನೂ ಆಗದಿರುವಂತೆ 'ಇಂಥದು ನನ್ನ ಜೀವನದಲ್ಲಿ ಅದೆಷ್ಟು ನಡೆದಿವೆಯೋ?' ಎಂದಳು. ಆಗಿನಿಂದ ನಾಯಕನ ಕೀಳರಿಮೆ ತೊಲಗಿ ಆತ ಸಂಕೋಚವಿಲ್ಲದೆ ಅಭಿನಯಿಸಿ ಚಿತ್ರದ ಯಶಸ್ಸಿಗೆ ಇಂಬು ನೀಡಿದನಂತೆ.

ಸಂಗ್ರಹ : ಕೆ. ವೆಂಕಣ್ಣಾಚಾರ್

## ಜುಲ್ಮಾನೆ - ಮನರಂಜನಾ ತೆರಿಗೆ

''ನೀನು ಎಲ್ಲರೆದುರಿಗೆ ಶ್ರೀನಿವಾಸರಾಯರಂಥ ಸಭ್ಯರನ್ನು ಹೊಡೆದ ತಪ್ಪಿಗೆ ನಿನಗೆ ಹತ್ತು ರೂಪಾಯಿ ಹತ್ತು ಪೈಸೆ ಜುಲ್ಮಾನೆ ವಿಧಿಸಲಾಗಿದೆ'' ಎಂದರು ಜಡ್ಜರು. ಅದಕ್ಕೆ ಅಪರಾಧಿ 'ಮಹಾಸ್ವಾಮಿ! ನನ್ನ ತಪ್ಪಿಗೆ ತಾವು ವಿಧಿಸಿರುವ ಹತ್ತು ರೂಪಾಯಿ ಜುಲ್ಮಾನೆ ಸರಿಯಾಗಿದೆ. ಆದರೆ ಹತ್ತು ಪೈಸೆ ಏಕೆ ಕೊಡಬೇಕು ಎಂಬುದು ಅರ್ಥವಾಗುತ್ತಿಲ್ಲ. ಮಹಾಸ್ವಾಮಿಯವರೇ ದಯಮಾಡಿ ಈ ಬಗ್ಗೆ ತಿಳಿಸಬೇಕು ಎಂದು ತಮ್ಮಲ್ಲಿ ಪ್ರಾರ್ಥಿಸುತ್ತೇನೆ' ಎಂದ.

'ಹತ್ತು ಪೈಸೆ ಮನರಂಜನಾ ತೆರಿಗೆ' ಎಂದರು ಜಡ್ಜರು.

ಸಂಗ್ರಹ : ಶಾರದಾತನಯ



# ರಾಜ್ಯ ಕಾಂಗ್ರೆಸ್‌ನಲ್ಲಿ ಭಿನ್ನಮತ!

**ಇಂಥ ವಿಚಾರ ಕೇಳಿದರೇ ಜನ ನಗುತ್ತಾರೆ. ಭಿನ್ನಮತ ಇಲ್ಲದ ಕಾಂಗ್ರೆಸ್ಸನ್ನು ಕಲ್ಪಿಸಿಕೊಳ್ಳುವುದು ಕೂಡ ಕಷ್ಟ. ರಾಜ್ಯ ಕಾಂಗ್ರೆಸ್ ಸರ್ಕಾರಗಳಿಗೆ ಹುಟ್ಟಿನೊಡನೇ ಬರುವ ವ್ಯಾಧಿ ಅದು. ಗದ್ದುಗೆ ಏರಿದ ಜನ ಇದನ್ನು ನಿವಾರಿಸುವ ಬದಲು ಇನ್ನಷ್ಟು ಉಲ್ಬಣಗೊಳಿಸುತ್ತಾರೆ. ಇತಿಹಾಸ ಮರುಕಳಿಸುತ್ತಲೇ ಹೋಗುತ್ತದೆ. ಇತಿಹಾಸದಿಂದ ಕಾಂಗ್ರೆಸ್ ಪಾಠ ಕಲಿಯುವುದೇ ಇಲ್ಲ.**

ರಾಜ್ಯ ಕಾಂಗ್ರೆಸ್‌ನಲ್ಲಿ ಭಿನ್ನಮತ ಇದೆಯೇ? ಇದಕ್ಕೆ ನೀಡಬಹುದಾದ ಉತ್ತರ ಇಷ್ಟೇ. ಇದೆ ಎಂದರೆ ಇದೆ. ಇಲ್ಲ ಎಂದರೆ ಇಲ್ಲ. ನಾಲ್ಕೂವರೆ ವರ್ಷಗಳ ನಂತರ ಅಧಿಕಾರಕ್ಕೆ ಬಂದ ಕಾಂಗ್ರೆಸ್ ಪಾಠ ಕಲಿತಿರುತ್ತದೆ ಎಂಬ ನಂಬಿಕೆ ಈಗ ಸುಳ್ಳಾಗಿ ಕಾಣುತ್ತಿದೆ. ಅಧಿಕಾರದ ಹಮ್ಮು ಒಂದೆಡೆ. ಗದ್ದುಗೆ ಏರಿ ಕುಳಿತವರನ್ನು ವಿಶ್ವಾಸದಿಂದ ನಡೆಸಿಕೊಂಡು ಹೋಗಬಲ್ಲ ನಾಯಕ ಅವರಲ್ಲಿ ಇಲ್ಲ. ಇದೇ ತೊಂದರೆಗೆ ಕಾರಣ.

ಕೊಂಚ ಗಮನಿಸಿ. ಕೃಷ್ಣ ರಾಜ್ಯದ ಮುಖ್ಯಮಂತ್ರಿ. ಯಾವುದೇ ವಿಷಯಕ್ಕೂ ಅವರದೇ ಅಂತಿಮ ನಿರ್ಧಾರ. ಸಾಮಾನ್ಯವಾಗಿ ಮುಖ್ಯಮಂತ್ರಿ ಪಾಲಿಸಿ ಒಂದನ್ನು ಪ್ರಚುರಪಡಿಸುತ್ತಾರೆ. ಅದರ ಚೌಕಟ್ಟಿನಲ್ಲಿ ಮಂತ್ರಿಗಳು ಕೆಲಸ ನಡೆಸಿಕೊಂಡು ಹೋಗುತ್ತಾರೆ. ಈ ಪಾಲಿಸಿ ಮೀರಿ ನಡೆಯಬೇಕಾದಾಗ ಮುಖ್ಯಮಂತ್ರಿಗಳ ಜೊತೆ ಚರ್ಚಿಸಿ ನಿರ್ಧಾರ ಕೈಗೊಳ್ಳುತ್ತಾರೆ. ಅಂಥದ್ದು ಇಲ್ಲಿ ಆಗುತ್ತಿದೆಯೇ?

ಧರ್ಮಸಿಂಗ್ ಕಾಂಗ್ರೆಸ್ಸಿನ ಹಿರಿಯ ನಾಯಕರಲ್ಲೊಬ್ಬರು. ಅವರೀಗ ಲೋಕೋಪಯೋಗಿ ಮಂತ್ರಿ. ಕಾಂಗ್ರೆಸ್ ಅಧಿಕಾರಕ್ಕೆ ಬಂದು ಮೂರೂವರೆ ತಿಂಗಳೇ ಕಳೆಯುತ್ತಾ ಬಂದಿವೆ. ಒಂದೇ ಒಂದು ಸಲವೂ ಧರ್ಮಸಿಂಗ್ ಮುಖ್ಯಮಂತ್ರಿ ಜೊತೆ ಮಾತಾಡಿಲ್ಲ. ಸೌಜನ್ಯಕ್ಕಾದರೂ 'ಹಲೋ' ಎಂದಿಲ್ಲ. ಸಂಪುಟದ ಹಿರಿಯ ಸಚಿವರೊಬ್ಬರು ಮುಖ್ಯಮಂತ್ರಿಯ ಜೊತೆ ಮಾತೇ ಆಡಿಲ್ಲ ಅಂದರೆ, ಅವರಿಗೆ ಯಾವುದೇ ಸಮಸ್ಯೆ ಇಲ್ಲವೆಂದೇ? ನಿತ್ಯ ನೂರೆಂಟು ತಕರಾರು. ಏನೆಲ್ಲ ಆಗಬೇಕಿದೆ. ಏನೇನೋ ಆಗಿಲ್ಲ ಅಥವಾ ಆಗಬಾರದ್ದೆಲ್ಲ ಆಗಿದೆ. ಆದರೂ ಧರ್ಮಸಿಂಗ್ ಮಾತಾಡಿಲ್ಲ ಅಂದರೆ ಅದರರ್ಥ ಏನು?

ಇನ್ನೂ ಹಲವು ವಿಷಯ ಇವೆ. ಮುಖ್ಯಮಂತ್ರಿಗಳು ಮಂಡ್ಯ ಜಿಲ್ಲೆಯವರು. ಅವರ ಜಿಲ್ಲೆಗೆ ಇಂತಿಂಥ ಎಂಜಿನಿಯರುಗಳು ಬೇಕು. ಅದನ್ನು ಅವರು ಪಟ್ಟಿ ಮಾಡಿ ಸಚಿವ ಧರ್ಮಸಿಂಗ್‌ಗೆ ಕಳಿಸಿದ್ದಾರೆ. ಅದರರ್ಥ ಇಷ್ಟೇ ''ಇವರನ್ನೆಲ್ಲ ಹೇಳಿದ ಜಾಗಕ್ಕೆ ವರ್ಗಾಮಾಡಿ''

'ಮುಖ್ಯ ಮಂತ್ರಿಯೇ ಎಲ್ಲ ಮಾಡೋದಾದರೆ ನಾನ್ಯಾಕೆ ಈ ಖಾತೆಯ ಮಂತ್ರಿ ಆಗಿ ಇರಬೇಕು. ಅವರೇ ಎಲ್ಲ ಮಾಡಿಕೊಳ್ಳಲಿ' ಆಪ್ತರ ಮುಂದೆ ಧರ್ಮಸಿಂಗ್ ಗೊಣಗುತ್ತಾರೆ. ಆದರೆ ಜಾಣತನದಿಂದ ಮುಖ್ಯಮಂತ್ರಿ ಕಳಿಸಿದ ಫೈಲನ್ನು ತೆಪ್ಪಗೆ ಅಡಿಗೆ ಸೇರಿಸಿ ಇಡುತ್ತಾರೆ. ಇಲ್ಲ ಅಂತಲೂ ಇಲ್ಲ, ಆಯಿತು ಅಂತಲೂ ಇಲ್ಲ. 'ಇಲ್ಲ' ಅಂತ ಟಿಪ್ಪಣಿ ಬರೆದು ಕಳಿಸಿದರೆ, ಮುಖ್ಯಮಂತ್ರಿ ತಮ್ಮ ಅಧಿಕಾರ ಚಲಾಯಿಸಿ ತಾವೇ ವರ್ಗಾವಣೆಗೆ ಆದೇಶಿಸಿ ಬಿಡುತ್ತಾರೆ. ಇದು ಬಲ್ಲ ಧರ್ಮಸಿಂಗ್ ಜಾಣ ಮೌನದಲ್ಲಿ ಇದ್ದುಬಿಟ್ಟಿದ್ದಾರೆ. ಇಬ್ಬರ ನಡುವೆ ಮಾತಿಲ್ಲ, ಕತೆಯಿಲ್ಲ. ಮೌನವೂ ಇಲ್ಲ, ಅದೇ ತಮಾಷೆ. ಇದನ್ನು ಭಿನ್ನಮತ ಎನ್ನುತ್ತೀರಾ ಅಥವಾ ಇನ್ನೇನಾದರೂ ಹೆಸರಿದೆಯೇ?

ಧರ್ಮಸಿಂಗ್‌ರ ಖಾಸಾ ಗೆಳೆಯರು ಖರ್ಗೆ. ತುಂಬಾ ಮಹತ್ವದ ಗೃಹ ಖಾತೆ ಸಚಿವರು. ಧರ್ಮಸಿಂಗ್ ಗೆಳೆಯರಾದರೂ ಪಾರ್ಟಿಯಲ್ಲಿ ಅನುಸರಿಸಬೇಕಾದ ಜಾಣತನ ಅವರು ಕಲಿತಿಲ್ಲ. ಮುಖ್ಯಮಂತ್ರಿ ಕೃಷ್ಣ ಆಯಕಟ್ಟಿನ ಪೊಲೀಸರನ್ನು ಬದಲಿಸಿಲು ಸಲಹೆ ಮಾಡಿದರು. ಇಂತಂಥವರು ಇಂತಿಂಥ ಕಡೆಗೆ ಬರಬೇಕು ಎಂದರು. 'ಆಗುವುದಿಲ್ಲ' ಎಂದು ಸಿಡಿದು ಬಿಟ್ಟರು ಖರ್ಗೆ. ಕೃಷ್ಣಗೆ ಬೇಕಾಗಿದ್ದು ಇದೇ. ತಮಗೆ ಬೇಕಾದವರನ್ನು ಬೇಕಾದ ಕಡೆ ಹಾಕಿ ಝುಮ್ಮಂತ ಕುಳಿತರು.

ಇಂಥ ಮುಖ್ಯಮಂತ್ರಿಯ ಜೊತೆ ಖರ್ಗೆ ಸೌಹಾರ್ದಯುತವಾಗಿಯೇ ಇದ್ದಾರೆ ಅಂದುಕೊಳ್ಳುವುದಾದರೆ ಅದು ಅವರವರ ವಿವೇಚನೆಗೆ ಬಿಟ್ಟ ವಿಷಯ.

ಇನ್ನು ಎಚ್.ಕೆ.ಪಾಟೀಲರು. ಜನತಾದಳ ಸರ್ಕಾರ ಇದ್ದಾಗ ಇವರು ಮೇಲ್ಮನೆಯಲ್ಲಿ ವಿರೋಧ ಪಕ್ಷದ ನಾಯಕರು. ಧರ್ಮಸಿಂಗ್ ಕಾಂಗ್ರೆಸ್ ಅಧ್ಯಕ್ಷರು. ಖರ್ಗೆ ವಿಧಾನ ಸಭೆಯಲ್ಲಿ ವಿರೋಧ ಪಕ್ಷದ ನಾಯಕರು. ಈ ಮೂವರು ನಾಯಕರನ್ನು ಕಾಂಗ್ರೆಸ್ಸಿಗರು, ಪತ್ರಕರ್ತರು 'ಸೆಟ್ ದೋಸೆ' ಎಂದು

ಗೇಲಿ ಮಾಡುತ್ತಿದ್ದರು. ಧರ್ಮಸಿಂಗ್ ಕೆಳಗಿಳಿದು ಬೇರೊಬ್ಬರು ಅಧ್ಯಕ್ಷರಾಗಬೇಕು ಎಂದಾಗ ಪಾಟೀಲರೇ ಆ ಸ್ಥಾನಕ್ಕೆ ಬರುತ್ತಾರೆ ಎಂಬ ವಾತಾವರಣವಿತ್ತು. ಚುನಾವಣೆ ಹತ್ತಿರವಿತ್ತು. 'ಕಾಂಗ್ರೆಸ್ ಕಚೇರಿ ನಡೆಸೋದಕ್ಕೆ ತಿಂಗಳಿಗೆ ಹತ್ತು ಲಕ್ಷ ಬೇಕು. ನಾನು ಎಲ್ಲಿಂದ ತರಲಿ? ಇನ್ನೊಬ್ಬರ ಮುಂದೆ ಹೋಗಿ ಕೈ ಚಾಚಲೇ?' ಎಂದು ಕೊಡವಿಕೊಂಡರು. ಆಗ ಚಿಗುರಿಕೊಂಡವರು


ಧರ್ಮಸಿಂಗ್

ಧರ್ಮಸಿಂಗ್ ಕಾಂಗ್ರೆಸ್ಸಿನ ಹಿರಿಯ ನಾಯಕರಲ್ಲೊಬ್ಬರು. ಅವರೀಗ ಲೊಕೋಪಯೋಗಿ ಮಂತ್ರಿ. ಕಾಂಗ್ರೆಸ್ ಅಧಿಕಾರಕ್ಕೆ ಬಂದು ಮೂರೂವರೆ ತಿಂಗಳೇ ಕಳೆಯುತ್ತಾ ಬಂದಿವೆ. ಒಂದೇ ಒಂದು ಸಲವೂ ಧರ್ಮಸಿಂಗ್ ಮುಖ್ಯಮಂತ್ರಿ ಜೊತೆ ಮಾತಾಡಿಲ್ಲ. ಸೌಜನ್ಯಕ್ಕಾದರೂ 'ಹಲೋ' ಎಂದಿಲ್ಲ.

ಕೃಷ್ಣ. ಯಾವಾಗ ಕೃಷ್ಣ ಕಾಂಗ್ರೆಸ್ ಗಾಡಿ ಏರುತ್ತಾರೆಂದು ತಿಳಿಯಿತೋ, ಪಾಟೀಲರು ಕೃಷ್ಣರಿಗೆ ತೀರಾ ಆಪ್ತರಾದರು. ಚುನಾವಣಾ ಟಿಕೆಟ್ ಹಂಚಿಕೆಯಲ್ಲೂ ಮಹತ್ವದ ಪಾತ್ರ ನಿರ್ವಹಿಸಿದರು. ಸಹಕಾರ ರಂಗದ ಮುತ್ಸದ್ದಿ ಎನಿಸಿಕೊಂಡ ಅವರಿಗೆ ತುಂಬಾ ಮಹತ್ವದ ಭಾರೀ ಮತ್ತು ಮಧ್ಯಮ ನೀರಾವರಿ ಖಾತೆ ಕೈಗೆ ಬಂತು.

ಈಗ ಅವರಿರುವುದು ಕ್ರೆಸೆಂಟ್ ರಸ್ತೆಯ ಮನೆಯಲ್ಲಿ. ಹಿಂದೆ ಇದೇ ಮನೆಯಲ್ಲಿ ಎಸ್.ಎಂ.ಕೃಷ್ಣ ಇದ್ದರು. ಆನಂತರ ಅದೇ ಮನೆಗೆ ಸಿದ್ದರಾಮಯ್ಯ ಬಂದರು. ಮೊಯ್ಲಿ ವಿರುದ್ಧ ಕೃಷ್ಣ ಭಿನ್ನಮತದ ಚಟುವಟಿಕೆ ಆರಂಭಿಸಿದ್ದು ಇದೇ ಮನೆಯಲ್ಲಿ. ಪಟೇಲರ ವಿರುದ್ಧ ಸಿದ್ದರಾಮಯ್ಯ ತೊಡೆತಟ್ಟಿ ನಿಂತಿದ್ದೂ ಇದೇ ಮನೆಯಲ್ಲಿ ಇದ್ದಾಗಲೇ. ಅಂದರೆ ಅವರಿರುವ ಮನೆಗೆ ಭಿನ್ನಮತದ ಕೇಂದ್ರವಾಗುವ ವಿಚಿತ್ರ ಪರಿಪಾಠ ಇದೆ ಎಂದಾಯಿತು. ಈಗ ಪಾಟೀಲರಿಗೆ ಮುಖ್ಯಮಂತ್ರಿ ಜೊತೆ ಮೊದಲಿನ ಆತ್ಮೀಯತೆ ಉಳಿದಿಲ್ಲ. ಇದು ಮೊದಲ ಚಿಗುರು, ಅದು ಬೆಳೆಯುತ್ತದೋ, ಇದ್ದಲ್ಲಿಯೇ ಮುರುಟುತ್ತದೆಯೋ ಎಂಬುದನ್ನು ಕಾಂಗ್ರೆಸ್ ಇತಿಹಾಸ ಬಲ್ಲ ಜಾಣರೇ ಹೇಳಬೇಕು.

ಇದೆಲ್ಲ ಮುಖ್ಯರೆನಿಸಿಕೊಂಡವರ ಮಾತಾಯಿತು. ಸಂಪುಟದ ಅಮುಖ್ಯರ ಬಗ್ಗೆ ಬರೋಣ. ಹಾಗೆ ನೋಡಿದರೆ ಸಂಪುಟದ ಯಾರು ಅಮುಖ್ಯ ಆಗೋದಿಲ್ಲ. ಹಿಂದಿನ ಕಾಂಗ್ರೆಸ್ ಸರ್ಕಾರದಲ್ಲಿ ಕೆ.ಎನ್.ನಾಗೇಗೌಡ ಮಂತ್ರಿ. ಅವರ ಖಾತೆ ಯಾರೂ ಅಷ್ಟಾಗಿ ಇಷ್ಟಪಡದ ಪಶು ಸಂಗೋಪನಾ ಖಾತೆ. ರಾಜ್ಯ ಸಚಿವರ ಸ್ಥಾನ. ಅವರು ಎಷ್ಟು ಸುದ್ದಿ ಮಾಡಿದರು. ಗದ್ದಲ ಮಾಡಿದರು ಎನ್ನುವುದು ಈಗ ಇತಿಹಾಸ. ಸಚಿವನೊಬ್ಬ ಮನಸ್ಸು ಮಾಡಿದರೆ ಯಾವುದೇ ಖಾತೇಲಿ ಏನೆಲ್ಲ ಮಾಡಬಹುದು ಎನ್ನುವುದಕ್ಕೆ ಇದೊಂದು ಮಾದರಿಕೂಡ. ಹಾಗಾಗಿ ಅಮುಖ್ಯ ಅನ್ನುವುದು ಖಾತೆಯ ವಿಷಯಕ್ಕೆ ಅಲ್ಲ. ಅವರವರ ವರ್ತನೆಗೆ ವ್ಯಕ್ತಿತ್ವಕ್ಕೆ ಸಂಬಂಧಿಸಿದ್ದು. ಇಂಥ ಅಮುಖ್ಯರು ಅನ್ನಬಹುದಾದ ಜನ ಈಗಿನ ಸಂಪುಟದಲ್ಲಿ ದಂಡಿಯಾಗಿ ಸಿಗುತ್ತಾರೆ. ಸರ್ಕಾರದ ಕಾರು, ವಿಧಾನ ಸೌಧದಲ್ಲಿ ಒಂದು ಚೇಂಬರು. ಊರಲ್ಲಿ ಒಂದಿಷ್ಟು ಮರ್ಯಾದೆ ಬಿಟ್ಟರೆ ಇಂಥವರನ್ನು ಸಚಿವರು ಅಂತ ಗುರುತಿಸೋ ಬೇರೆ ಲಕ್ಷಣ ಅಷ್ಟಾಗಿ ಕಾಣೋಲ್ಲ.

ಕೊಡಗು ಜಿಲ್ಲೆಯಿಂದ ಮೂವರು ಸಚಿವರಿದ್ದಾರೆ. ಎಂ.ಎಂ. ನಾಣಯ್ಯ ಅಬಕಾರಿಗೆ, ಸುಮಾ ವಸಂತ್ ಯೋಜನೆ ಮತ್ತು ಸಾಂಖ್ಯಿಕ ಹಣಕಾಸು ಹಾಗೂ ಟಿ.ಜಾನ್ ಮೂಲಭೂತ ಸವಲತ್ತು ಹಾಗೂ ನಾಗರಿಕ ವಿಮಾನಯಾನ ಖ ರಾಜ್ಯ ಸಚಿವರುಗಳು. ಕೊಡಗು ಜ್ವಾಲಾಮುಖಿಯ ಮೇಲೆ ಕುಳಿತ ಜ ಯಾವ ಕ್ಷಣಕ್ಕೆ ಸ್ಫೋಟಗೊಳ್ಳುತ್ತದೋ ತಿಳಿಯದು. ಇಂಥ ಒಳಕು ಜಿಲ್ಲೆಗಾದ ಅನ್ಯಾಯ ಕಾರಣ. ಇಷ್ಟು ದಿನ ಆಗಿದೆ ಸರಿಯಾದ ರಸ್ತೆ ಇ ಜಿಲ್ಲಾ ಕೇಂದ್ರವಾದ ಮಡಿಕೇರಿಗೆ ಇವತ್ತಿಗೂ ಸರಿಯಾದ ಕುಡಿಯುವ ನಿ ಸವಲತ್ತಿಲ್ಲ. ಒಂದು ಒಳ್ಳೇ ಎಂಜಿನಿಯರಿಂಗ್ ಕಾಲೇಜು ಇಲ್ಲ. ಇದ್ಯಾವುದ ಈ ನಮ್ಮ ನೂತನ ಸಚಿವರನ್ನು ಬಾಧಿಸೋದೇ ಇಲ್ಲ. ಆಪ್ತರು ಊರ ಕ ಹೇಳಿಕೊಳ್ಳೋಕ್ಕೆ ಹೋದರೆ, ಸಚಿವರುಗಳು ಅವರೆದುರೇ ತಮ್ಮ ಗೋ ಹೇಳಿಕೊಳ್ಳಲು ಶುರುವಿಟ್ಟುಕೊಳ್ಳುತ್ತಾರೆ.

ಅಬಕರಿ ಸಚಿವ ನಾಣಯ್ಯನವರಿಗೆ ತಮ್ಮ ಕೈ ಕಟ್ಟಿ ಹಾಕಿದ ಚಿಂತೆ, 'ಒಂ ವೈನ್ ಸ್ಟೋರು, ಬಾರ್ ಲೈಸನ್ಸ್ ಕೂಡ ನಾನು ಕೊಡೋ ಹಾಗಿಲ್ಲಾರೀ. ಸಂಪತ್ತಿಗೆ ನಾನ್ಯಾಕೆ ಮಂತ್ರಿಯಾಗಿರಬೇಕು' ಎಂದು ಬಂದವರ ಮೇ ಗುಡುಗುತ್ತಾರೆ. ಸುಮಾ ವಸಂತ್ ಗಂತೂ ತಮ್ಮ ವೀರರಾಜೇಂದ್ರ ಪೇಟೆಯ ಸಾಮ್ರಾಜ್ಯವೇ ಮುಖ್ಯ.

'ನಿಮ್ಮ ಊರಿಗೆ ಹೋಗೋ ರಸ್ತೆ ಕೆಟ್ಟು ಕುಲಗೆಟ್ಟಿದೆ. ಅದು ಅಂತರರಾಜ್ಯ ರಸ್ತೆ. ಎಡಿಬಿ ಕೊಟ್ಟ ದುಡ್ಡಲ್ಲಿ ಕೆಲಸ ಆಗಿಲ್ಲ. ತಿಪ್ಪೆ ಸಾರಿಸಿ ದುಡ್ಡು ನುಂಗಿ ಹಾಕಿದ್ದಾರೆ. ಏನೂ ಮಾಡೋದಿಲ್ಲವೇ?' ಅಂದರೆ

'ಆ ವಿಷಯ ಕಿವಿಗೆ ಬಿದ್ದಿದೆ. ನಾನು ಸಂಬಂಧಿಸಿದವರಿಗೆ ಕ್ರಮ ತಗೋಳ್ಳೋಕ್ಕೆ ಹೇಳ್ತೀನಿ..' ಎಂದು ಸುಮ್ಮನಾಗುತ್ತಾರೆ. ಇದು ಅವರಿಗಿರುವ ಕಾಳಜಿಯ ಕೊರತೆಯೇ! ತನಗೊಂದು ದೊಡ್ಡ ಹುದ್ದೆ ಸಿಗಲಿಲ್ಲ ಎಂಬ ಅಸಮಾಧಾನವೋ! ಯಾರು ಹೇಳಬೇಕು!

ಇನ್ನು ಜಾನ್ ಮಹಾಶಯರು ಪ್ರತಿ ಜಿಲ್ಲೆಗೂ ಒಂದು ವಿಮಾನ ನಿಲ್ದಾಣ ಕಟ್ಟಿಸುವ ಕಾರ್ಯಕ್ರಮ ಘೋಷಿಸಿದರು. ಇದು ಸಾಧ್ಯವೇ? ಸಾಧುವೇ? ಎಂಬ ವಿವೇಕವೂ ಈ ಮನುಷ್ಯನಿಗಿಲ್ಲ. ಬೆಂಗಳೂರಲ್ಲಿ ಈಚೆಗೆ ನಗರದ ಮೂಲಭೂತ

ಈಗ ಪಾಟೀಲರಿರು ಕ್ರೆಸೆಂಟ್ ರ ಮನೆಯಲ್ಲಿ. ಹಿಂದೆ ಮನೆಯಲ್ಲಿ ಎಸ್.ಎಂ ಇದ್ದರು. ಆನಂತರ ಮನೆಗೆ ಸಿದ್ದರಾಮ ಬಂದರು. ಮೊಯ್ಲಿ ವಿ ಕೃಷ್ಣ ಭಿನ್ನಮತದ ಚಟು ಆರಂಭಿಸಿದ್ದು ಮನೆಯಲ್ಲಿ. ಪಟೆ ವಿರುದ್ಧ ಸಿದ್ಧರಾಮ ತೊಡೆತಟ್ಟಿ ನಿಂತಿದ್ದೂ ಮನೆಯಲ್ಲಿ ಇದ್ದಾಗ ಅಂದರೆ ಅವರಿರುವ ಮ ಭಿನ್ನಮತದ ಕೇಂದ್ರವಾ ವಿಚಿತ್ರ ಪರಿಪಾಠ


ಎಚ್.ಕೆ. ಪಾಟೀಲ್

ಸೌಲಭ್ಯ ಅಭಿವೃದ್ಧಿಗೆ ಒಂದ ಶೃಂಗ ಸಭೆ ನಡೆಯಿತು ಸಂಬಂಧಿಸಿದ ಖಾತೆಯ ಈ ಸಚಿವನಿಗೆ ಒಂದು ಆಹ್ವಾನವ ಹೋಗಲಿಲ್ಲ. ಆತ ಅತ್ತ ಕ ತಿರುಗಿ ಕೂಡ ನೋಡಲಿಲ್ಲ.

ಇಂಥವರು ಬೇಲಿ ಮೇ ಕುಳಿತ ಜನ. ನಾಳೆ ಕಿ ಹೊತ್ತುಕೊಂಡಾಗ ಲಾ ಆಗುವ ಕಡೆ ಥಟ್ಟ ಜಿಗಿಯುವವರು. ಭಿನ್ನಮತದ ಮನಸ್ಸು ಮಾಡಿದವರ ಮೊದಲು ಕಣ್ಣು ಹಾಕುವುದೆ

ಇಂಥವರ ಮೇಲೆ.

ಹಾಗೆ ಕಣ್ಣಿಡುವ ಕೆಲಸ ಈಗಾಗಲೇ ಆರಂಭವಾಗಿದೆ. ಇದರ ಕೇಂದ್ರ ಸರ್ಕಾರದ ಒಳಗೆ ಇರುವವರಲ್ಲ. ಹೊರಗೆ ಇರುವವರು. ಶಿವಮೊಗ್ಗದಿಂದ ಪಾರ್ಲಿಮೆಂಟ್‌ಗೆ ಆಯ್ಕೆ ಆಗಿರುವ ಮಾಜಿ ಮುಖ್ಯಮಂತ್ರಿ ಎಸ್. ಬಂಗಾರಪ್ಪ ಏನಾದರೂ ಮಾಡುತ್ತಲೇ ಇರುವುದು ಅವರ ಜಾಯಮಾನ. ಹಾಗೆ ಇಲ್ಲದೇ ಹೋದರೆ ರಾಜಕೀಯದಲ್ಲಿ ಮೂಲೆಗುಂಪಾಗಿಬಿಡುವ ಅಪಾಯ ಇದೆ.

ಇದೆಲ್ಲಕ್ಕಿಂತ ಹೆಚ್ಚಾಗಿ ಬಂಗಾರಪ್ಪನವರಿಗೆ ಕಾಂಗ್ರೆಸ್ ಜಾಯಮಾನ ಚೆನ್ನಾಗಿ ಗೊತ್ತು. ಪ್ರಮುಖ ಜನಾಂಗದವರು ರಾಜ್ಯದ ನಾಯಕರಾದಾಗಲ್ಲ ಭಿನ್ನಮತ ಕಟ್ಟಿಟ್ಟಿದ್ದು. ಒಕ್ಕಲಿಗರು ನಾಯಕರಾದರೆ ಲಿಂಗಾಯಿತರು ಒಂದಾಗಿ ಮೇಲೆ ಬೀಳುತ್ತಾರೆ. ಲಿಂಗಾಯಿತರು ನಾಯಕರಾದರೆ ಒಕ್ಕಲಿಗರು ಒಗ್ಗೂಡಿ ಬುಡ ಕಡಿಯಲು ಆರಂಭಿಸುತ್ತಾರೆ. ಈಗಿನ ಮುಖ್ಯಮಂತ್ರಿ ಒಕ್ಕಲಿಗ ಜನಾಂಗದವರು. ಹಳೇ ಮೈಸೂರಿಗರು. ಮಾಜಿ ಪ್ರಧಾನಿ ದೇವೇಗೌಡರಿಗೆ ಆಪ್ತರು. ಅವರು ಜಾಣತನದಿಂದಲೇ ತೀರಾ ಗಟ್ಟಿಯಾದ ಲಿಂಗಾಯತ ಕಾಂಗ್ರೆಸ್ಸಿಗರನ್ನು ಆಯ ಕಟ್ಟಿನ ಜಾಗಕ್ಕೆ ತಂದಿಲ್ಲ. ವಿಚಿತ್ರವೆಂದರೆ ಹಾಗೆ ಪ್ರಮುಖ ಎನ್ನಬಹುದಾದ ಲಿಂಗಾಯಿತರು ಎನ್ನುವವರು ಇಲ್ಲ ಎನ್ನುವುದೇ ದುರಂತ. ಆದರೆ ಮುಖ್ಯಮಂತ್ರಿ ಮನಸ್ಸು ಮಾಡಿದರೆ ಅದ್ಯಾವುದೂ ಅಡ್ಡಿ ಆಗೋದಿಲ್ಲ. ಅದು ಬೇರೆ ವಿಷಯ. ಆದರೆ ಜಾಣತನದಿಂದ ವರ್ತಿಸಲು ಯತ್ನಿಸುವ ನಾಯಕರು ಇಲ್ಲಿಯೇ ಎಡವಟ್ಟು ಮಾಡಿಕೊಳ್ಳುತ್ತಾರೆ.

ಆಗ ಲಾಬಿಗಳು ಕೆಲಸ ಶುರು ಮಾಡಿಕೊಳ್ಳುತ್ತವೆ. ಅಂಥ ಲಾಬಿಯೊಂದು ಈಗಾಗಲೇ ಚುರುಕಾಗಿದೆ. ಅದಕ್ಕೆ ಇಂಬು ನೀಡುತ್ತಾ ಇರುವವರು ಬಂಗಾರಪ್ಪ. ಒಳಗೊಳಗೇ ಕೆಲಸ ನಡೆಯುತ್ತಾ ಇದೆ. ನಾಳೆ ದಿನ ಇವರೆಲ್ಲ ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ಮುಂದೆ ಹೋಗಿ ಕೈಕಟ್ಟಿ ನಿಂತು 'ಇವರು ಪ್ರಯೋಜನ ಇಲ್ಲ ಮೇಡಂ. ಬದಲಾಯಿಸದೇ ಹೋದರೆ ನಿಮಗೆ ಕೆಟ್ಟ ಹೆಸರು' ಅನ್ನುತ್ತಾರೆ. ಅದಕ್ಕೆ ಮುಂಚೆ ತೀರ್ಥ, ಪ್ರಸಾದ ಎಲ್ಲೆಲ್ಲಿ ಮುಟ್ಟಿಸಬೇಕೋ ಅಲ್ಲಿಗೆಲ್ಲ ಪಾಂಗಿತವಾಗಿ ಈ ಲಾಬಿ ತಲುಪಿಸಿರುತ್ತದೆ. ಈಗ ಆ ನಿಟ್ಟಿನಲ್ಲಿ ಕೆಲಸವಂತೂ ಸಾಗಿದೆ.



ಮಲ್ಲಿಕಾರ್ಜುನ ಖರ್ಗೆ

**ಖರ್ಗೆ ತುಂಬಾ ಮಹತ್ವದ ಗೃಹ ಖಾತೆ ಸಚಿವರು. ಧರ್ಮಸಿಂಗ್ ಗೆಳೆಯರಾದರೂ ಪಾರ್ಟಿಯಲ್ಲಿ ಅನುಸರಿಸಬೇಕಾದ ಜಾಣತನ ಅವರು ಕಲಿತಿಲ್ಲ. ಮುಖ್ಯಮಂತ್ರಿ ಕೃಷ್ಣ ಆಯಕಟ್ಟಿನ ಪೊಲೀಸರನ್ನು ಬದಲಿಸಿಲು ಸಲಹೆ ಮಾಡಿದರು. ಇಂತಿಂಥವರು ಇಂತಿಂಥ ಕಡೆಗೆ ಬರಬೇಕು ಎಂದರು. 'ಆಗುವುದಿಲ್ಲ' ಎಂದು ಖರ್ಗೆ ಸಿಡಿದು ಬಿಟ್ಟರು**

ಹಾಗಾದರೆ ಕೃಷ್ಣರಿಗೆ ಅನ್ಯಾಯವಲ್ಲವೇ!

ರಾಜಕೀಯದಲ್ಲಿ ಕೆಲವು ಸ್ವಯಂ ಕೃತಾಪರಾಧಗಳು ಇರುತ್ತವೆ. ಮಕ್ಕಳನ್ನು ಮೇಲುಗಟ್ಟಿ ದೇವೇಗೌಡ ಹಾಳಾದರು. ವೈನು, ವುಮೆನ್ ಅಂದುಕೊಂಡು ಪಟೇಲರು ಮನೆ ಸೇರಿದರು. ಯಾವುದೇ ರಾಜಕೀಯ ವ್ಯಕ್ತಿ ತೀರಾ ಪ್ರಾಮಾಣಿಕವಾಗಿ ಇರೋಕ್ಕೆ ಸಾಧ್ಯವಿಲ್ಲ. ಆಡಳಿತ ಬಿಗಿ ಮಾಡಲು ಹೋದ ವೀರೇಂದ್ರ ಪಾಟೀಲರ ಗತಿ ಏನಾಯಿತು ಅಂತ ಎಲ್ಲರಿಗೂ ಗೊತ್ತು. ನಾಯಕನ ಭ್ರಷ್ಟತೆ, ಸ್ವಜನ ಪಕ್ಷಪಾತ, ನಿಷ್ಕ್ರಿಯತೆ ಎಲ್ಲದಕ್ಕೂ ಒಂದು ಮಾರ್ಜಿನ್ ಇರುತ್ತದೆ. ಪಕ್ಷ ನಡೆಸಬೇಕು. ನಾಳೆ ಮತ್ತೆ ಚುನಾವಣೆಗೆ ಒಂದಿಷ್ಟು ಹಣ ತೆಗೆದಿರಿಸಬೇಕು. ಇಂಥ ಹಲವು ಹತ್ತು ಸಂಗತಿಗಳಲ್ಲಿ ಜನ, ಪಕ್ಷದವರು ರಿಯಾಯಿತಿ ತೋರಿಸುತ್ತಾರೆ. ಅದು ಮಿತಿಮೀರಿದಾಗ ಕಷ್ಟ.

ಕೃಷ್ಣ ತಮ್ಮದೊಂದು ಗುಂಪು ಕಟ್ಟಿಕೊಂಡಿದ್ದಾರೆ. ಅಲ್ಲೇ ಅಧಿಕಾರ, ದುಡ್ಡು ಎಲ್ಲ ಕೇಂದ್ರೀಕೃತವಾಗಿ ನಿಂತಿದೆ. ಆಪ್ತರನಿಸಿಕೊಂಡವರ ಮಾತಿಗೆ ಮಾತ್ರ ಕಿವಿಗೊಟ್ಟು ಕುಳಿತಿರುವ ಅವರಿಗೆ, ಬೇರೆಯವರ ಮಾತು ಅಪಥ್ಯ. 'ಕಾಂಗ್ರೆಸ್ ಕಾರ್ಯಕರ್ತರು ಮನೆ ಬಾಗಿಲಿಗೆ ಹೋಗಿ 'ಎಸ್ಸಾರ್! ನಾವು ಇಷ್ಟೆಲ್ಲ ದುಡಿದಿವಿ. ನಮಗೊಂದು ಪೊಸಿಷನ್ ಕೊಡೋದಿಲ್ಲವಾ?' ಎಂದು ವಿನಂತಿಸಿ ಕೊಂಡರೆ 'ಯಾರಯ್ಯ ನಿನಗೆ ಬರೋಕ್ಕೆ ಹೇಳಿದ್ದು! ನನಗೆ ಗೊತ್ತಿಲ್ಲವಾ ಯಾರಿಗೆ ಏನು ಮಾಡಬೇಕು ಅಂತ. ಹೋಗ್ ಹೋಗ್' ಎಂದು ಗದರಿಬಿಡುತ್ತಾರೆ.

ಸಂಪುಟದಲ್ಲಿ ವೈರತ್ವ ಕಟ್ಟಿಕೊಂಡ ಕೃಷ್ಣ ಪಕ್ಷದವರೊಂದಿಗೆ ಹೀಗೆ ವರ್ತಿಸಿದರೆ ನಾಳೆ ಒಳ್ಳೆಯದಾದೀತೇ! ಇಷ್ಟು ಸಾಕಲ್ಲವೇ ಅವರ ಕುರ್ಚಿ ಅಲುಗಾಡಿಸಲು ಕಾರಣ.

ಅಂಥ ಅಲುಗಾಡಿಸಿ ನೋಡುವ ಕೆಲಸ ಈಗಂತೂ ಆರಂಭವಾಗಿದೆ.

■ ಸುಹಾಸ

# ಸ್ತನ ಕ್ಯಾನ್ಸರ್

ಮಾರ್ಚ್ ಎಂಟರಂದು ಅಂತಾರಾಷ್ಟ್ರೀಯ ಮಹಿಳಾ ದಿನ.
ಈ ಸಂದರ್ಭಕ್ಕೆ ವಿಶೇಷ ಲೇಖನ.

**ಕ್ಯಾನ್ಸರ್ ಎಂಬ ಪದವೇ ವಜ್ರಾಘಾತ ಮಾಡುವಂಥದ್ದು. ಈಚಿನ ದಿನಗಳಲ್ಲಿ ಮಹಿಳೆಯರು ಕಂಗೆಡುವಷ್ಟು ಸ್ತನದ ಕ್ಯಾನ್ಸರ್ ಪ್ರಸ್ತಾಪವಾಗುತ್ತಿದೆ. ನಮ್ಮಲ್ಲಿ ವೈದ್ಯಕೀಯ ಪರಿಜ್ಞಾನದ ಕೊರತೆ ಜಾಸ್ತಿ. ಹೆಂಗಸರಿಗಂತೂ ನಾಚಿಕೆಯ ಸಂಕೋಲೆ ಬೇರೆ. ಹೀಗಾಗಿಯೇ ಸ್ತನದ ಕ್ಯಾನ್ಸರ್‌ನಿಂದಾಗುವ ಸಾವಿನ ಪ್ರಮಾಣ ಜಾಸ್ತಿ ಆಗುತ್ತಿದೆ.**

**ಒಂದಿಷ್ಟು ತಿಳುವಳಿಕೆ, ಆಕೆ ಅನುಸರಿಸಬೇಕಾದ ಕ್ರಮ, ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಮೂಡಿಸಲು ಸಾಧ್ಯ ಆದಲ್ಲಿ, ಸ್ತನದ ಕ್ಯಾನ್ಸರ್ ಅಂಥ ಮಾರಕ ರೋಗ ಆಗಲಾರದು. ಅಂಥ ತಿಳುವಳಿಕೆ ಮೂಡಿಸುವ ಯತ್ನ ಈ ಲೇಖನ.**

ಸ್ತನದ ಕ್ಯಾನ್ಸರ್ ಪ್ರಮಾಣ ಹೆಚ್ಚೆಂದರೆ ಶೇಕಡಾ ಏಳು. ಇದು ಮುಂದುವರಿದ ಅಮೇರಿಕಾದಂಥ ದೇಶಗಳಲ್ಲಿ ಇರುವ ಗರಿಷ್ಠ ಪ್ರಮಾಣ. ಉಳಿದೆಡೆ ಇದು ತೀರಾ ಗೌಣ ಎನಿಸುವಷ್ಟು ಪ್ರಮಾಣದಲ್ಲಿ ಇದೆ. ಸ್ತನದ ಕ್ಯಾನ್ಸರ್ ಬರುವ ಸಾಧ್ಯತೆ ಸಾವಿರದಲ್ಲಿ ಒಬ್ಬ ಮಹಿಳೆಗೆ ಇರುತ್ತದೆ. ಸೂಕ್ತ ಮುನ್ನೆಚ್ಚರಿಕೆ ವಹಿಸಿದರೆ ಇದು ಮಾರಕ ಆಗದಂತೆ ತಡೆಯಬಹುದು. ತೀರಾ ಪ್ರಾಥಮಿಕ ಹಂತದಲ್ಲೇ ಗುರುತಿಸಿದರೆ ನಿವಾರಣೆ ಸಾಧ್ಯ. ಈ ಹಂತ ದಾಟಿದ್ದರೆ ಶಸ್ತ್ರ ಚಿಕಿತ್ಸೆ, ಕಿಮೋಥೆರಪಿ ಮುಂತಾದವುಗಳಿಂದ ನಿಯಂತ್ರಣ ಸಾಧ್ಯ.

ಸ್ತನದ ಕ್ಯಾನ್ಸರ್ ಸಾವಿಗೆ ದಾರಿಯಾದಾಗ ಅದು ಕೇವಲ ಒಬ್ಬ ಹೆಣ್ಣಿನ ಪ್ರಶ್ನೆ ಆಗುವುದಿಲ್ಲ. ಆಕೆಯನ್ನು ನೆಚ್ಚಿದ ಕುಟುಂಬ, ಮಕ್ಕಳು ತೀರಾ ದೊಡ್ಡ ಬೆಲೆ ತೆರಬೇಕಾಗುತ್ತದೆ. ಈ ಕಾರಣಕ್ಕಾದರೂ ಸ್ತನದ ಕ್ಯಾನ್ಸರ್ ಬಗ್ಗೆ ಹೆಚ್ಚಿನ ಕಾಳಜಿಯಿದ ವರ್ತಿಸಬೇಕಾದ ಅಗತ್ಯ ಇದೆ. ಅದಕ್ಕೆ ಮುಂಚೆ ಹಲವಾರು ವಿಷಯಗಳನ್ನು ಜನಸಾಮಾನ್ಯರು ತಿಳಿದಿರಬೇಕು. ತಮಗೆ ಏನಾಗಿದೆ? ತಮ್ಮ ರೋಗದ ಸ್ವರೂಪ ಏನು? ಅದರ ನಿವಾರಣೆಗೆ ದಾರಿ ಯಾವುದು? ಎಂದು ತಿಳಿಯದೇ ಇದ್ದಾಗ, ವೈದ್ಯರು ರೋಗ ಪತ್ತೆ ಹಚ್ಚಿ ಹೇಳಿದ ಗಳಿಗೆಯಲ್ಲಿಯೇ ಅರ್ಧ ಜೀವ ಹೋದಂತಾಗಿರುತ್ತದೆ. ರೋಗ ಎದುರಿಸುವ ಮಾನಸಿಕ ಸ್ಥೈರ್ಯವೇ ಇಲ್ಲವಾಗುತ್ತದೆ.



**ಸ್ತನಗಳು :** ಸ್ತನಗಳು ಹೆಣ್ಣಿನ ಸುಂದರ, ಅಷ್ಟೇ ಬಹು ಸಂಕೀರ್ಣ ಅಂಗ. ಆಕೆಗೆ ಸೌಂದರ್ಯದ, ತಾಯ್ತನದ ಕಲಶ. ಗಂಡಿನ ಪಾಲಿಗೆ ಕಾಮೋದ್ರೇಕದ ಒಂದು

ಕೇಂದ್ರ. ಮಗುವಿನ ಪಾಲಿಗೆ ಅಮೃತ ಕಲಶ.

ಹುಡುಗಿ ಋತುಮತಿಯಾಗುವ ಕಾಲಕ್ಕೆ ಮೂಡಲಾರಂಭಿಸುವ ಸ್ತನಗಳು ಕೆಲವೇ ತಿಂಗಳಲ್ಲಿ, ಕೆಲವರಲ್ಲಿ ವರ್ಷಗಳಲ್ಲಿ ಪೂರ್ಣ ಪ್ರಮಾಣಕ್ಕೆ ಬೆಳೆದು ನಿಲ್ಲುತ್ತವೆ. ಆಗಿಂದ ಅದು ಜೀವೋತ್ಪತ್ತಿಯ ಕ್ರಿಯೆಯಲ್ಲಿ ಸಕ್ರಿಯವಾಗುತ್ತದೆ. ಗರ್ಭಾಶಯಕ್ಕೂ, ಸ್ತನಗಳಿಗೂ ನೇರ ಸಂಪರ್ಕ ಇಲ್ಲವಾದರೂ, ಮಿದುಳಿನಿಂದ ಪ್ರೇರಿತವಾಗಿ ಸ್ತನ, ಗರ್ಭಾಶಯ, ಯೋನಿಗಳು ಸಂಕೀರ್ಣ ರಾಸಾಯನಿಕ ಕ್ರಿಯೆಗಳನ್ನು ನಡೆಸುತ್ತವೆ. ಹೆಣ್ಣಿನ ಗರ್ಭದಲ್ಲಿ ಬೀಜಾಂಕುರವಾದ ಗಳಿಗೆಯಿಂದ ಸ್ತನದೊಳಗೂ ಮಾರ್ಪಾಡು ಆಗುತ್ತವೆ. ಗಾತ್ರ ಬೆಳೆಯುತ್ತದೆ. ದುಗ್ಧ ನಾಳಗಳು ಬೆಳೆದು ಉದ್ದವಾಗುತ್ತವೆ. ಮಗು ಜನಿಸಿದ ಕ್ಷಣದಿಂದ ಅದಕ್ಕೆ ಜೀವ ಪೋಷಕ ದ್ರವವಾದ ಹಾಲು ಒದಗಿಸುವ ಕ್ರಿಯೆಗೆ ಚಾಲನೆ ದೊರೆಯುತ್ತದೆ. ಕೂಸು ಜನಿಸಿದ ಕ್ಷಣದಲ್ಲಿ ತಾಯ ಮೊಲೆಯಲ್ಲಿ ಒಸರುವ ಹಾಲು ಎಲ್ಲ ಬಗೆಯ ರೋಗ ನಿರೋಧಕ ಶಕ್ತಿ ಒಳಗೊಂಡಿರುತ್ತದೆ. ಮಗುವಿಗೆ ಹಸಿವಾದ ಗಳಿಗೆ ಮೊಲೆ ತೊಟ್ಟಿಗೆ ಅಂಟಿಕೊಂಡ ಚೀಲಕ್ಕೆ ದುಗ್ಧನಾಳಗಳು ಹಾಲು ತಂದು ಬಸಿಯುತ್ತವೆ. ಮಗು ಇನ್ನೊಂದು ಕೋಣೆಯಲ್ಲಿರಲಿ; ಅದರ ಸಣ್ಣದೊಂದು ಹಸಿವಿನ ಆಕ್ರಂದನ ಮಡಿಲಲ್ಲಿ ಮಲಗಿದ ಶಿಶುವಿನ ಸಣ್ಣದೊಂದು ಹಾತೊರಿಕೆ ಸಾಕು, ಮೊಲೆಯಲ್ಲಿ ಹಾಲು ಸ್ರವಿಸಲು. ಅದ್ಭುತ ವ್ಯವಸ್ಥೆಯೇ ಇದೆ ಇಲ್ಲಿ.



■ ಡಾ. ವಸುಂಧರಾ ಭೂಪತಿ

ಮಗುವಿಗೆ ಬೇಕೆನಿಸಿದಾಗ, ಬೇಕಾದಷ್ಟು ಹಾಲು ಒದಗಿಸುವ ಈ ಅಂಗ, ಅದೇ ಸಮಯಕ್ಕೆ ಬೇರೊಂದು ಕೆಲಸ ನಿರ್ವಹಿಸಬೇಕಾಗುತ್ತದೆ. ಗರ್ಭಾಶಯ ಮರಳಿ ಯಥಾಸ್ಥಿತಿಗೆ ಬರುತ್ತಾ, ಯೋನಿ ಆಕುಂಚನಗೊಳ್ಳುತ್ತಾ ಹೋದಂತೆ ಹಾಲು ಸ್ರವಿಸುವ ಸ್ತನಗಳ ಗಾತ್ರ ಕುಗ್ಗುವ ಕ್ರಿಯೆಯೂ ಜೊತೆಯಾಗಿ ನಡೆಯುತ್ತವೆ. ಏಕೆಂದರೆ ಸೃಷ್ಟಿಕ್ರಿಯೆ ನಿರಂತರ. ಹೆಣ್ಣಿನ ಗರ್ಭವಾಗಲೀ, ಸ್ತನಗಳಾಗಲಿ ಒಂದೇ ಒಂದು ಜೀವದ ಸೃಷ್ಟಿಗೆ ಶ್ರಮಿಸಿ ಸುಮ್ಮನಾಗುವುದಿಲ್ಲ. ಮತ್ತೊಂದು ತಾಯ್ತನಕ್ಕೆ ಅವು ಸಜ್ಜಾಗಬೇಕಾಗುತ್ತದೆ. ಇಂಥ ಸುಂದರ, ಅದ್ಭುತ ಅಂಗವೊಂದು ಕ್ಯಾನ್ಸರ್‌ನಂಥ ರೋಗಕ್ಕೆ ತುತ್ತಾಗುವುದೇ ಎಂಥ ಭೀಕರ ಸಂಗತಿ ಅಲ್ಲವೇ?

**ಯಾರಲ್ಲಿ ಸ್ತನದ ಕ್ಯಾನ್ಸರ್ ಸಾಧ್ಯತೆ ಹೆಚ್ಚು?**

ಅಮೇರಿಕಾದಲ್ಲಿ ಪ್ರತಿವರ್ಷ ಸುಮಾರು ಒಂದು ಲಕ್ಷ ಮಹಿಳೆಯರಲ್ಲಿ ಸ್ತನದ ಕ್ಯಾನ್ಸರ್ ಕಾಣಿಸಿಕೊಳ್ಳುತ್ತದೆ. ಅಲ್ಲಿ ಪ್ರತಿ ಹದಿನಾಲ್ಕು ಮಹಿಳೆಯರಲ್ಲಿ ಒಬ್ಬರಿಗೆ ಕ್ಯಾನ್ಸರ್ ಆಗುವ ಸಂಭವ ಇದೆ ಎಂದು ಅಂದಾಜು. ಏಷಿಯಾ ಮತ್ತು ಆಫ್ರಿಕಾದ ಮಹಿಳೆಯಲ್ಲಿ ಈ ಪ್ರಮಾಣ ಅಷ್ಟಿಲ್ಲ. ಭಾರತೀಯರಲ್ಲಿ ಸಾವಿರದಲ್ಲಿ ಒಬ್ಬ ಮಹಿಳೆಗೆ ಸ್ತನದ ಕ್ಯಾನ್ಸರ್ ಆಗುವ ಸಾಧ್ಯತೆ ಇದೆ. ನಮ್ಮಲ್ಲಿ ಪಾರ್ಸೀ ಮತ್ತು ಸಿಂಧೀ ಜನಾಂಗದ ಮಹಿಳೆಯರಲ್ಲಿ ಸ್ತನದ ಕ್ಯಾನ್ಸರ್ ಪ್ರಮಾಣ ಹೆಚ್ಚು ಎಂದು ಅಧ್ಯಯನ ತಿಳಿಸಿದೆ. ಮಹಿಳೆಯರನ್ನು ಹೆಚ್ಚಾಗಿ ಕಾಡುವುದು ಗರ್ಭಕೋಶದ ಕ್ಯಾನ್ಸರ್. ನಂತರದ ಸ್ಥಾನ ಸ್ತನದ ಕ್ಯಾನ್ಸರ್‌ನದ್ದು.

ಶ್ರೀಮಂತ ಸಮುದಾಯದಲ್ಲಿ ಸ್ತನದ ಕ್ಯಾನ್ಸರ್ ಪ್ರಮಾಣ ಹೆಚ್ಚು. ಕೊಬ್ಬಿನಂಶ ಜಾಸ್ತಿ ಇರುವ ಆಹಾರ ಸೇವನೆ ಒಂದು ಕಾರಣ. ದೇಹದೊಳಗಿನ ಜೈವಿಕ ಹಾರ್ಮೋನುಗಳ ಏರುಪೇರು ಕೂಡಾ ಕ್ಯಾನ್ಸರ್‌ಗೆ ಕಾರಣ. ತಾಯಿಯ ಸಹೋದರಿಯರಲ್ಲಿ ಅಥವಾ ಸೋದರ ಸಂಬಂಧಿಗಳಲ್ಲಿ ಸ್ತನದ ಕ್ಯಾನ್ಸರ್ ಕಂಡುಬಂದಲ್ಲಿ ಮುಂದಿನ ಪೀಳಿಗೆಯವರಲ್ಲಿ ಕ್ಯಾನ್ಸರ್ ಸಾಧ್ಯತೆ ಹೆಚ್ಚು. ಎರಡೂ ಸ್ತನಗಳಿಗೆ ಕ್ಯಾನ್ಸರ್ ಆದವರು, ಮುಟ್ಟು ನಿಲ್ಲುವ ಮುಂಚೆ ಕ್ಯಾನ್ಸರ್ ಬಂದವರ ಮುಂದಿನ ಪೀಳಿಗೆಯಲ್ಲಿ ಕ್ಯಾನ್ಸರ್ ಸಂಭವ ಹೆಚ್ಚು.

**ವಯಸ್ಸಿನ ಇತಿಮಿತಿ**

ಹನ್ನೊಂದು ವರ್ಷಕ್ಕಿಂತ ಮುಂಚೆ ಋತುಮತಿ ಆದವರು ಐವತ್ತರ ನಂತರ ಮುಟ್ಟು ನಿಂತವರಲ್ಲಿ ಸ್ತನದ ಕ್ಯಾನ್ಸರ್ ಸಂಭವ ಅಧಿಕ. ಪಾಶ್ಚಿಮಾತ್ಯ ದೇಶಗಳಲ್ಲಿ 50 ರಿಂದ 70 ವರ್ಷದಲ್ಲಿ ಸ್ತನದ ಕ್ಯಾನ್ಸರ್ ಹೆಚ್ಚಾಗಿದೆ. ಭಾರತದಲ್ಲಿ 30 ರಿಂದ 55 ವರ್ಷದವರಲ್ಲಿ ಸ್ತನದ ಕ್ಯಾನ್ಸರ್ ಹೆಚ್ಚು. ನಲವತ್ತನೇ ವಯಸ್ಸಿನಲ್ಲಿ ಸ್ತನದ ಕ್ಯಾನ್ಸರ್ ಸಂಭವ ಅಧಿಕ. ಹಾಗೇ ಮದುವೆಯಾಗದವರು, ಮದುವೆ ಆದರೂ ಮಕ್ಕಳಾಗದವರು, ಒಂದೇ ಮಗುವಿಗೆ ಜನ್ಮ ನೀಡಿದ ಸ್ತ್ರೀಯರಲ್ಲಿ ಇಂಥ ಕ್ಯಾನ್ಸರ್ ಸಾಧ್ಯತೆ ಅಧಿಕ ಎನ್ನುತ್ತದೆ ವಿಜ್ಞಾನ.

**ಕ್ಯಾನ್ಸರ್ ಎಂದರೇನು?**

ಕ್ಯಾನ್ಸರ್ ಎಂಬುದು ಲ್ಯಾಟಿನ್ ಪದ. ಏಡಿ ಎಂದು ಅದರ ಅರ್ಥ. ಮನುಷ್ಯನ ದೇಹದೊಳಗೆ ಜೀವಕೋಶಗಳು ನಿರ್ದಿಷ್ಟ ರೀತಿಯಲ್ಲಿ ಹುಟ್ಟಿ, ಕಾರ್ಯನಿರ್ವಹಿಸಿ ಸಾಯುತ್ತವೆ. ಎಲ್ಲೋ ಒಂದು ಕಡೆ ಇಂಥ ಜೀವಕೋಶಗಳ ಬೆಳವಣಿಗೆಯಲ್ಲಿ ಎಡವಟ್ಟಾಗುತ್ತದೆ. ಅವು ಅಗತ್ಯ ಮೀರಿ ಬೆಳೆದುಬಿಡುತ್ತವೆ. ಹರಡಿಕೊಳ್ಳುತ್ತವೆ. ಇಂಥ ಹರಡಿಕೊಳ್ಳುವ ಕ್ರಿಯೆ ಏಡಿಯ ನಡಿಗೆಯ ಹಾಗೆ ಇರುವುದರಿಂದ ರೋಗಕ್ಕೆ ಕ್ಯಾನ್ಸರ್ ಎಂಬ ಹೆಸರು.

ಈ ಕ್ಯಾನ್ಸರ್‌ಗಳಲ್ಲಿ ಎರಡು ಮುಖ್ಯ ಬಗೆ. ದೇಹದೊಳಗೆ ನಾರಿನಂಥ ಪದಾರ್ಥ ಇರುತ್ತದೆ. ಇದು ಗೊತ್ತಿರದ ಕಾರಣಕ್ಕಾಗಿ ಗಂಟುಗಟ್ಟಿಕೊಂಡು ವಿಕಾರವಾಗಿ ಬೆಳೆಯುತ್ತಾ ಹೋಗಬಹುದು. ಇದನ್ನು ವೈದ್ಯಕೀಯ ಪರಿಭಾಷೆಯಲ್ಲಿ 'ಸರ್ಕೋಮಾ' ಎನ್ನುತ್ತಾರೆ. ಇಂಥ ಬೆಳವಣಿಗೆಯ ವಿಶೇಷತೆ ಎಂದರೆ, ಅದರ ಆಕ್ರಮಣಕಾರಿ ಗುಣ. ದೇಹದ ಯಾವುದೋ ಒಂದು ಭಾಗದಲ್ಲಿ ಕಾಣಿಸಿಕೊಳ್ಳುವ ಇದು ರಕ್ತನಾಳ, ನರಗಳ ಮೂಲಕ ದೇಹದ ಇನ್ನಾವುದೇ ಭಾಗಕ್ಕಾದರೂ ಪಸರಿಸಿ, ಅಲ್ಲೆಲ್ಲ ಕ್ಯಾನ್ಸರ್ ಪಸರಿಸಬಹುದು. ಹೀಗಾಗಿ ಇದು ತೀರಾ ಅಪಾಯಕಾರಿ.

ಇನ್ನೊಂದು ಬಗೆಯದು ದೇಹದ ಯಾವುದಾದರೂ ಗ್ರಂಥಿ ಅಥವಾ ಅಂಗಕ್ಕೆ ತಗಲುವ ಕ್ಯಾನ್ಸರ್. ಇದನ್ನು 'ಕ್ಯಾರ್ಸಿನೋಮಾ' ಅಥವಾ ಕ್ಯಾನ್ಸರ್ ಎಂದು ಕರೆಯುತ್ತಾರೆ. ಇದು 'ಸರ್ಕೋಮಾ'ದ ಹಾಗೆ ಅಪಾಯಕಾರಿ ಅಲ್ಲದೇ ಇದ್ದರೂ, ಪ್ರಾಥಮಿಕ ಹಂತದಲ್ಲಿ ಪತ್ತೆಯಾದರೆ ನಿವಾರಣೆ, ಅದು ಸಾಧ್ಯವಾಗದೇ ಹೋದಲ್ಲಿ ನಿಯಂತ್ರಣವಾದರೂ ಸಾಧ್ಯ. ಕ್ಯಾನ್ಸರ್ ಪೀಡಿತ ಅಂಗ ಭಾಗದಲ್ಲಿ ಮೂಡಿರುವ ಗಡ್ಡೆಯನ್ನು ಶಸ್ತ್ರ ಚಿಕಿತ್ಸೆಯಿಂದ ಇಲ್ಲಿ ತೆಗೆಯಬಹುದು. ತೀರಾ ಅಪಾಯಕಾರಿ ಮಟ್ಟದಲ್ಲಿದ್ದರೆ ಆ ಗ್ರಂಥಿಯನ್ನೋ, ಅಂಗಭಾಗವನ್ನೋ ಶಸ್ತ್ರಚಿಕಿತ್ಸೆಯಿಂದ ತೆಗೆಯುವುದು ಅನಿವಾರ್ಯ. ಕೆಲವು ಸಂದರ್ಭದಲ್ಲಿ ಅಂಥ ಅಂಗಭಾಗಗಳು, ಮನುಷ್ಯನ ದೈನಂದಿನ ಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುವಂಥವು. ಆ ಕಾರಣಕ್ಕೆ ಶಸ್ತ್ರ ಚಿಕಿತ್ಸೆಯ ಬದಲು ಕ್ಯಾನ್ಸರ್ ಪೀಡಿತ ಭಾಗದಲ್ಲಿನ ಗಡ್ಡೆಯನ್ನು ಮಾತ್ರ ನಿವಾರಿಸುವ ಯತ್ನ ಅನಿವಾರ್ಯ ಆಗುತ್ತದೆ.

## ಪುರುಷರಲ್ಲೂ ಸ್ತನ ಕ್ಯಾನ್ಸರ್!

**ಪುರುಷರಲ್ಲಿ ಸ್ತನ ಕ್ಯಾನ್ಸರ್ ಅಪರೂಪವಾದರೂ ಅಲಕ್ಷ್ಯ ಮಾಡುವಂತಿಲ್ಲ. ಪುರುಷರಲ್ಲಿ ಹೆಚ್ಚಾಗಿ 60 ವರ್ಷಗಳ ನಂತರವೇ ಕಂಡುಬರುತ್ತದೆ. ಪುರುಷರಲ್ಲಿ ಉಂಟಾಗುವ ಸ್ತನದ ಕ್ಯಾನ್ಸರ್ ಬಹುಬೇಗ ಎದೆಯ ಮಾಂಸಖಂಡ ಚರ್ಮ ಮತ್ತು ಹಾಲ್ರಸ ಗ್ರಂಥಿಗಳಿಗೆ ಆವರಿಸಿಕೊಂಡು ಬಿಡುತ್ತದೆ. ಬಹುಬೇಗ ಕ್ಯಾನ್ಸರ್ ವಿಸ್ತರಣೆಯಾಗುವುದರಿಂದ ಚಿಕಿತ್ಸೆ ಬಹಳ ಕಷ್ಟ. ಪುರುಷರಲ್ಲಿ ಕ್ಯಾನ್ಸರ್ ಗಡ್ಡೆ ಅಥವಾ ವ್ರಣದ ರೂಪ ತಾಳಬಹುದು. ಎಕ್ಸರೇ ಮುಂತಾದ ವಿಕಿರಣದ ಉದ್ಯೋಗದಲ್ಲಿ ಬಹಳ ವರ್ಷ ಕೆಲಸ ಮಾಡುವವರಲ್ಲಿ ಇದು ಕಾಣಿಸಿಕೊಳ್ಳಬಹುದು. ಸ್ತ್ರೀಯರಲ್ಲಿ ಉಂಟಾಗುವ ಕ್ಯಾನ್ಸರ್‌ನ ಪ್ರಮಾಣದ ಒಂದರಷ್ಟು ಪುರುಷರಲ್ಲಿ ಉಂಟಾಗುತ್ತದೆ.**

**ಸ್ತ್ರೀಯರಲ್ಲಿ ಸ್ತನದ ಕ್ಯಾನ್ಸರ್‌ಗೆ ಅನುಸರಿಸುವ ಎಲ್ಲ ವಿಧದ ಚಿಕಿತ್ಸೆಯನ್ನು ಪುರುಷರಲ್ಲಿಯೂ ಅನುಸರಿಸಲಾಗುತ್ತದೆ. ಶಸ್ತ್ರಚಿಕಿತ್ಸೆ, ವಿಕಿರಣ ಚಿಕಿತ್ಸೆ ಮತ್ತು ಹಾರ್ಮೋನು ಚಿಕಿತ್ಸೆ ನೀಡಲಾಗುತ್ತದೆ. ವೃಷಣಗಳನ್ನು ತೆಗೆದು ಹಾಕುವುದರಿಂದ ಕ್ಯಾನ್ಸರ್ ಬೆಳವಣಿಗೆಯ ಗತಿಯನ್ನು ಮಿತಿಗೊಳಿಸಬಹುದು.**

## ರ್‍ಯಾಡಿಕಲ್ ಮ್ಯಾಸ್ಟೆಕ್ಟಮಿ

ಸ್ತನದ ಕ್ಯಾನ್ಸರ್‌ಗೆ ರೋಗಪೀಡಿತ ಸ್ತನವನ್ನು ತೆಗೆದು ಹಾಕುವುದೇ ಮದ್ದು ಎಂಬುದು ಹಿಂದೆ ವ್ಯಾಪಕ ಅಭಿಪ್ರಾಯವಾಗಿತ್ತು. ಬಹುಪಾಲು ಮಹಿಳೆಯರು ರೋಗ ಉಲ್ಬಣಿಸಿದ ಸ್ಥಿತಿಯಲ್ಲಿ ವೈದ್ಯರ ಬಳಿಗೆ ಬರುತ್ತಾ ಇದ್ದುದೂ ಇದಕ್ಕೊಂದು ಕಾರಣ.

ಆ ಹೊತ್ತಿಗಾಗಲೇ ರೋಗ ವ್ಯಾಪಿಸಿ ಕಂಕುಳ ಗೆಡ್ಡೆ, ಯಕೃತ್ತು ಮುಂತಾದೆಡೆ ಹರಡಿ ಬಿಟ್ಟಿರುತ್ತಿತ್ತು. ಆಗ ಅನಿವಾರ್ಯವಾಗಿ ಸರ್ಜನರು ಕ್ಯಾನ್ಸರ್ ಹಬ್ಬಿದ ಅಂಗಗಳನ್ನು ಕತ್ತರಿಸಿ ತೆಗೆಯಬೇಕಾಗುತ್ತಿತ್ತು.

ಇದು ಇನ್ನೂ ಜೀವನದ ಹೊಸ್ತಿಲಲ್ಲಿ ಇರುವ ತರುಣಿಯರ ಪಾಲಿಗೆ ಮರಣ ಶಾಸನದ ಹಾಗೆ. ಕ್ಯಾನ್ಸರ್ ನಿವಾರಣೆ ಆದರೂ ಸ್ತನವಿಲ್ಲದೇ ಬದುಕುವುದು ದೊಡ್ಡ ಹಿಂಸೆ. ಸಂಸಾರ ಸುಖಕ್ಕೆ ಏನೋ ಅಡ್ಡಿ. ತಾವು ಒಂದು ರೀತಿ ವಿಕಲಾಂಗರೆಂಬ ಭಾವನೆ. ತಮ್ಮ ಪತಿಗೆ ತಮ್ಮಲ್ಲಿ ಆಸಕ್ತಿ ಇಲ್ಲವಾಗುತ್ತಿದೆ ಎಂಬ ಅನುಮಾನ.

ರೋಗ ಉಲ್ಬಣಿಸಿ ಕಂಕುಳ ಗೆಡ್ಡೆಯನ್ನೂ ಶಸ್ತ್ರ ಚಿಕಿತ್ಸೆಯಿಂದ ನಿವಾರಿಸಿದ್ದರೆ ಆಗಾಗ ಕಾಣಿಸುವ ನೋವು. ಕೈ ಎತ್ತಲಾಗದೇ, ಎಂದಿನಂತೆ ಕೆಲಸ ನಿರ್ವಹಿಸಲಾಗದ ಸ್ಥಿತಿ.

ಈಗ ಇದೆಲ್ಲ ಹಳೆಯ ಕತೆ ಎನಿಸುವಷ್ಟು ಮಾರ್ಪಾಟಾಗಿದೆ. ಸ್ತನದ ಕ್ಯಾನ್ಸರ್ ಗೆಡ್ಡೆಯನ್ನಷ್ಟೇ ತೆಗೆದು ಗುಣಪಡಿಸುವುದು ಇಂದು ಸಾಧ್ಯ. ತೀರಾ ಅನಿವಾರ್ಯ ಎನಿಸಿದಾಗ ಮಾತ್ರ ಸ್ತನದ ನಿವಾರಣೆ. ಆದರೆ ಸ್ತನದ ಸ್ವರೂಪ ಮರಳಿ ಪಡೆಯಲು ಹಲವು ಬಗೆಯ ಆವಿಷ್ಕಾರಗಳು ಆಗಿವೆ. ಇದರಿಂದಾಗಿ ಮೊದಲಿನಂತೆ ಸ್ತನ ಕ್ಯಾನ್ಸರ್ ರೋಗಿಗಳು ಸ್ತನವಿಹೀನರಾಗುವುದು ತಪ್ಪುತ್ತಿದೆ.

### ಸ್ತನದಲ್ಲೇಕೆ ಕ್ಯಾನ್ಸರ್ ?

ಹಾಲು ತಯಾರಿಸುವ, ಮೊಲೆ ತೊಟ್ಟಿಗಂಟಿರುವ ಹಾಲು ಚೀಲಕ್ಕೆ ಅದನ್ನೊಯ್ಯುವ ಎರಡು ಪ್ರಮುಖ ಕೆಲಸ ಹಾಲೂಡಿಸುವಾಗ ನಡೆಯುತ್ತದೆ. ಹೆಣ್ಣಿನ ಗರ್ಭಾಶಯದಲ್ಲಿ ಬೀಜಾಂಕುರ ಆದೊಡನೆ ಗಾತ್ರ ವಿಸ್ತರಿಸಿದ ಹಾಗೆ ಗ್ರಂಥಿಗಳಿಂದ ಮೊಲೆ ತೊಟ್ಟಿಗಂಟಿರುವ ಚೀಲಕ್ಕೆ ಹಾಲು ಸಾಗಿಸುವ ನಾಳಗಳು ಬೆಳೆದು ಉದ್ದವಾಗುತ್ತವೆ. ಮಗು ಬೆಳೆದು, ಗರ್ಭಾಶಯ ಮೊದಲ ಸ್ಥಿತಿಗೆ ಬಂದು, ಇನ್ನೊಂದು ಮಗುವಿನ ಜನನಕ್ಕೆ ಸಿದ್ಧವಾದಾಗ ಹಾಲು ತಯಾರಿಕೆಯೂ ನಿಲ್ಲುತ್ತದೆ. ಬೀಜಾಂಕುರ ಆದೊಡನೆ ಮೂಡಿ ಬೆಳೆಯುವ ಹಾಲು ಒಯ್ಯುವ ನಾಳಗಳು ಈ ಹಂತದಲ್ಲಿ ನಿಷ್ಕ್ರಿಯವಾಗಿ ಮುದುಡುತ್ತವೆ. ದೇಹ ಯಾವುದೋ ರೀತಿ ಇಂಥ ನಿಷ್ಕ್ರಿಯ ನಾಳಗಳನ್ನು ವಿಸರ್ಜಿಸಿ ಹೊರಹಾಕುತ್ತದೆ. ಇನ್ನೊಂದು ಮಗು ಜನಿಸುವಾಗ ಬೇರೆಯದೇ ನಾಳಗಳು ಹುಟ್ಟಿಬರಬೇಕು. ಕೆಲವು ಸಲ ಇದು ನಡೆಯುವುದಿಲ್ಲ. ದುಗ್ಧ ನಾಳಗಳು ಹಾಗೇ ಉಳಿದು ಗಂಟುಕಟ್ಟಿಕೊಳ್ಳುತ್ತವೆ. ಕಾಲಕ್ರಮೇಣ ಈ ಗಂಟು ದೊಡ್ಡದಾಗಿ ಬೆಳೆಯುತ್ತಾ ಹೋಗಿ ಕ್ಯಾನ್ಸರ್ ಆಗುತ್ತದೆ. ಇನ್ನೊಂದು ಹಾರ್ಮೋನುಗಳ ಏರುಪೇರಿಂದ ಆಗುವಂಥದ್ದು. ನಮ್ಮ ದೇಹದಲ್ಲಿ ಇರುವ ಬೆವರು ಗ್ರಂಥಿಗಳಂಥ ಅಂಗಗಳು ತಾಯಿ ಮೊಲೆಯೊಳಗೆ ಹಾಲು ಸುರಿಸುವ ಗ್ರಂಥಿಗಳಾಗಿ ಮಾರ್ಪಡುತ್ತವೆ. ರಕ್ತನಾಳಗಳಿಂದ ಸಕ್ಕರೆ, ಪೋಷಕಾಂಶ ಮುಂತಾದುವನ್ನು ಸರಿಯಾದ ಪ್ರಮಾಣದಲ್ಲಿ ಬೇರ್ಪಡಿಸಿ ಮಗುವಿನ ಪೋಷಣೆಗೆ ಅಗತ್ಯವಾದ ಜೀವದ್ರವವನ್ನು ಅಗತ್ಯ ಪ್ರಮಾಣದಲ್ಲಿ ನೀಡುವುದೂ ಇವುಗಳ ಕೆಲಸ. ಹಾಲಿನ ಉತ್ಪಾದನೆ ನಿಂತಂತೆ ಇವುಗಳೂ ನಿಷ್ಕ್ರಿಯವಾಗುತ್ತವೆ. ಕೆಲವೊಮ್ಮೆ ಹಾರ್ಮೋನುಗಳ ಏರುಪೇರಿನಿಂದಾಗಿ ಇಂಥ ಹಾಲು ಸ್ರವಿಕ ಗ್ರಂಥಿಗಳು ಬೆಳೆದು, ಗಂಟುಗಳಾಗಿ, ದ್ರಾಕ್ಷಿ ಗೊಂಚಲಂತೆ ಮೊಲೆಯೊಳಗೆ ಕಾಣಿಸಿಕೊಳ್ಳುತ್ತವೆ. ಅವು ಕೂಡ ಪ್ರಾಥಮಿಕ ಹಂತದಲ್ಲಿ ಪತ್ತೆಯಾಗದೇ ಹೋದರೆ, ಕ್ಯಾನ್ಸರ್‌ಕಾರಕಗಳಾಗುತ್ತವೆ.

### ಪರಿಹಾರ್ಯ, ಅಪರಿಹಾರ್ಯ

ದೇಹದೊಳಗೆ ಬೆಳೆಯುವ ಎಲ್ಲ ರೀತಿಯ ಅನಗತ್ಯ ಗಡ್ಡೆಗಳೂ ಕ್ಯಾನ್ಸರ್ ಗಡ್ಡೆಗಳಲ್ಲ. ಕ್ಯಾನ್ಸರ್‌ಗೆ ಕಾರಣವಾಗುವ ಗಡ್ಡೆಗಳನ್ನು 'ಮ್ಯಾಲಿಗ್ನಂಟ್' ಅಥವಾ ಅಪರಿಹಾರ್ಯ ಎಂದು ಗುರುತಿಸಲಾಗುತ್ತದೆ. ಕ್ಯಾನ್ಸರ್ ಆಗಿ ಪರಿವರ್ತನೆಯಾಗದ ಗಡ್ಡೆಗಳೂ ಇರುತ್ತವೆ. ಅಂಥವನ್ನು 'ಬಿನೈನ್' ಅಥವಾ ಪರಿಹಾರ್ಯ ಗಡ್ಡೆಗಳು ಎಂದೂ ಹೇಳಲಾಗುತ್ತದೆ. ಇಂಥ ಗಡ್ಡೆಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದರೆ ಕೆಲಸ ಮುಗಿದಂತೆ. ಕ್ಯಾನ್ಸರ್‌ಕಾರಕ ಗಡ್ಡೆಗಳು ಪತ್ತೆಯಾದಾಗ, ಅವುಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದ ಮೇಲೂ ಆಸುಪಾಸಿನ ಅಂಗಗಳಿಗೆ ಅಥವಾ ಇದರಿಂದಾಗಿ ದೂರದ ಇನ್ಯಾವುದಾದರೂ ಅಂಗಕ್ಕೆ ಕ್ಯಾನ್ಸರ್ ಸೋಂಕು ತಗುಲಿದೆಯೇ ಎಂಬುದನ್ನು ಕಣ್ಣಿಟ್ಟು ನೋಡಬೇಕು. ಶಸ್ತ್ರ ಚಿಕಿತ್ಸೆಯಿಂದ ಕ್ಯಾನ್ಸರ್ ಗಡ್ಡೆಯನ್ನು ತೆಗೆದ ಮೇಲೂ ಅದರ ಅಂಗಾಂಶಗಳು ಉಳಿದುಕೊಂಡಿರುವ ಸಾಧ್ಯತೆಯೂ ಇರುತ್ತದೆ. ಆಗ ಬೇರೆ ಬೇರೆ ವಿಧಾನಗಳಿಂದ ಅಂಥ ಸಾಧ್ಯತೆಗಳನ್ನು ಪತ್ತೆ ಹಚ್ಚಿ ನಿವಾರಣೆ ಅಥವಾ ನಿಯಂತ್ರಣಕ್ಕೆ ಕ್ರಮ ಕೈಗೊಳ್ಳಬೇಕಾಗುತ್ತದೆ.


ಸ್ತನ ಕ್ಯಾನ್ಸರ್‌ನಿಂದಾಗಿ ಬೇಗ ಪರಿಣಾಮಕ್ಕೆ ತುತ್ತಾಗುವ ಹೆಣ್ಣಿನ ದೇಹದ ಭಾಗ

### ಸ್ತನದ ಕ್ಯಾನ್ಸರ್‌ನ ಸೂಚನೆ

ಸ್ತನದ ಕ್ಯಾನ್ಸರ್‌ನಲ್ಲಿ ನಾಲ್ಕು ಹಂತ. ಸ್ತನದೊಳಗೆ ಗಂಟುಗಳಂತೆ ಭಾಸವಾಗುವ ಗಡ್ಡೆಗಳು ಮೂಡುವುದು ಮೊದಲ ಹಂತ. ಈ ಹಂತದಲ್ಲಿ ಅವು ಸಲೀಸಾಗಿ ಅತ್ತಿಂದಿತ್ತ ಚಲಿಸುತ್ತಾ ಇರುತ್ತವೆ. ಎದೆಯ ಚರ್ಮಕ್ಕಾಗಲೀ, ಒಳಗಿನ ಅಂಗಕ್ಕಾಗಲೀ ಅಂಟಿರುವುದಿಲ್ಲ. ಈ ಸಂದರ್ಭದಲ್ಲಿ ಸ್ವಲ್ಪ ಊತ ಕೂಡ ಇರುತ್ತದೆ.

ಈ ಗಂಟುಗಳು ಸ್ವಲ್ಪ ದೊಡ್ಡದಾಗುವುದು ಎರಡನೇ ಹಂತ. ಮೊದಲಿನ ಹಾಗೆ ಮೊಲೆಯೊಳಗೆ ಇವು ಚಲಿಸಲಾರವು. ಈ ಗಂಟು ಅಥವಾ ಗಡ್ಡೆಗಳು ಬಿಡಿಬಿಡಿಯಾಗಿರುತ್ತವೆ. ಗಾತ್ರದಲ್ಲಿ ಬೆಳೆದಿರುವುದು ಸ್ಪರ್ಶಕ್ಕೆ ತಿಳಿಯುತ್ತದೆ.

ಮೂರನೇ ಹಂತದಲ್ಲಿ ಗಡ್ಡೆಗಳ ಗಾತ್ರ ಗಮನಾರ್ಹವಾಗಿ ಏರಿದ್ದು ಎದೆಯ ಚರ್ಮಕ್ಕೋ ಇಲ್ಲ ಒಳಗಿನ ಯಾವುದಾದರೂ ದೇಹ ಭಾಗಕ್ಕೋ ಅಂಟಿರುತ್ತವೆ. ಅವುಗಳ ಚಲನೆ ಈಗ ಸಾಧ್ಯವಿಲ್ಲ. ಶ್ವಾಸಕೋಶದ ಭಾಗಕ್ಕೆ ಅಂಟಿದ್ದರೂ ಮೇಲಿನ ಚರ್ಮದತ್ತಲೂ ಗಡ್ಡೆಯ ಪ್ರಭಾವ ವಿಸ್ತರಿಸಿರುತ್ತದೆ. ಚರ್ಮದ ಮೇಲ್ಪೈ ಪದರು ಬಿರಿಯುತ್ತದೆ. ರಂಧ್ರಗಳು ಅಗಲವಾಗುತ್ತವೆ. ಮೊಲೆಯ ಅಥವಾ ಎದೆಯ ಭಾಗದ ಚರ್ಮ ಕಿತ್ತಳೆ ಹಣ್ಣಿನ ಸಿಪ್ಪೆಯ ಹಾಗೆ ಒರಟಾಗಿ ಕಾಣುತ್ತದೆ.

ಮೇಲೆ ಸಣ್ಣ, ಸಣ್ಣ ಗುಳ್ಳೆಗಳೂ ಕಾಣಿಸಬಹುದು. ಮೊಲೆತೊಟ್ಟು ಹಿಂದಕ್ಕೆ ಸರಿದಿರುತ್ತದೆ. ನೋವು ಸಹ ಕಾಣಿಸಿಕೊಳ್ಳುತ್ತದೆ.

ನಾಲ್ಕನೆ ಹಂತದಲ್ಲಿ ಗಡ್ಡೆ ಒಡೆದು ರಕ್ತಸ್ರಾವ ಆಗುತ್ತದೆ. ದುರ್ಗಂಧ ಬೆರೆತ ರೇವು ಬರುತ್ತದೆ. ಇದೇ ಹಂತದಲ್ಲಿ ಸ್ತನದ ಕ್ಯಾನ್ಸರ್ ಬೇರೆಯ ದೇಹ ಭಾಗಕ್ಕೂ ಹರಡಿರಬಹುದು. ಹತ್ತಿರವೇ ಇರುವ ಕಂಕುಳ ಗಡ್ಡೆಗಳಿಗೆ ಕ್ಯಾನ್ಸರ್ ತಗುಲಿ ಅವು ಊದಿಕೊಂಡು, ದೇಹದ ಅಂಗಭಾಗಕ್ಕೆ ಅಂಟಿಕೊಂಡಿರುತ್ತವೆ. ಅಲ್ಲಿ ಅಲ್ಲದೇ ಕರಳು, ಯಕೃತ್ತು, ಶ್ವಾಸಕೋಶ ಮುಂತಾದೆಡೆಗೂ ಕ್ಯಾನ್ಸರ್ ವಿಸ್ತರಿಸಬಹುದು.

ನಾಲ್ಕನೆ ಹಾಗೂ ಕಡೆಯ ಹಂತ ತೀರಾ ಅಪಾಯಕಾರಿ. ಸ್ತನದೊಳಗಿನ ಗಡ್ಡೆಯ ಜೊತೆಗೇ ಅದು ವ್ಯಾಪಿಸಿರುವ ಗ್ರಂಥಿ ಅಥವಾ ದೇಹದ ಇತರ ಭಾಗಗಳಿಗೂ ಚಿಕಿತ್ಸೆ ಜರೂರಾಗುತ್ತದೆ.

**ಪತ್ತೆಯ ವಿಧಾನ**

ಬಾಹ್ಯ ಪರೀಕ್ಷೆ, ಬಯಾಪ್ಸಿ, ಮ್ಯಾಮೋಗ್ರಫಿ ಮುಂತಾದ ವಿಧಾನಗಳಿಂದ ಸ್ತನದ ಕ್ಯಾನ್ಸರ್ ಪತ್ತೆ ಮಾಡಲಾಗುತ್ತದೆ.

ಮೊಲೆಯಲ್ಲಿ ಗಂಟುಗಳಾಗಿವೆಯೇ? ಆಗಿದ್ದರೆ ಯಾವ ಹಂತದಲ್ಲಿ ಇವೆ? ಎಂದು ಅರಿತುಕೊಳ್ಳುವುದು ಬಾಹ್ಯ ಪರೀಕ್ಷೆಯ ಗುರಿ. ಮಹಿಳೆಯನ್ನು ಕೂರಿಸಿ, ನಿಲ್ಲಿಸಿ, ಕೈಮೇಲೆತ್ತಿ ಹಿಡಿದ ಸ್ಥಿತಿಯಲ್ಲಿ, ಹೀಗೆ ನಾನಾ ಅವಸ್ಥೆಯಲ್ಲಿ ಮೊಲೆಯಲ್ಲಿನ ಗಂಟುಗಳನ್ನು ಕೈಯಿಂದಲೇ ಮುಟ್ಟಿನೋಡಿ ವೈದ್ಯರು ಇತ್ಯರ್ಥಕ್ಕೆ ಬರಬೇಕಾಗುತ್ತದೆ. ಗಂಟುಗಳಾಗಿವೆಯೇ? ಆಗಿದ್ದರೆ ಅವುಗಳ ಗಾತ್ರವೇನು? ಸಲೀಸಾಗಿ ಚಲಿಸುತ್ತಿವೆಯೆ? ಯಾವುದಾದರೂ ಅಂಗಭಾಗಕ್ಕೆ ಅಥವಾ ಚರ್ಮಕ್ಕೆ ಈ ಗಂಟುಗಳು ಅಂಟಿಕೊಂಡಿವೆಯೇ? ಎಂಬುದು ಬಾಹ್ಯ ಪರೀಕ್ಷೆಯಿಂದ ತಿಳಿಯುತ್ತದೆ.

ಬಯಾಪ್ಸಿಯಲ್ಲಿ ಎರಡು ವಿಧ. ಬೆಳೆದಿರುವ ಗಂಟಿನ ಒಂದಂಶವನ್ನು ಕೊಯ್ದು ತೆಗೆದು ಪರೀಕ್ಷೆಗೆ ಗುರಿಪಡಿಸುವುದು. ಎಲ್ಲ ಗಂಟು ಅಥವಾ ಗಡ್ಡೆ ಕ್ಯಾನ್ಸರ್ ಗಡ್ಡೆ ಆಗಿರಬೇಕೆಂದೇನೂ ಅಲ್ಲ. ಸ್ಥಳೀಯ ಅರಿವಳಿಕೆ ನೀಡಿ ಸ್ತನಕ್ಕೆ ಬೆಳೆದ ಗಂಟು ಅಥವಾ ಗಡ್ಡೆಯ ಒಂದು ತುಂಡು ಕತ್ತರಿಸಿ ತೆಗೆದ ತಕ್ಷಣವೇ ಅದನ್ನು ಪರೀಕ್ಷೆಗೆ ಗುರಿಪಡಿಸಲಾಗುವುದು. ಇಂಥ ಪರೀಕ್ಷೆಯಿಂದ ಹದಿನೈದು-ಇಪ್ಪತ್ತು ನಿಮಿಷಗಳಲ್ಲಿ ಗಡ್ಡೆಯ ಸ್ವರೂಪ ಏನೆಂದು ತಿಳಿಸುತ್ತಾರೆ. ಅಗತ್ಯವಾದಲ್ಲಿ ಶಸ್ತ್ರಚಿಕಿತ್ಸೆ ಮುಂದುವರಿಸಿ ಗಡ್ಡೆಯನ್ನು ತೆಗೆದು ಹಾಕುತ್ತಾರೆ.

ಇತ್ತೀಚಿನ ದಿನಗಳಲ್ಲಿ ಇಂಥ ಶಸ್ತ್ರ ಚಿಕಿತ್ಸೆಯ ಅಗತ್ಯ ಕಡಿಮೆ ಆಗಿದೆ. ಇಂಜೆಕ್ಷನ್ ಸಿರಿಂಜಿನ ನಳಿಕೆಯಂಥದರ ಮೂಲಕ ಗಡ್ಡೆಯೊಳಗಿನ ಜೀವದ್ರವವನ್ನು ತೆಗೆದು ಪರೀಕ್ಷೆಗೆ ಗುರಿ ಮಾಡುವುದು ಹೊಸ ವಿಧಾಸ. ಸ್ಥಳೀಯ ಅರಿವಳಿಕೆ, ಶಸ್ತ್ರ ಚಿಕಿತ್ಸೆ ಇಲ್ಲಿ ಅನಗತ್ಯ.

ಸೌಮ್ಯರೂಪದ ಎಕ್ಸ್‌ರೇ ಕಿರಣಗಳನ್ನು ಹಾಯಿಸಿ, ಆಗಷ್ಟೇ ಚಿಗುರೊಡೆಯುತ್ತಿರುವ ಕ್ಯಾನ್ಸರ್ ಗಡ್ಡೆಗಳನ್ನು, ಶಸ್ತ್ರಚಿಕಿತ್ಸೆಯ ನಂತರವೂ ಉಳಿದಿರಬಹುದಾದ ಕ್ಯಾನ್ಸರ್ ಪಳೆಯುಳಿಕೆಯ ತುಣುಕುಗಳನ್ನು ಸ್ತನದಲ್ಲಿ ಪತ್ತೆ ಹಚ್ಚಲಾಗುತ್ತದೆ. ಇದಕ್ಕೆ ಮ್ಯಾಮೋಗ್ರಫಿ ಎನ್ನುತ್ತಾರೆ.



ಕ್ಯಾನ್ಸರ್ ಉಲ್ಬಣಿಸಿದ ಸ್ಥಿತಿಯಲ್ಲಿ ಸ್ತನದ ಚರ್ಮ ಕಿತ್ತಲೆ ಹಣ್ಣಿನ ಸಿಪ್ಪೆಯಂತಾಗುತ್ತದೆ

## ಎಫ್.ಎನ್.ಎ.ಸಿ. ಪರೀಕ್ಷೆ (Free needle aspiratic cythology)

ಅತ್ಯಂತ ಸರಳವಾದ ಹಾಗೂ ಶೇ.99 ನಿಖರವಾದ ಪರೀಕ್ಷೆ. ರೋಗಿ ಒಬ್ಬರೇ ಬಂದು ಪರೀಕ್ಷೆ ಮಾಡಿಸಿಕೊಂಡು ಹೋಗಬಹುದು. ಒಂದು ಇಂಜಕ್ಷನ್ ತೆಗೆದುಕೊಂಡಷ್ಟೆ ಸರಳವಾಗಿರುತ್ತದೆ. ಆಸ್ಪತ್ರೆಯಲ್ಲಿ ಅಡ್ಮಿಟ್ ಆಗುವುದು ಬೇಕಿಲ್ಲ. ಒಂದು ಸೂಜಿಯನ್ನು ಗಡ್ಡೆಯೊಳಗೆ ತೂರಿಸಿ ಸ್ವಲ್ಪ ರಸವನ್ನು ಹೀರಿ ತೆಗೆದುಕೊಂಡು ಮೈಕ್ರೋಸ್ಕೋಪಿನಲ್ಲಿ ಪರೀಕ್ಷೆ ಮಾಡುತ್ತಾರೆ. ಫಲಿತಾಂಶ ಕೂಡ ತಕ್ಷಣ ದೊರೆಯುತ್ತದೆ.

**ಚಿಕಿತ್ಸೆ**

ಎರಡನೇ ಹಂತ ಮುಟ್ಟಿರುವ ಸ್ತನದ ಕ್ಯಾನ್ಸರ್‌ಗೆ ಶಸ್ತ್ರ ಚಿಕಿತ್ಸೆಯಿಂದ ನಿವಾರಣೆ ಸಾಧ್ಯ. ಮುಂದುವರಿದ ಹಂತದಲ್ಲಿ ಶಸ್ತ್ರ ಚಿಕಿತ್ಸೆಯ ಜೊತೆಗೇ ವಿಕಿರಣ ಚಿಕಿತ್ಸೆ, ಕ್ಯಾನ್ಸರ್ ನಿವಾರಕ ಔಷಧಗಳ ಪ್ರಯೋಗ ಕೂಡ ಅಗತ್ಯವಾಗುತ್ತದೆ.

ಹಾರ್ಮೋನುಗಳ ವೈಪರೀತ್ಯದಿಂದ ಆಗುವ ಕ್ಯಾನ್ಸರ್‌ಗಳಿಗೆ ಹಾರ್ಮೋನುಗಳ ನಿಯಂತ್ರಣದ ಚಿಕಿತ್ಸೆ ನೀಡಲಾಗುತ್ತದೆ. ಮುಟ್ಟು ನಿಂತಿಲ್ಲದ ಮಹಿಳೆಯರ ಸ್ತನದ ಕ್ಯಾನ್ಸರ್ ನಿಯಂತ್ರಣಕ್ಕೆ ಅಂಡಾಶಯ ತೆಗೆದು ಹಾಕುವುದರಿಂದ ಪರಿಹಾರ ಸಾಧ್ಯ. ಸೃಷ್ಟಿಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸುವ ಎಸ್ಟ್ರೋಜೆನ್ ಎಂಬ ಹಾರ್ಮೋನು ಕಾರ್ಯ ಎಸಗದಂತೆ, ವಿರುದ್ಧ ಕ್ರಿಯೆಗೆ ಪ್ರಚೋದನೆ ನೀಡುವಂತೆ ಟ್ಯಾಮಾಕ್ಸಿಫಿನ್ ಎಂಬ ಔಷಧಿಯಿಂದ ಉತ್ತಮ ಪರಿಣಾಮ ಸಾಧ್ಯ.

**ಚಿಕಿತ್ಸೆಯ ನಂತರ**

ಸ್ತನದ ಕ್ಯಾನ್ಸರ್ ಕೇವಲ ದೈಹಿಕ ಪರಿಣಾಮ ಬೀರುವುದಿಲ್ಲ. ಕ್ಯಾನ್ಸರ್ ಎಂಬ ಹೆಸರು ಕೇಳಿಯೇ ಆಘಾತವಾಗಿರುತ್ತದೆ. ಚಿಕಿತ್ಸೆಯ ನಂತರವೂ ಆಕೆಯ ಮನಸ್ಸಿಗಾದ ಘಾಸಿ ಮುಂದುವರಿದಿರುತ್ತದೆ. ಕೆಲವು ಸಂದರ್ಭಗಳಲ್ಲಿ ಕ್ಯಾನ್ಸರ್ ನಿವಾರಣೆಗಾಗಿ ಆಕೆಯ ಪೂರ್ಣ ಸ್ತನವನ್ನೋ ಅಥವಾ ಸ್ತನದ ಸ್ವಲ್ಪ ಭಾಗವನ್ನೋ ಶಸ್ತ್ರ ಚಿಕಿತ್ಸೆಯಿಂದ ತೆಗೆದಿರಬಹುದು. ಅಂಥ ಸಂದರ್ಭಗಳಲ್ಲಿ ಆಕೆಗೆ ಮನೋಸ್ಥೈರ್ಯ ನೀಡುವ ಅವಶ್ಯಕತೆ ಇರುತ್ತದೆ. ಅಂಥ ಸಂದರ್ಭಗಳಲ್ಲಿ ಮಾನಸಿಕ ತಜ್ಞರ ಅಗತ್ಯವೂ ಬೀಳಬಹುದು.

**ಬಾರದಂತೆ ತಡೆಯಿರಿ**

ರೋಗ ಬಂದ ಮೇಲೆ ಚಿಕಿತ್ಸೆ ಪಡೆಯುವುದಕ್ಕಿಂತ ರೋಗ ಬಾರದಂತೆ ತಡೆಯುವುದೇ ಜಾಣತನ. ಸ್ತನದ ಕ್ಯಾನ್ಸರ್ ಎಲ್ಲರಿಗೂ ಬರುವುದಿಲ್ಲ; ಆಹಾರದಲ್ಲಿನ ಎಚ್ಚರ ಕ್ಯಾನ್ಸರ್ ಬರದಂತೆ ಕಾಯಬಲ್ಲದು. ತಮಗೆ ಅಂಥದ್ದೇನೂ ಆಗುವುದಿಲ್ಲ ಎಂಬ ಅಸಡ್ಡೆ ಒಳ್ಳೆಯದಲ್ಲ. ಅಕಸ್ಮಾತ್ ಬಂದರೆ ಎಂಬ ಎಚ್ಚರ ಅಗತ್ಯ. ಆಗಾಗ ವೈದ್ಯರ ಪರೀಕ್ಷೆ ನಡೆಸುವುದು ಒಳ್ಳೆಯದು. ಅದಕ್ಕಿಂತ ಸುಲಭ ವಿಧಾನ ಎಂದರೆ ಸ್ವತಃ ತಾವೇ ಆಗಿಂದಾಗ್ಗೆ ಸ್ತನಗಳನ್ನು ಬಾಹ್ಯಪರೀಕ್ಷೆಗೆ ಗುರಿಪಡಿಸಿ ಖಚಿತಪಡಿಸಿಕೊಳ್ಳುವುದು. ಅದು ಸರಳ ವಿಧಾನ ಕೂಡ.

ಇಂಥದೊಂದು ಸಣ್ಣ ಕ್ರಮ ಕ್ಯಾನ್ಸರ್‌ಗೆ ಮಹಿಳೆ ಬಲಿಯಾಗದಂತೆ, ಮಾರಕ ಪರಿಣಾಮಗಳಾಗದಂತೆ ತಡೆಯುವ ಉತ್ತಮ ಉಪಾಯ. ■

# ಸಕಾಲಿಕ ಎಚ್ಚರ, ದೀರ್ಘ ಚಿಕಿತ್ಸೆ ಬೇಕು

**ಡಾ. ವಿಜಯಲಕ್ಷ್ಮಿ ದೇಶಮಾನೆ ಪ್ರಸಿದ್ಧ ಕ್ಯಾನ್ಸರ್ ತಜ್ಞರು. ಏಳು ವರ್ಷಗಳಿಂದ ಕಿದ್ವಾಯಿ ಕ್ಯಾನ್ಸರ್ ಸಂಸ್ಥೆಯಲ್ಲಿ ಪ್ರೊಫೆಸರ್. ಕಳೆದ ಒಂದು ವರ್ಷದಿಂದ ಸ್ತನಸೇವಾ ವಿಭಾಗದ ಮುಖ್ಯಸ್ಥರು. ಸಾವಿರಾರು ಸ್ತನ ಕ್ಯಾನ್ಸರ್ ರೋಗಿಗಳಿಗೆ ಅವರು ಚಿಕಿತ್ಸೆ ಮಾಡಿದ್ದಾರೆ. ಅವರ ಬಳಿ ಬಂದವರಲ್ಲಿ ಅತ್ಯಂತ ಕಿರಿಯ ವಯಸ್ಸಿನ ರೋಗಿ ಎಂದರೆ ನಾಲ್ಕು ವರ್ಷದ ಮಗು. ಹಾಗೇ ಎಪ್ಪತ್ತು ವರ್ಷದ ವೃದ್ಧರೊಬ್ಬರಿಗೂ ಅವರು ಸ್ತನ ಕ್ಯಾನ್ಸರ್ ಚಿಕಿತ್ಸೆ ಮಾಡಿದ್ದಾರೆ.**
**ಸ್ತನದ ಕ್ಯಾನ್ಸರ್ ಕುರಿತಂತೆ ಪತ್ರಿಕೆಯ ಜೊತೆ ಮಾತಾಡುತ್ತಾ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಇಲ್ಲಿವೆ.**

**ಆತಂಕಕಾರಿ ಬೆಳವಣಿಗೆ**

ಇತ್ತೀಚೆಗೆ ಹೆಚ್ಚುತ್ತಿರುವ ಸ್ತನ ಕ್ಯಾನ್ಸರ್‌ನ ಬಗ್ಗೆ ಆತಂಕ, ಕಳವಳ ಇದೆ. ಕಿದ್ವಾಯಿ ಕ್ಯಾನ್ಸರ್ ಸಂಸ್ಥೆಯಲ್ಲಿ ಪ್ರತಿವರ್ಷ 10,000 (ಹತ್ತು ಸಾವಿರ) ಕ್ಯಾನ್ಸರ್ ರೋಗಿಗಳು ಚಿಕಿತ್ಸೆ ಪಡೆದರೆ ಅವರಲ್ಲಿ 500 ರೋಗಿಗಳು ಸ್ತನ ಕ್ಯಾನ್ಸರ್ ರೋಗಿಗಳು. ಪುರುಷರ ಸ್ತನ ಕ್ಯಾನ್ಸರ್‌ನ್ನು ಚಿಕಿತ್ಸೆ ಮಾಡಿದ್ದಾರೆ. ಪುರುಷರಲ್ಲಿ ಸ್ತನ ಕ್ಯಾನ್ಸರ್ ಅಪರೂಪವಾದರೂ ನಿರ್ಲಕ್ಷಿಸುವಂತಿಲ್ಲ. ಆದರೆ ಪುರುಷರು ಮುಂದುವರಿದ ಹಂತದಲ್ಲಿಯೇ ಚಿಕಿತ್ಸೆಗೆ ಬರುತ್ತಾರೆ.

ಈ ಬಗ್ಗೆ ಎಚ್ಚರ ಅಗತ್ಯ ಎಂಬುದು ಅವರ ಅಳಲು. ಸ್ತ್ರೀಯರು ಕೂಡ ಹೆಚ್ಚಾಗಿ ಮೂರನೇ ಹಂತದಲ್ಲಿಯೇ ಚಿಕಿತ್ಸೆಗೆ ಬರುತ್ತಾರೆ. ಗಡ್ಡೆ ಚಿಕ್ಕದಿರುವಾಗಲೇ ಬಂದರೆ ಅದು ಮಾತ್ರ ಶಸ್ತ್ರಚಿಕಿತ್ಸೆಯಿಂದ ನಿವಾರಿಸಿ ಸ್ತನವನ್ನು ಉಳಿಸಬಹುದು. ಆದ್ದರಿಂದ ಪ್ರತಿ ತಿಂಗಳೂ ಸ್ತ್ರೀಯರು ಒಂದು ನಿಗದಿತ ದಿನವನ್ನು ಸ್ತನ ಪರೀಕ್ಷೆಗಾಗಿಯೇ ಇಟ್ಟುಕೊಳ್ಳಬೇಕು. ಮುಟ್ಟುನಿಂತ ಸ್ತ್ರೀಯರು ಪ್ರತಿ ತಿಂಗಳೂ ಯಾವುದಾದರೊಂದು ದಿನ ಹಾಗೂ ಮುಟ್ಟಾಗುವ ಸ್ತ್ರೀಯರು ಮುಟ್ಟಾದ ನಂತರದ ದಿನಗಳಲ್ಲಿ ಸ್ವಯಂ ಸ್ತನ ಪರೀಕ್ಷೆ ಮಾಡಿಕೊಳ್ಳಬೇಕು. ಪರೀಕ್ಷೆಯನ್ನು ರಾತ್ರಿ ಮಲಗಿದಾಗ, ಏಕಾಂತದಲ್ಲಿದ್ದಾಗ ಇಲ್ಲವೇ ಕನ್ನಡಿ ಎದುರುಗಡೆ ನಿಂತುಕೊಂಡು ಪರೀಕ್ಷಿಸಿಕೊಳ್ಳಬೇಕು. ಬೆರಳುಗಳಿಂದ ಪರೀಕ್ಷೆ ಮಾಡಿಕೊಳ್ಳಬಾರದು. ಮೃದುವಾಗಿ ಅಂಗೈಯಿಂದ ಸ್ತನದ ಎಲ್ಲ ಭಾಗಗಳಲ್ಲಿ ಪರೀಕ್ಷಿಸಿಕೊಳ್ಳಬೇಕು. ಯಾವುದಾದರೂ ಅಸ್ವಾಭಾವಿಕ ಗಡ್ಡೆ ಕಂಡುಬಂದರೆ ಇಲ್ಲವೇ ಮೊಲೆತೊಟ್ಟಿನಿಂದ ಸ್ರಾವ ಕಂಡುಬಂದರೆ ತಕ್ಷಣ ವೈದ್ಯರಲ್ಲಿಗೆ ಧಾವಿಸಬೇಕು. ಹಲವಾರು ಆಸ್ಪತ್ರೆಗಳಿಗೆ ಅಲೆದಾಡಿ ಹಣ, ಸಮಯ, ಶಕ್ತಿ ವ್ಯಯ ಮಾಡಿಕೊಳ್ಳುವುದಕ್ಕಿಂತ ತಕ್ಷಣ ಕ್ಯಾನ್ಸರ್ ಸಂಸ್ಥೆಗೆ ಬಂದರೆ ರೋಗಿ ಹಾಗೂ ವೈದ್ಯರಿಬ್ಬರಿಗೂ ಚಿಕಿತ್ಸೆಗೆ ಉತ್ತಮ.

**ಚಿಕಿತ್ಸೆ ದೀರ್ಘಕಾಲಿಕ**

ಕೇವಲ ಶಸ್ತ್ರಕಿಚಿತ್ಸೆಯಿಂದ ಚಿಕಿತ್ಸೆ ಪೂರ್ಣವಾಗುವುದಿಲ್ಲ. ಶಸ್ತ್ರಚಿಕಿತ್ಸೆಯನಂತರವೂ ರೇಡಿಯೊ ಥೆರಪಿ, ಕಿಮೋಥೆರಪಿ ತೆಗೆದುಕೊಳ್ಳಬೇಕಾಗುತ್ತದೆ. ಶಸ್ತ್ರ ಚಿಕಿತ್ಸೆಯ ನಂತರ ಐದು ವರ್ಷಗಳವರೆಗೂ ಫಾಲೋಲಿಪ್‌ಗೆ ಬರಬೇಕಾಗುತ್ತದೆ. ಮೊದಲ ವರ್ಷ ಮೂರು ತಿಂಗಳಿಗೊಮ್ಮೆ, ಎರಡನೆ ವರ್ಷ 6 ತಿಂಗಳಿಗೊಮ್ಮೆ ಹಾಗೂ ನಂತರದ ವರ್ಷ ವರ್ಷಕ್ಕೊಮ್ಮೆ ವೈದ್ಯರ ಬಳಿ ಬರಬೇಕಾಗುತ್ತದೆ. ಕಿಮೋಥೆರಪಿ ಕೊಡುವಾಗ ಕೂದಲುದುರುತ್ತವೆ. ಆದರೆ ನಂತರ ಚಿಕಿತ್ಸೆ ನಿಲ್ಲಿಸಿದ ಮೇಲೆ ಮತ್ತೆ ಕೂದಲು ಬೆಳೆಯುತ್ತವೆ ಐದು ವರ್ಷದವರೆಗೂ ರೋಗಿಯಲ್ಲಿ ಕ್ಯಾನ್ಸರ್ ಮತ್ತೆ ಕಂಡುಬಂದಿದ್ದಲ್ಲಿ ಮಾತ್ರ ಕ್ಯಾನ್ಸರ್‌ನಿಂದ ಸಂಪೂರ್ಣ ಗುಣಹೊಂದಿದ್ದಾರೆಂದು ಹೇಳಬಹುದು.

**ಅಗತ್ಯವಾದಲ್ಲಿ ಸ್ತನ ನಿವಾರಣೆ**

ಸದ್ಯ ರ್‍ಯಾಡಿಕಲ್ ಮ್ಯಾಸ್ಟೆಕ್ಟಮಿ ಮಾಡುತ್ತಿಲ್ಲ. ಮಾಡಿಫೈಡ್ ರ್‍ಯಾಡಿಕಲ್ ಬ್ರೆಸ್ಟ್ ರಿಮೂವಲ್ ಮಾಡುತ್ತಿದ್ದೇವೆ. ರೋಗಿಗಳು ಮೂರನೇ ಹಂತದಲ್ಲಿ ಬಂದಾಗ ಮಾತ್ರ ಇದು ಅನಿವಾರ್ಯ. ಗಡ್ಡೆ ಚಿಕ್ಕದಿರುವಾಗಲೇ ಬಂದರೆ ಅದನ್ನು ಮಾತ್ರ ತೆಗೆದು ಸ್ತನವನ್ನು ಹಾಗೆಯೇ ಉಳಿಸಬಹುದು. ಸ್ತನವನ್ನು ತೆಗೆಸಿಕೊಂಡವರು ಮತ್ತೆ ಕೃತಕವಾಗಿ ಪ್ರೊಸ್ತೆಸಿಸ್‌ನಿಂದ ಮೊದಲಿನಂತೆಯೇ ಕಾಣಲು ಸಾಧ್ಯ. ಹಳ್ಳಿಯ ಹೆಣ್ಣುಮಕ್ಕಳಿಗಿಂತ ಪಟ್ಟಣದವರಲ್ಲೇ ಸ್ತನ ಕ್ಯಾನ್ಸರ್ ಅಧಿಕವಾಗಿ ಕಂಡುಬರುತ್ತದೆ. ಈಗ ಸ್ತನ ಕ್ಯಾನ್ಸರ್ ಹೆಚ್ಚಾಗಿರುವುದಕ್ಕೆ ಕಾರಣ ಬದಲಾದ ಜೀವನಶೈಲಿ, . ತಡವಾಗಿ ಮದುವೆಯಾಗುವವರು, ಮದುವೆಯಾದರೂ ಮಕ್ಕಳಾಗದಿರುವುದು ಇಲ್ಲವೇ ತಡವಾಗಿ ಮಕ್ಕಳಾಗುವುದು, ಮಕ್ಕಳಾದರೂ ಹೆಚ್ಚು ಸಮಯ ಹಾಲೂಡಿಸದೇ ಇರುವುದು. ಮದುವೆಯೇ ಆಗದಿರುವುದು ಮುಂತಾದ ಕಾರಣಗಳಿಂದ ಮತ್ತು ಮುಖ್ಯವಾಗಿ ಅನುವಂಶೀಯ ಕಾರಣಗಳಿಂದ (ತಾಯಿ, ಅಕ್ಕ, ತಂಗಿಯರಿಗಿದ್ದರೆ ಮುಂದಿನ ಪೀಳಿಗೆಯಲ್ಲಿ ಖಂಡಿತ ಕಾಣಿಸಿಕೊಳ್ಳುತ್ತದೆ) ಅಧಿಕ ಕೊಬ್ಬಿನಾಂಶದ ಆಹಾರ ಸೇವನೆ ಮಾಡುವುದು ಕೂಡ ಕಾರಣವಾಗುತ್ತದೆ ಎಂದು ಅವರು ಅಭಿಪ್ರಾಯಪಡುತ್ತಾರೆ. ಸ್ತನ ಕ್ಯಾನ್ಸರ್ ಮೊಟ್ಟಮೊದಲು ಕಾಣಿಸಿಕೊಂಡಿದ್ದು ಕ್ರೈಸ್ತ ಸನ್ಯಾಸಿಯರಲ್ಲಿ.

ಶಸ್ತ್ರ ಚಿಕಿತ್ಸೆಗೆ ಸ್ತ್ರೀಯರು ಹೆದರಬೇಕಿಲ್ಲ. ಅದರಿಂದ ಯಾವುದೇ ರೀತಿಯ ಅಪಾಯಗಳಿಲ್ಲ. ಸರಳವಾದ ಶಸ್ತ್ರಚಿಕಿತ್ಸೆಯನಂತರ ಒಂದು ದಿನದಲ್ಲೇ ಎದ್ದು ಕುಳಿತುಕೊಳ್ಳಬಹುದು. ಮಾನಸಿಕ ಸ್ಥೈರ್ಯದಿಂದ ಸ್ತನವಿಲ್ಲದಿದ್ದರೂ ಜೀವನ ಮುಖ್ಯ ಎಂದು ಭಾವಿಸಿ ಧೈರ್ಯದಿಂದ ಸ್ತನ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ಮಹಿಳೆಯರು ಜೀವಿಸಬೇಕು. ಇದಕ್ಕೆ ಗಂಡ, ಮಕ್ಕಳು ಹಾಗೂ ಕುಟುಂಬ ವರ್ಗದವರೂ ಎಲ್ಲ ರೀತಿಯ ಸಾಂತ್ವನ, ನೆಮ್ಮದಿಯ ವಾತಾವರಣ ನೀಡಬೇಕಾಗುತ್ತದೆ. ಮಕ್ಕಳಿಗೆ ಹಾಲೂಡಿಸಿದ ಮೇಲೆ ಸ್ತನವೊಂದು ಉಪಯೋಗವಿಲ್ಲದ ವಸ್ತು. ಅದಕ್ಕಾಗಿ ಕೊರಗುವುದು ಬೇಡ.

ಸ್ತ್ರೀಯರಲ್ಲಿ ಆರೋಗ್ಯದ ಬಗ್ಗೆ ಕಾಳಜಿ ಇರಬೇಕಾದುದು ಬಹು ಮುಖ್ಯ. ತಮ್ಮ ದೇಹದ ಅಂಗಾಂಗಳ ಬಗ್ಗೆ ಅವುಗಳ ಕಾರ್ಯ ವೈಖರಿಯ ಬಗ್ಗೆ ಹಾಗೂ ಅವುಗಳಿಗೆ ಉಂಟಾಗುವ ಕಾಯಿಲೆಗಳ ಬಗ್ಗೆ ತಿಳಿದರಬೇಕಾದುದು ಅತ್ಯಂತ ಅವಶ್ಯಕ. ■




**ಸ್ತನಗಳು ಹೇಗಿವೆ?**
**ಸ್ಪರ್ಶಕ್ಕೆ ಯಾವ ರೀತಿ ಪ್ರತಿಕ್ರಿಯಿಸುತ್ತವೆ?**
**ಇಂಥ ಸೂಕ್ಷ್ಮ ಅಂಗ ಪರೀಕ್ಷಿಸುವುದು ಹೇಗೆ?**
**ಅನಾರೋಗ್ಯಕರ ಬೆಳವಣಿಗೆ ಆಗಿದೆಯೇ?**
**ಇಂಥ ಪ್ರಶ್ನೆಗಳಿಗೆ ಉತ್ತರ ಸುಲಭವಲ್ಲ.**
**ಪರಿಣತರು ಕೂಡ ನಿಖರವಾಗಿ**
**ಇಂಥ ಪರೀಕ್ಷೆ ನಡೆಸಿ ಉತ್ತರ ಹೇಳುವುದು**
**ಸುಲಭವಲ್ಲ. ಇದಕ್ಕಾಗಿ ಸ್ತನದ ಅಂಗ**
**ರಚನೆ ಅರಿಯುವುದು**
**ಮೊದಲ ಅಗತ್ಯ.**

### ಸ್ತನ ಹೇಗಿರುತ್ತದೆ?

ಸಣ್ಣದೊಂದು ಪ್ರಯೋಗ. ಪ್ಲಾಸ್ಟಿಕ್ ಚೀಲದೊಳಗೆ ಅಂಟಾದ ದ್ರವ ಬಿಸಿ ಇರುವಾಗ ತುಂಬಿ ಅದರೊಳಗೆ ಕೆಲವು ಅನ್ನದ ತುಣುಕುಗಳನ್ನು ಹಾಕಿ. ಚೀಲ ಆರಿದ ಮೇಲೆ ಒತ್ತಿ ಸ್ಪರ್ಶಿಸಿ ನೋಡಿ. ಸಾಮಾನ್ಯ, ಆರೋಗ್ಯಪೂರ್ಣ ಮೊಲೆ ಹಾಗಿರುತ್ತದೆ.

ಮೊಲೆ ಅಥವಾ ಸ್ತನದೊಳಗೆ ಹಾಲಿನ ಗ್ರಂಥಿಗಳು ಇರುತ್ತವೆ. ಸಾಮಾನ್ಯ ಬಟಾಣಿಕಾಳಿನಷ್ಟು ಗಾತ್ರ ಅವುಗಳದ್ದು, ಮುಟ್ಟಾಗುವ ಮುಂಚಿನ ದಿನಗಳಲ್ಲಿ ಅವು ಕಡಲೆ ಬೀಜದ ಗಾತ್ರಕ್ಕೆ ಹಿಗ್ಗಬಹುದು. ಅಂಥ ಸಂದರ್ಭದಲ್ಲಿ ಮೊಲೆ ಬಿಗಿತ. ಕೊಂಚ ನೋವು. ಇರಿಸುಮುರಿಸು ಸಹಜ.

ಈ ಘಟ್ಟದಲ್ಲಿ ಸ್ತನಗಳ ಪರೀಕ್ಷೆ ಬೇಡ. ಉಳಿದ ದಿನಗಳಲ್ಲಿ ಸ್ತನದ ಪರೀಕ್ಷೆ ಉತ್ತಮ.

ಸ್ತನ ಪರೀಕ್ಷೆಗೆ ಮುನ್ನ ಸಣ್ಣದೊಂದು ಪ್ರಯೋಗ. ಕಣ್ಣು ಮುಚ್ಚಿ, ರೆಪ್ಪೆಯ ಮೇಲೆ ಬೆರಳ ತುದಿ ಇಡಿ. ಸ್ಪರ್ಶಿಸಿ. ಕಣ್ಣು ಗುಡ್ಡೆ ತಾಗುತ್ತದೆ. ಬೆರಳಾಡಿಸಿದರೆ ಕಣ್ಣು ಗುಡ್ಡೆಯ ಚಲನೆ ತಿಳಿಯುತ್ತದೆ. ಈಗ ರೆಪ್ಪೆಯ ಚರ್ಮ ಬೆರಳಲ್ಲಿ ಹಿಡಿದೆತ್ತಿ. ಚರ್ಮ ಮಾತ್ರ ಮೇಲೇಳುತ್ತದೆ.

ಈಗ ಮೂಗಿನ ತುದಿಗೆ ಬನ್ನಿ. ಚರ್ಮದ ಕೆಳಗಿನ ಮೃದ್ವಸ್ಥಿ ಸ್ಪರ್ಶಕ್ಕೆ ಸಿಗುತ್ತದೆ. ಬೆರಳಿಂದ ಚರ್ಮ ಒತ್ತಿದರೆ ಕೆಳಗಿನ ಮೃದ್ವಸ್ಥಿ ಕೂಡ ಚರ್ಮದ ಜೊತೆಗೆ ಚಲಿಸುತ್ತದೆ. ಬೆರಳ ಚಿಮ್ಮಟಿಗೆಯಿಂದ ಚರ್ಮ ಹಿಡಿದು ಎಳೆದರೆ ರೆಪ್ಪೆಯ ಚರ್ಮದ ಹಾಗೆ ಅದು ಬರುವುದಿಲ್ಲ.

ಕಣ್ಣುಗುಡ್ಡೆ ರೆಪ್ಪೆಯ ಚರ್ಮಕ್ಕೆ ಅಂಟಿರುವುದಿಲ್ಲ. ಅದರದು ಸ್ವತಂತ್ರ ಚಲನೆ. ಮೂಗಿನ ತುದಿಯ ಮೃದ್ವಸ್ಥಿ ಹಾಗಲ್ಲ. ಅದು ಚರ್ಮಕ್ಕೆ ಅಂಟಿರುತ್ತದೆ. ಅದು ಸ್ವತಂತ್ರವಾಗಿ ಚಲಿಸಲಾರದು. ಈ ವ್ಯತ್ಯಾಸ ಗಮನದಲ್ಲಿ ಇರಲಿ.

ಮೊಲೆಯೊಳಗಿನ ಹಾಲುಗ್ರಂಥಿಗಳು, ಗಂಟುಗಟ್ಟಿದ ನಾಳಗಳು ಕಣ್ಣುಗುಡ್ಡೆಯ ಹಾಗೆ ಚರ್ಮಕ್ಕೆ ಅಂದರೇ ಸ್ವತಂತ್ರವಾಗಿ ಚಲಿಸುತ್ತಾ ಇರುವವರೆಗೆ ಅಪಾಯ ಇಲ್ಲ. ಮೂಗಿನ ಮೂಳೆಯ ಹಾಗೆ ಅವು ಚರ್ಮಕ್ಕೆ ಅಂಟಿದ್ದರೆ, ಸ್ವತಂತ್ರವಾಗಿ ಚಲಿಸಲು ಸಾಧ್ಯ ಇಲ್ಲವಾದರೆ, ಬೆರಳ ತುದಿಗಳಿಂದ ಚರ್ಮ ಹಿಡಿದೆತ್ತಿದಾಗ ರೆಪ್ಪೆಯ ಹಾಗೆ ಅದು ಮೇಲೇಳದೇ ಇದ್ದರೆ, ತಕ್ಷಣ ಜಾಗೃತರಾಗಿ. ನುರಿತ ವೈದ್ಯರನ್ನು ಸಂಪರ್ಕಿಸಿ. ಮುಂದಿನ ಪರೀಕ್ಷೆ, ಪತ್ತೆ ಹಾಗೂ ಕ್ರಮಗಳನ್ನು ಅವರು ಮಾತ್ರ ನಡೆಸಬಲ್ಲರು.


ಸ್ಪರ್ಶದ ಸರಿಯಾದ ತಿಳುವಳಿಕೆಗೆ ಮೊದಲು ಕಣ್ಣು, ಮೂಗಿನ ಪ್ರಾಥಮಿಕ ಪರೀಕ್ಷೆ.

### ತಿಂಗಳಿಗೊಮ್ಮೆ ಪರೀಕ್ಷೆ.

ತಿಂಗಳಲ್ಲಿ ಒಂದು ಸಲ ಸ್ತನಗಳನ್ನು ತಾವೇ ಪರೀಕ್ಷಿಸಿ ನೋಡುವುದು ಉತ್ತಮ. ಸ್ಪರ್ಶ ಮತ್ತು ನೋಟ ಪ್ರಕೃತಿದತ್ತ ಕೊಡುಗೆ. ಇವು ಸ್ತನದ ಕ್ಯಾನ್ಸರ್‌ನ ಪ್ರಥಮ ಹಂತದ ಪತ್ತೆಗೆ ವರದಾನ. ನಿಮಗೆ ಬೇಕಾದ್ದು ದೊಡ್ಡ ಕನ್ನಡಿ. ತಿಂಗಳಲ್ಲಿ ಹತ್ತು ನಿಮಿಷದ ವ್ಯವಧಾನ ಮಾತ್ರ.

ಇಂಥ ಪರೀಕ್ಷೆಗೆ ಆಯಾ ತಿಂಗಳ ಮುಟ್ಟಿನ ಸ್ರಾವ ನಿಂತ ನಂತರದ ಕಾಲ ಅತ್ಯುತ್ತಮ, ರಜೋ ನಿವೃತ್ತಿ ಆದ ಮಹಿಳೆಯರು, ಹಿಸ್ಟೆರೆಕ್ಟಮಿ ಚಿಕಿತ್ಸೆಗೆ ಒಳಗಾದವರು ತಿಂಗಳ ಆರಂಭದಲ್ಲಿ ಇಂಥ ಪರೀಕ್ಷೆ ನಡೆಸಿಕೊಳ್ಳುವುದು ಒಳ್ಳೆಯದು. ಇಂಥ ಸ್ವಯಂ ಪರೀಕ್ಷೆ ಬೆಳಗಿನ ಹೊತ್ತು ನಡೆಯುವುದು ಒಳ್ಳೆಯದು.

ಈ ರೀತಿಯ ಪರೀಕ್ಷೆಗೆ ಮುಂದಾಗುವವರು ತಮ್ಮದೇ ಒಂದು ಕ್ರಮ ರೂಢಿಗೊಳಿಸಿಕೊಳ್ಳಬೇಕು. ಮೊದಲ ಸಲ ಪರೀಕ್ಷೆ ನಡೆಸಿದ ಮೇಲೆ ತಾವು ಗ್ರಹಿಸಿದ್ದು ಸರಿಯೇ? ತಪ್ಪೆ? ಎಂಬ ಅನಿಶ್ಚಿಯತೆ ಮೂಡ ಬಹುದು. ಚಿಂತೆ ಇಲ್ಲ. ಈ ಪರೀಕ್ಷೆಗಳು ಮುಂದುವರಿದಂತೆ ನಿಮ್ಮಲ್ಲಿಯೇ ಆತ್ಮ ವಿಶ್ವಾಸ ಬೆಳೆಯುತ್ತದೆ.

### ಸ್ಪರ್ಶ ತಿಳಿವು.

ಇಲ್ಲಿ ಮೊಲೆಯನ್ನು ಸ್ಪರ್ಶಿಸಿ ಆನಂದಿಸುವುದಕ್ಕಲ್ಲ ನಾವು ಹೊರಟಿರುವುದು. ಮೊಲೆಯ ಚರ್ಮದೊಳಗೆ, ತೀರಾ ಕೆಳಗೆ ಏನಾಗಿದೆ ಎಂದು ತಿಳಿಯಲು. ನಮ್ಮ ಬೆರಳ ತುದಿ ಅದ್ಭುತ ಸ್ಪರ್ಶಾಂಗ. ತಾನು ಸ್ಪರ್ಶದಿಂದ ಗ್ರಹಿಸಿದ್ದನ್ನು ತಕ್ಷಣ ಮೆದುಳಿಗೆ ಸಂವಹಿಸುವ ಅದ್ಭುತ ವ್ಯವಸ್ಥೆ ಬೆರಳು ಮತ್ತು ಮೆದುಳಿನ ನಡುವೆ ಇದೆ. ಇಂಥ ಸ್ಪರ್ಶದ ತಿಳಿವಿಗೆ ವೈದ್ಯರು 'ಪ್ಯಾಲ್ಪೆಷನ್' ಎನ್ನುತ್ತಾರೆ.

ಬೆರಳಿಂದ ಮುಟ್ಟಿದಾಗ ಮೃದುತ್ವ, ನಯ, ಎಣ್ಣೆಣ್ಣೆ ಅಥವಾ ಒಣಗಿರುವುದು ತಕ್ಷಣ ತಿಳಿಯುತ್ತದೆ. ಮೇಲೆ ಬೆರಳಾಡಿಸಿದಾಗ ಚರ್ಮ ಪೊರೆಯಾಗಿದೆಯೇ? ಸಣ್ಣ ಉಬ್ಬು ಆಗಿದೆಯೇ ಎಂದೆಲ್ಲ ತಿಳಿಯುತ್ತದೆ. ಆದರೆ ಚರ್ಮದ ಕೆಳಗೆ ಗಡ್ಡೆಯಾಗಿದೆಯೇ, ಕರಣೆಗಳಾಗಿವೆಯೇ ಎಂಬುದು ತಿಳಿಯದು. ಬೆರಳಿಟ್ಟಲ್ಲಿ ಒತ್ತಿ ಚರ್ಮದ ಮೇಲೆ ಒತ್ತು



ಸ್ವಯಂ ಪರೀಕ್ಷೆಗೆ ಬೆರಳನ್ನು ಚಲಿಸಬೇಕಾದ ಸರಿಯಾದ ಕ್ರಮ

ಬಿಗಿಯಾದರೆ, ಆನಂತರ ನಿಧಾನ ಬೆರಳು ಚಲಿಸಿದರೆ ಎಲ್ಲ ಸಂವೇದನಾ ನರಗಳು ಮೊಲೆಯೊಳಗಿನ ಬೆಳವಣಿಗ ತಿಳಿಯಲು ಸಹಕಾರಿ.

ಚರ್ಮದ ಮೇಲು ಭಾಗದ ಸ್ಪರ್ಶಕ್ಕೂ, ಚರ್ಮದ ಕೆಳಗಿನ ಅಂಗಭಾಗಗಳ ಮಾಹಿತಿ ಬೆರಳಿಂದ ಮುಟ್ಟಿ ಪಡೆಯುವುದಕ್ಕೂ ವ್ಯತ್ಯಾಸವಿದೆ. ಇದನ್ನು ತಿಳಿಯಲು ಸಣ್ಣದೊಂದು ಪ್ರಯೋಗ. ನಿಮ್ಮ ಬೆರಳು ನಿಮ್ಮದೇ ಇನ್ನೊಂದು ಕೈಯ ಮುಂಗೈ ಮೇಲಿರಿಸಿ. ಮೊದಲ ಸ್ಪರ್ಶಿಸಿ ಚರ್ಮದ ಪರೀಕ್ಷೆ ನಡೆಸಿ. ಆನಂತರ ಬೆರಳೊತ್ತಿ ಚರ್ಮದ ಕೆಳಗಿನ ನರ, ಮೂಳೆಗಳನ್ನು ಸ್ಪರ್ಶದಿಂದ ತಿಳಿಯಲು ಯತ್ನಿಸಿ. ಆಗ ವ್ಯತ್ಯಾಸ ತಿಳಿಯುತ್ತದೆ.

ಮೊಲೆಯ ಒಳಭಾಗದ ಸ್ಪರ್ಶದಿಂದ ಏನಿದೆ ಎಂದರಿಯಲು ಬೆರಳನ್ನು ಒತ್ತಿ ವೃತ್ತಾಕಾರವಾಗಿ ಚಲಿಸುತ್ತಾ ಹೋಗಿ. ಗಂಟುಗಳನ್ನು ಪರೀಕ್ಷಿಸಲು ಎರಡು ಅಥವಾ ಮೂರು ಬೆರಳು ಬಳಸಿ ಹಿಡಿದು, ಒತ್ತಿ ಗಾತ್ರ, ಗುಣಗಳನ್ನು ಸ್ಪರ್ಶದಿಂದ ತಿಳಿಯಿರಿ.


ಸ್ತನದ ಜೊತೆ ಪರೀಕ್ಷೆಗೆ ಒಳಗಾಗಬೇಕಾದ ಸುತ್ತಲಿನ ದೇಹ ಭಾಗ

**ಸ್ನಾನದ ಸಮಯದಲ್ಲಿ ಪರೀಕ್ಷೆ.**

ಸ್ತನ ಪರೀಕ್ಷೆಯ ಮೊದಲ ಹಂತ ಇದು. ನೇರವಾಗಿ ನಿಂತಿರುವ ಭಂಗಿಯಲ್ಲಿ ಈ ಪರೀಕ್ಷೆ ನಡೆಯಬೇಕು. ಚೆನ್ನಾಗಿ ಸೋಪು ಹಚ್ಚಿದ ಸ್ಥಿತಿಯಲ್ಲಿ ಪರೀಕ್ಷೆ ಆಗಲಿ. ಎಡಗಡೆಯ ಸ್ತನದ ಪರೀಕ್ಷೆ ಬಲಗೈಯಿಂದ


ವೃತ್ತಾಕಾರದ ಬೆರಳ ಚಲನೆಗೆ ಬಳಸಬೇಕಾದ ಕ್ರಮ

ಹಾಗೇ ಬಲಸ್ತನದ ಪರೀಕ್ಷೆ ಎಡಗೈಯಿಂದ ಆಗಬೇಕು. ಪರೀಕ್ಷೆಗೊಳಗಾಗುತ್ತಿರುವ ಸ್ತನದ ಮಗ್ಗುಲ ಕೈ ಮೇಲೆತ್ತಿ ತಲೆಯ ಮೇಲೆ ಅಥವಾ ಕುತ್ತಿಗೆಯ ಹಿಂಭಾಗ ಇರಿಸಿಕೊಳ್ಳಿ.

ಮೊದಲು ಎದುರಿನ ಕೈಯಿಂದ ಸ್ತನದ ಮೇಲುಭಾಗ, ಇನ್ನೊಂದು ಕೈಯಿಂದ ಕೆಳಗಿನ ಭಾಗ ಒತ್ತಿ ಹಿಡಿಯಿರಿ.

ಕೇವಲ ಸ್ತನ ಅಲ್ಲ, ಕುತ್ತಿಗೆಯ ಕೆಳಭಾಗದಿಂದ ಹಿಡಿದು, ಕಂಕುಳವರೆಗೂ ಬೆರಳುಗಳ ಸ್ಪರ್ಶ ಮುಂದುವರಿಯಬೇಕು. ಇದಕ್ಕಾಗಿ ಬೆರಳುಗಳನ್ನು ವೃತ್ತಾಕಾರವಾಗಿ ಚಲಿಸುತ್ತಾ ಹೋಗಬೇಕು. ಇದು ಅಮೇರಿಕಾದ ಕ್ಯಾನ್ಸರ್ ಸೊಸೈಟಿ ಸೂಚಿಸಿರುವ ಕ್ರಮ.

ಒಂದು ಕೈ ಕೆಳಭಾಗ ಒತ್ತಿ ಹಿಡಿದಾಗ, ಇನ್ನೊಂದು ಕೈಯಿಂದ ಮೇಲು ಭಾಗ ಇಡಿಯಾಗಿ ಒತ್ತಿ ಪರೀಕ್ಷಿಸಿ. ಹಾಗೆ ಮೇಲೆ ಒತ್ತಿ ಹಿಡಿದು ಕೆಳಭಾಗ ಪರೀಕ್ಷಿಸಿ. ಆನಂತರ ಅಂಗೈಯಿಂದ ಮೊಲೆಯನ್ನು ಒತ್ತಿ ಹಿಡಿದು ಬೆರಳು ಸ್ಪರ್ಶದ



ಪರೀಕ್ಷೆಯಲ್ಲಿ ಅನುಸರಿಸಬಹುದಾದ ಗಡಿಯಾರ ಚಲನೆಯ ಮಾದರಿ



ಸ್ನಾನದ ಸಮಯದಲ್ಲಿ ಪರೀಕ್ಷೆ

ಮೂಲಕ ವೃತ್ತಾಕಾರವಾಗಿ ಚಲಿಸುತ್ತಾ ಕಣಗಳು, ಗಂಟುಗಳು ಮುಂತಾದವನ್ನು ಪರೀಕ್ಷಿಸುತ್ತಾ ಹೋಗಬೇಕು.

**ಗಡಿಯಾರ ಪದ್ಧತಿ**

ಗಡಿಯಾರದ ಮುಳ್ಳುಗಳ ಚಲನೆಯ ಹಾಗೆ ಸ್ತನದ ಭಾಗದ ಮೇಲೆ ಬೆರಳುಗಳ ಚಲನೆ ನಿಧಾನವಾಗಿ ಸಾಗುವುದು ಒಂದು ಕ್ರಮ. ಹನ್ನೆರಡು



ಎರಡೂ ಕೈಗಳಿಂದ ಒತ್ತಿ ಪರೀಕ್ಷಿಸುವ ವಿಧಾನ



ಅಂಗಾತ ಮಲಗಿ ಪರೀಕ್ಷಿಸುವ ರೀತಿ

ಗಂಟೆಯ ಮುಳ್ಳುಗಳ ಸ್ಥಿತಿಯಿಂದ ಆರಂಭಿಸಿ, ಮುಳ್ಳು ಮುಂದೆ ಚಲಿಸುವಂ ನಿಧಾನವಾಗಿ ಬೆರಳುಗಳು ಚಲಿಸಿ ಮತ್ತೆ ಮೊದಲಿನ ಸ್ಥಾನಕ್ಕೆ ಬರುವುದರಿಂದ ಈ ಕ್ರಮಕ್ಕೆ ಗಡಿಯಾರ ಪದ್ಧತಿ ಎಂಬ ಹೆಸರು. ಇದರಿಂದ ಯಾವ ಭಾಗವು ಪರೀಕ್ಷೆಯಿಂದ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳುವುದು ಸಾಧ್ಯ.




ಬೆರಳಿನ ವೃತ್ತಾಕಾರದ ಚಲನೆಯ ಮಾರ್ಗ

**ಅಂಗಾತ ಮಲಗಿ ಪರೀಕ್ಷೆ**

ಅಂಗಾತ ಮಲಗಿದಾಗ ಸ್ತನಗಳ ಪರೀಕ್ಷೆ ಇನ್ನೊಂದು ಕ್ರಮ. ಆಗ ಎದೆಯ ಮೇಲೆ ಬಟ್ಟೆಯನ್ನು ಧರಿಸಿರುವುದು, ಟವೆಲನ್ನೋ, ಬಟ್ಟೆಯ ತುಂಡನ್ನೋ ಹಾಕಿಕೊಂಡಿರುವುದು ಉತ್ತಮ. ಇದರಿಂದ ಚರ್ಮ ಬೆರಳ ಚಲನೆಯ ಜೊತೆಗೇ ಚಲಿಸುವುದು ಕಡಿಮೆಯಾಗಿ, ಒಳಗಿನ ಅಂಗಭಾಗಗಳು ಸ್ಪರ್ಶಕ್ಕೆ ಸಿಗುತ್ತವೆ.

ಹೀಗೆ ಮಲಗಿದಾಗ ಪರೀಕ್ಷೆಯಾಗುವ ಸ್ತನದ ಮಗ್ಗುಲ ಕೈ ಮೇಲೆತ್ತಿ. ಇದರಿಂದಾಗಿ ಸ್ತನ ಕೇಂದ್ರ ಭಾಗದಲ್ಲಿ ಉಳಿಯುತ್ತದೆ. ಆ ಭಾಗದ ಕೆಳಗೆ ದಿಂಬನ್ನಾಗಲೀ, ಟವೆಲುಗಳನ್ನಾಗಲೀ ಇಟ್ಟುಕೊಳ್ಳುವುದು ಒಳ್ಳೆಯದು.

ಮೊದಲು ಕೈ ಮೇಲೆತ್ತಿ ಹಿಡಿದು, ನಂತರ ಆರಾಮಾಗಿ ಮಗ್ಗುಲಲ್ಲಿ ಕೈ ಚಾಚಿ ಇರಿಸಿಕೊಂಡ ಸ್ಥಿತಿಯಲ್ಲಿ ಪರೀಕ್ಷೆ ನಡೆಯಲಿ. ವೃತ್ತಾಕಾರದ ಕ್ರಮವಾಗಲೀ, ಗಡಿಯಾರ ಪದ್ಧತಿಯನ್ನಾಗಲೀ ನಿಮಗೆ ಸರಿ ಕಂಡ ಕ್ರಮದಿಂದ ಪರೀಕ್ಷೆ ನಡೆಸಿ. ■

# ಹೆಸರಿಲ್ಲದ ಕತೆ

■ ಚನ್ನಮ್ಮ ಸರಗಣಾಚಾರಿಮಠ

ದೀಪಾವಳಿ ಕಥಾಸ್ಪರ್ಧೆಯಲ್ಲಿ ಮೆಚ್ಚುಗೆ ಪಡೆದ ಕತೆ

**ಯಾವ ರೂಪದಾಗ ಮನಿಬಿಟ್ಟಿದ್ದಳೊ ಅದ ರೂಪದಾಗ ಮಾವನ ಮನಿ ಮುಟ್ಟಿದಾಗ ಕತ್ತಲ ಆಗಾಕ ತಾಸ ಉಳದಿತ್ತು. ಸೊಸಿ ಆಕಾರ ನೋಡಿ ಮಾವನ ಎದಿಗೆ ಕಲ್ಲ ಬಡದಂಗ ಆತು. ನಿಂತ ನೆಲ ಕುಸದಂಗ ಆತು. ಮಾವನ ಬಾಯಾಗಿಂದ ಮಾತು ಹೊರಗ ಬರಲಿಲ್ಲ. ಮನಿ ಒಳಗ ಹೋದ ಸತ್ಯವ್ವ ಹೊರಗ ಮಾರಿ ತೋರಿಸಲಿಲ್ಲ. ಗೌಡ ಎಲ್ಲಾ ಹಕೀಕತ್ ತಾಯಿ ಬಾಯಿಲೇ ತಿಳಕೊಂಡ. ಹೊರಗ ಹೇಳಕ ಬರಲಾರದು, ನುಂಗಾಕ ಬರಲಾರದು.**

ಗೌಡರ ಮನಿ ಗಂಟಿ ಸದ್ದಿಗೆ ಬೆಚ್ಚಿಬಿದ್ದು ನಿಚ್ಚಳಾದ ಹೊಲ್ಯೆರ ಕೆಂಚ. ದಿನಾಲು ಬೆಳಕು ಹರಿಯುಕ್ಕಿಂತ ಮುಂಚೆನ ಗೌಡರ ಮನ್ಯಾಗ ಘಂಟೆ ಸದ್ದು ಮಾಡುವಾಕಿ ಗೌಡರ ಸೊಸೆ ಸತ್ಯಮ್ಮಗೌಡಸ್ಯಾನಿ. ಕೆಂಚ ಸಣ್ಣವ ಇರುವಾಗಿಂದ ಭರಮಗೌಡರ ಮನ್ಯಾಗ ಜೀತದಾಳಾಗಿ ದುಡಿತಿದ್ದ. ಬೆಳಕ ಹರಿಯುಕ್ಕಿಂತ ಮುಂಚೆನ ಕೆಂಚ ಗೌಡರಮನಿ ಹೆಂಡಿಕಸ ಬಳಿಯಾಕ ಹೊಗೋದು ಕೆಂಚನ ಕಾಯಕ ಗಡಿಬಿಡಿ' ಎದ್ದವನ ಹರಕ ಮುರುಕ ಧೋತರಾನ ತಿರುವಿಮುರುವಿ ಸಿಗಸಿಕೊಂಡು, ಬಾಯಿ ಜೊಲ್ಲಿನ ಕಲಿ ಹೋಗಲಾರದಂಗ ಮಾರಿಗೆ ಒಂದಿಷ್ಟು ನೀರ ಹಾಕ್ಕೊಂಡು ಓಡು ಹೆಜ್ಯಾಗ ಗೌಡರ ಮನಿ ಬಾಗಿಲದಾಗ ಬಂದಾಗ ಭರಮಗೌಡರು ಎತ್ತಿಗೆ ಮೇವು ಹಾಕುತ್ತಿದ್ದರು. ಅಂಜಕೊಂತ ಒಳಗ ಹೋಗಿ ಕಸಬರಿಗಿ ಹಿಡಿಕೊಳ್ಳುದಕ ಗೌಡರ ಕಂಚಿನ ಕಂಠ ಕೇಳುದಕ ಸರಿಹೋತು. "ಲೇ ಕೆಂಚಾ ಮೈಮ್ಯಾಲೆ ಅರವು ಐತೆ ಇಲ್ಲಲೇ ಮಗನ, ರಾತ್ರಿ ಹೊಟ್ಟೆ ಒಡೆ ಕುಡುದ ಬಿದ್ದಿರಿತಿ ಮಗನ, ಎಚ್ಚರ ಹ್ಯಾಂಗ ಆಗಬೇಕ ಇನ್ನ ಕುಡಿಯುದು ಕಡಿಮೆ ಮಾಡಲೆ ಮಗನ" ಎಂದರು. ಗೌಡರ ಮಾತಿಗೆ ಎದುರಾಡದ ಕಸಬರಿಗಿ ಹಿಡಿದ ಕೈ ಬರಗುಟ್ಟಿ ಕೆತ್ತಿ ಕೆತ್ತಿ ಹೊಡಿಯುತ್ತಿತ್ತು. ಅಂಕಣದಾಗ ಕಟ್ಟಿದ ಎತ್ತುಗಳಿಗೆ ಕಾಲನ ಕಸ ಹೊಡಿಯಾಕ ಬಂದಾನ ಅನ್ನೊದು ಗೊತ್ತು ಆಗಿ ಕಾಲ ಎತ್ತಿ ಎತ್ತಿ ಹಿಂದಕ ಸರಿಯುತ್ತಿದ್ದವು. ಕೆಂಚನ ಮನಿ ಗೌಡರ ಮನಿ ದಾಟಿ ಕೆರ‍್ಯಾಗ ಇತ್ತು. ಅಜ್ಜ ಮಗ ಮೊಮ್ಮಗನ ಕಾಲದಿಂದ ಗೌಡರ ಮನ್ಯಾಗ ದುಡಿತಿದ್ದರು. ಗೌಡರ ಮನ್ಯಾಗ ಮಂದಿನ ಭಾಳ ಇರಲಿಲ್ಲ. ಮಾವ, ಸೊಸೆ, ತಾಯಿ ಮಗ ಅಂದ್ರ ಭರಮಗೌಡರು, ಗೌಡರತಾಯಿ ವೆಂಕಮ್ಮ ಗೌಡಸ್ಯಾನಿ. ಗೌಡರ ಅಕ್ಕನ ಮಗಳು ಸತ್ಯಮ್ಮಗೌಡಸ್ಯಾನಿ, ಗೌಡರ ಮಗ ಚಂದ್ರೇಗೌಡ, ದೊಡ್ಡ ವಾಡ್ಯಾದಾಗ ನಾಲ್ಕು ಮಂದಿ ಇದ್ದರು.

ಭರಮಗೌಡರ ಹೆಂಡತಿ ಚಂದ್ರುನ ಹಡದ ವರ್ಷ ತುಂಬುದರೊಳಗ ಹಡದ ಜಡ್ಡ ಹತ್ತಿ ಶಿವನ ಸನ್ನಿಧಿಗೆ ಸೇರಿದಳು. ಆಕೆ ಸಾಯುದಕ ಅಕ್ಕನ ಮಗಳು ಸತ್ಯಮ್ಮ ಗೌಡಸ್ಯಾನಿ ಬಾಳೆ ಮೂರಾಬಟ್ಟೆ ಆಗೋದಕ ಸರಿಹೋತು. ಸತ್ಯವ್ವ ಗೌಡಸ್ಯಾನಿ ನೋಡುದುಕ ಬಹಳ ಸುಂದರಿ. ಹಾಲಿನಂಥ ಮೈಬಣ್ಣ. ತಿದ್ದಿ ತೀಡಿದಂಥ ಮುಖ. ಮುಖದಾಗ ಹೇಳಿ ಮಾಡಿಸಿದಂತ ಕಣ್ಣು, ಬಾಯಿ,



ಮೂಗು, ತುಟಿ. ಹೊರಗ ಬಂದರೆ ಬೆಳದಿಂಗಳ ಬೀಳುವಂತ ಚೆಲುವು ಆಕೀದು. ಗೌಡರ ಸೊಸಿನ್ನ ಹೆಚ್ಚಾಗಿ ನೋಡಿದವರು ಕಡಿಮೆ. ಯಾಕಂದರ ಹೊರಗ ಬರುವಾಕಿ ಅಲ್ಲ. ತನ್ನ ಜೀವನ ಮೂರಾಬಟ್ಟೆ ಆದದಕ್ಕ ಮಂದಿಗೆ ಮಾರಿ ತೋರಸಾಕ ಗೌಡತಿ ಜಲಮ ಒಲ್ಲೆ ಅನಿಸಿತ್ತು. ಗೌಡರ ಜೀವನದಾಗ ಅಕ್ಕನ ಮಗಳು ಸತ್ಯವ್ವ ಗೌಡಸಾನಿ ಬಾಳೆ ಕೆಟ್ಟಿದ್ದು ದೊಡ್ಡ ಪೆಟ್ಟು ಆಗಿತ್ತು. ಯಾಕಂದರ ಮನೆತನ ಚೊಲೊ ಐತೆ ಅಂತಾ ಅಕ್ಕನ ಜವಾಬ್ದಾರಿ ತಾನ ಹೊತಗೊಂಡು ಮುಂದನಿಂತು ಮದುವಿ ಮಾಡಿಕೊಟ್ಟಿದ್ದರು ಗೌಡರು. ಆದರ ವರ್ಷ ತುಂಬುದುರೊಳಗ ಸೊಸಿ ಹಾಂಗ ಬರತಾಳಂತ ಕನಸ ಮನಸನ್ಯಾಗ ಕಂಡಿರಲಿಲ್ಲ.

ಅವತ್ತಿನ ದಿನ ಸತ್ಯಮ್ಮಗೌಡಸ್ಯಾನಿಗೆ ಕರಾಳವಾದ ದಿವ್ಸ ಆಗಿತ್ತು. ಗಂಡನ ಮನಿಗೆ ಹೋದಾಗಿನಿಂದ ಗಂಡನ ತಂದಿ ಅಂದ್ರ ಮಾವನ ಕಣ್ಣು ನೋಡಿದರ ಅಂಜಿಕಿ ಬಂದಂಗ ಆಗುತ್ತಿತ್ತು. ಗೌಡತಿ ಕಣ್ಣಿಗೆ ಅಪಾಯದ ಸೂಚನೆ ಕಂಡಂತೆ ಆಗಿತ್ತು. ಹೀಗೂ ಹಾಗೋ ಆದರೂ ಆರೇಳು ತಿಂಗಳು ಜೀವನ ಕೈಯಲ್ಲಿ ಹಿಡಕೊಂಡು ಸಂಸಾರ ನಡೆಸಿದಳು. ನುಂಗಾಕಬಾರದು ಉಗಳಾಕ ಬಾರದು. ಕೈಹಿಡಿದ ಗಂಡಗ ಹೇಳಬೇಕಂದರ ಗಂಡ ನಂಬಬೇಕಲ್ಲ. ಆಕಿ ಚೆಲುವಿಕಿ ಆಕಿಗೀನ ವೈರಿ ಆಗಿತ್ತು. ಮನಿತುಂಬ ಮಂದಿ ಇದ್ದರೂ ಮಾವ ಏನ ಕೆಲಸ ಇದ್ದರೂ ಸತ್ಯವ್ವಗೌಡಸ್ಯಾನಿನ ಕರಿತಿದ್ದಾ. ಒಲ್ಲೆ ಅನೂರದ ಕೈಯಾಗ ಜೀವ ಹಿಡ್ಕೊಂಡು ಕೆಲಸ ಮಾಡುತ್ತಿದ್ದಳು. ಅತ್ತಿಮಾವ ಅಂದರ ದೇವರು ಅನ್ನುವ ಅಂತ ಕಾಲದಲ್ಲಿ ರಾಕ್ಷಸರೂ ಇದ್ದರು. ಸತ್ಯವ್ವನ ಜೀವನದಾಗ ನೆಮ್ಮದಿನ ಇರಿಲಿಲ್ಲ. ಊಟಕ್ಕ ನೀಡಾಕ ಹೋದರ ಬೇಕಂತಲೇ ಮೈಕೈ ಮುಟ್ಟುತ್ತಿದ್ದ ಮಾವ. ದಿಟ್ಟಿಸಿ ತನ್ನನ್ನು ನೋಡುದು ನೆನಪಾದರ ಹೊಟ್ಯಾಗ ಹೇಳಲಾರದಂತ ತಳಮಳ ಆಗುತ್ತಿತ್ತು ಗೌಡತಿಗೆ. ಹಾಗೂ ಹೀಗೂ ಮದುವಿ ಆಗಿ ವರ್ಷ ಆಗಾಕ ಬಂತು. ಹುಲಿಗೆ ಬ್ಯಾಟಿ ಆಡುವ ಆಶೇನೂ ಆತು. ಮನಿ ಮಂದಿ ಎಲ್ಲಾ ಎಲ್ಲವ್ವನ ಗುಡ್ಡದ ಜಾತ್ರಿಗೆ ಹೋಗಾಕ ತಯಾರು ಆದ್ರು. ಮನಿಮುಂದ ಸತ್ಯವ್ವ ಗಂಡ, ಮಾವ ಹೀಂಗ ಮೂರು ಜನ ಉಳಕೊಂಡರು. ಹಿರಿಯಾರು ಹೇಳಿದ ಮ್ಯಾಲೇ ಕೇಳಕಬೇಕಲ್ಲಾ, ಸತ್ಯವ್ವ ಮನ್ಯಾಗ ಉಳಕ್ಕಂಡಳು ಬಯಸಿದ್ದು ಸಿಗೊ ಕಾಲ ಬಂತು ಅಂತ ಮುದೇಗೌಡ್ಗ ನಿಂತಲ್ಲೆ ನಿಲ್ಲಲಾರದಂಗ ಆಗಿತ್ತು. ಜಾತ್ರಿಗೆ ಹೋದ ಮಾರನೇದಿನ ಎಲ್ಲಾ ಮನಿ ಕೆಲಸ ಮುಗಿಸಿ ಜಳಕಕ್ಕ ತಯ್ಯಾರ ಆದಳು ಸತ್ಯಮ್ಮ. ಗಂಡ ಬಿಳಿಜೋಳ ಹೊಲ ಕಾಯಕ್ಕ ಹೋಗಿದ್ದ. ಮಾವ ಊರ ಹೀರೀತನ ಮಾಡಾಕ ಪಂಚಾಯಿತಿ ಕಟ್ಟಿಗೆ ಹೋಗಿದ್ದ. ಮನ್ಯಾಗ ಯಾರೂ ಇಲ್ಲದ್ದು ನೋಡಿ ಲಗೂನ ಜಳಕ ಮುಗಿಸಿದರ, ಗಂಡ ಬರತಾನ ಅವನ ಜೊತೆ ಉಣ್ಣಾಕ ಬರತೈತಿ ಮನಿ ತುಂಬಾ ಮಂದಿ ಇದ್ದಾಗ ಇಬ್ಬರೂ ಕೂಡಿ ಉಣ್ಣುದು ಕನಸಿನ ಮಾತ ಅಂತ ತಿಳಿದು ಸತ್ಯಮ್ಮ ಅವಸರದಿಂದ ತಲಿಬಾಚಿಕೊಂಡು ಬಚ್ಚಲಮನಿಗೆ ಹೋಗಿ ಜಳಕಕ್ಕ ನೀರು ತುಂಬಿ ಒಂದೊಂದ ಮೈಮ್ಯಾಲಿನ ಬಟ್ಟೆ ಬಿಚ್ಚಾಕ ಹತ್ತಿದಳು. ಇತ್ತ ಸಪ್ಪಳ ಇಲ್ಲದ ಮಾವ ಬಂದು ಬಿಟ್ಟಿದ್ದ. ಇನ್ನೇನ ಜಳಕ ಮಾಡಬೇಕಂತ ತಂಬಿಗ್ಯಾಗ ನೀರ ತುಂಬಿಕೊಳ್ಳಾಕ ಸತ್ಯವ್ವನ ದೃಷ್ಟಿ ಮಾವನ ಮ್ಯಾಲೆ ಹೋತು. ಮೈಮ್ಯಾಲೆ ಬಟ್ಟೆ ಹಾಕ್ಕೊಳ್ಳಬೇಕು ಅಂತ ತಿರಗು ದರಾಗ ಮಾವ ಸತ್ಯವ್ವನ್ನ ಹಿಡಕೊಬೇಕು ಅಂತಾ ಎದುರಿಸಿ ಬರುದಕ ಸರಿಹೋತು ''ಏ ಮಾವ ನೀ ಒಂದ ಹೆಜ್ಜೆ ಮುಂದ ಇಟ್ಟರ ನಿನ್ನ ಗತಿ ಏನ ಆಗತ ಅನ್ನೋದು ನನಗ ತಿಳಿದಿಲ್ಲಾ. ನಿನ್ನ ಹೊಲಸಬುದ್ಧಿ ನನಗ ಯಾವಾಗಲೋ ತಿಳಿದೈತಿ. ನನ್ನ ದೇವರಂಥ ಗಂಡಗ ರಾಕ್ಷಸನಂಥ ತಂದಿ ಇದ್ದೀ ನೀನು. ಸುಮ್ಮನ ಹಿಂದಕ ಸರಿ'' ಎಂದು ಸತ್ಯವ್ವ ಗರ್ಜಿಸಿದಳು. ''ನೋಡು ಬಾಯಿ ಮಾಡಬ್ಯಾಡ. ನಾ ಯಾರ ಎದುರಿಗೂ ಹೇಳೂದಿಲ್ಲಾ. ಇವತ್ತು ನಿನ್ನ ಕೈ ಬಿಡುದಿಲ್ಲಾ. ನಾ ಹೇಳಿದಂಗ ಕೇಳು'' ಅಂತಾ ಮುನ್ನುಗ್ಗಿ ಕೈ ಹಿಡಿಯುದಕ, ಸತ್ಯವ್ವ ಮಾವನ್ನ ದೂರ ನೂಕಿ ತನ್ನ ಕಾಲಿಂದ ಜೋರಾಗಿ ಒದ್ದೇಬಿಟ್ಟಳು. ಮೈಮೇಲೆ ಸೀರೆ ಹಾಕ್ಕೊಂಡು ತೊಟ್ಟ ಕುಪ್ಪಸದಲ್ಲಿ ಮನೆ ಬಾಗಿಲು ದಾಟಿ, ತನ್ನ ಸೋದರ ಮಾವನ ಮನೆ ದಾರಿ ಹಿಡಿದಳು.

ಯಾವ ರೂಪದಾಗ ಮನಿಬಿಟ್ಟಿದ್ದಳೊ ಅದ ರೂಪದಾಗ ಮಾವನ ಮನಿ ಮುಟ್ಟಿದಾಗ ಕತ್ತಲ ಆಗಾಕ ತಾಸ ಉಳದಿತ್ತು. ಸೊಸಿ ಆಕಾರ ನೋಡಿ ಮಾವನ ಎದಿಗೆ ಕಲ್ಲ ಬಡದಂಗ ಆತು. ನಿಂತ ನೆಲ ಕುಸದಂಗ ಆತು. ಮಾವನ ಬಾಯಾಗಿಂದ ಮಾತು ಹೊರಗ ಬರಲಿಲ್ಲ. ಮನಿ ಒಳಗ ಹೋದ ಸತ್ಯವ್ವ ಹೊರಗ ಮಾರಿ ತೋರಿಸಲಿಲ್ಲ. ಗೌಡ ಎಲ್ಲಾ ಹಕೀಕತ್ ತಾಯಿ ಬಾಯಿಲೇ ತಿಳಕೊಂಡು ಹೊರಗ ಹೇಳಕ ಬರಲಾರದು ನುಂಗಾಕ ಬರಲಾರದು. ಹೆಂಡ್ತಿ ಸತ್ತ ದುಃಖ ಮಾಸುದಕ್ಕಿಂತ ಮುಂಚೇಕ ಸೊಸಿ ಬಾಳೆ ಹಿಂಗ ಆದುದಕ್ಕ ಗೌಡಗ ದಿಕ್ಕ ತಿಳಿಲಾರದಂಗ ಆತು. ಸಣ್ಣಾಕಿ ಇರುತಲೇ ಜ್ಞಾಪಾನ ಮಾಡಿ ತನ್ನ ಕೈಯಾರಿ ಒಂದು ದಾರಿಗೆ ಹಚ್ಚಿದರ ಆ ದಾರಿ ಹೀಂಗ ಆಗತ್ತ ಅನ್ನುದು ಯಾರಿಗೆ ತಿಳಿದಿರತೈತಿ. ಊರ ತುಂಬ ಸುದ್ದಿ ಗೊತ್ತ ಆದರ ನನ್ನ ಮಾನ ಮರ್ಯಾದಿ ಮಣ್ಣು ಪಾಲ ಆಗುತ್ತ. ಸೊಸಿನ್ನ ವಿಚಾರ ಮಾಡಬೇಕು. ಊರ ತುಂಬ ಸುದ್ದಿ ಹಬ್ಬುದಕ್ಕಿಂತ ಮುಂಚೆಕ ಸೊಸಿನ್ನ ತನ್ನ ಜಾಗಾಕ ಕಳಿಸಿ ಬರಬೇಕ. ಆಕಿ ಮನಸೀನ ವಿಚಾರ ಯಾರ ಕೇಳಬೇಕು.

ಸತ್ಯವ್ವ ಗೌಡಸ್ಯಾನಿಯ ಮನಸಿನ ಮಾತು ಹೊಟ್ಯಾಗಿನ ಗುಣ ಗೌಡರ ತಾಯಿ ಅಂದರ ಆಕೀನ ಹೆಣ್ಣಜ್ಜಗೆ ಗೊತ್ತು. ಸಣ್ಣಾಕಿ ಇರುಪಾಗಿಂದ ಜ್ಞಾಪಾನ ಮಾಡಿದಾಕಿ ಅಜ್ಜಿ ಮುಂದ ತನ್ನ ನಿರ್ಧಾರ ತಿಳಿಸಿ 'ಇವತ್ತಿಗೆ ನನ್ನ ಗಂಡನ ಮನಿ ಋಣ ತೀರಿತು. ನೀವು ಎಲ್ಲಾರೂ ಕೂಡಿ ಒತ್ತಾಯ ಮಾಡಿದರ ನಾನು ಕೇರಿನೋ ಭಾವಿನೋ ನೋಡಬೇಕು ಅಷ್ಟೆ, ಆ ಮನಿ ಹೊಸ್ತೀಲ ಮತ್ತೆ ತುಳಿಬೇಕಾದರ ಆ ರಾಕ್ಷಸನಂಥ ಮುದುಕ ಮಾವ ಗೋರಿಗೆ ಹ್ವಾದ ಮ್ಯಾಲೆ ನಾನು ಆ ಮನಿಗೆ ಕಾಲ ಇಡಾಕಿ. ಅಲ್ಲೀತನ ನೀವು ಯಾರೂ ಏನು ಹೇಳಿದರೂ ನಾನು ಕೇಳುವಾಕಿ ಅಲ್ಲಾ. ಒಂದು ವ್ಯಾಳೆ ನಾನೇರ ಕೆಟ್ಟದಾರಿ ಹಿಡಿದರ ಅವತ್ತಿನ ದಿವಸ ನನ್ನ ಮಾವ ನನ್ನ ಕಡದ ಹೆಡಗಿ ತುಂಬಲಿ'' ಅಂತ ಬೋರ್ಯಾಡಿ ಅತ್ತಾಗ ವೆಂಕಮ್ಮ ಗೌಡತಿಗೆ ಕಳ್ಳ ಹರದ ಕಡೇಕ ಬಂದಷ್ಟ ಸಂಕಟ ಆತು. ''ನೋಡು ನನ್ನ ಮೊಮ್ಮಗಳ, ನಿನ್ನ ಮಾತ ಕೇಳಿದರ ನನ್ನ ಹೊಟ್ಯಾಗ ಬೆಂಕಿ ಬಿದ್ದಾಂಗ ಆಗುತ್ತ ಯವ್ವಾ ಆ ಮುದಿ ಭಾಡ್ಯಾಗ ಮಕ್ಕಳ ಮರಿ ಇದ್ದು ಇಂಥ ಹಲಕಟ್ ಕೆಲಸ ಹ್ಯಾಂಗ ಮಾಡುವಂಗ ಆತ ಎವ್ವಾ. ಬಂಗಾರದಂಥ ನನ್ನ ಮುದ್ದೀನ ಮೊಮ್ಮಗಳ ಬಾಳೆ ಹಾಳ ಮಾಡಿದನಲ್ಲಾ ಎವ್ವಾ. ಅವನ ಉಡದಾರದಾಗ ಉಪ್ಪ ತುಂಬಲಿ, ನನ್ನ ಕಣ್ಣೀರ ತಟ್ಟಲಿ, ದೇವ್ರು ಇಂತಾದ ನೋಡುಕ ನನ್ನ ಜನ್ಮ ಇಟ್ಟಂಗ ಕಾಣಸತೈತಿ. ನಿಮ್ಮ ಮಾವನ ಬಾಳೆ ಹೀಂಗ ಆತು, ಸಣ್ಣ ಕೂಸು ಬಿಟ್ಟು ಸೊಸಿ ಸತ್ತು ಹೋದಳು. ಇಂಥದರಾಗ ನಿನ್ನ ಬಾಳೆ ಮೂರಾಬಟ್ಟೆ ಆತು ನಾ ಹ್ಯಾಂಗ ಕಣ್ಣಲಿ ನೋಡಲಿ. ದೇವರು ಉಣ್ಣಾಕ ತಿನ್ನಾಕ ರಗಡ ಕೊಟ್ಟಾನ. 'ವನ ಎಲ್ಲಾ ಹಣ್ಣು ಗಿಳಿ ಬಾಯಿಗೆ ಹಣ್ಣು' ಅನ್ನುವಂಗ ಆತಲ್ಲ ನನ್ನ ಮೊಮ್ಮಗಳ'' ಎಂದು.

''ನೀ ಸುಮ್ಮ ಇರಬೇ, ಅತ್ತರ ಕರದರ ಯಾವೂದೂ ಸುದ್ದಿ ಆಗೂದಿಲ್ಲ. ನಾನು ಗಟ್ಟ

## ಉಪ್ಪಿಟ್ಟು

**ಉಪ್ಪಿಟ್ಟು ನರಸಿಂಹಯ್ಯನವರ ಕತೆ ನಿಮಗೆ ಗೊತ್ತು. ಡಾ. ಎಚ್ಚೆನ್ ತಮ್ಮ ಆತ್ಮ ಚರಿತ್ರೆ 'ಹೋರಾಟದ ದಿನಗಳು' ಪ್ರಕಟಿಸಿದ ನಂತರ ಚಾಲ್ತಿಗೆ ಬಂದ ಹೆಸರಿದು. ವಿದೇಶಕ್ಕೆ ಓದಲು ಹೋಗಿದ್ದ ಎಚ್ಚೆನ್‌ಗೆ ಅಡುಗೆ ಬರುತ್ತಿರಲಿಲ್ಲ. ನಿತ್ಯ ಬೆಳಿಗ್ಗೆ, ರಾತ್ರಿ ಉಪ್ಪಿಟ್ಟು ಮಾಡಿಕೊಂಡೇ ತಿಂದು ಬದುಕಿ ವಾಪಸು ಆದರು. ಹಾಗಾಗಿಯೇ 'ಉಪ್ಪಿಟ್ ನರಸಿಂಹಯ್ಯ' ಎಂಬ ಹೆಸರು ಪ್ರಚಲಿತವಾಯಿತು.**

**ಅದಕ್ಕೂ ಮುಂಚೆ ಅವರನ್ನು ಕುಂಬಳಕಾಯಿ ನರಸಿಂಹಯ್ಯ ಎಂದೇ ಗೇಲಿ ಮಾಡುತ್ತಿದ್ದರು. ಆಯುಧ ಪೂಜೆ ಸಮಯದಲ್ಲಿ ಸಾವಿರಾರು ಕುಂಬಳಕಾಯಿ ಒಡೆಯುವ ಪದ್ಧತಿ ಖಂಡಿಸಿ ಅವರು ಲೇಖನವನ್ನೇ ಬರೆದಿದ್ದರು. ಆತ್ಮಾರ್ಪಣೆ ಮಾಡಿಕೊಂಡ ಕುಂಬಳಕಾಯಿ ಬಗ್ಗೆ ಅವರ ಕಾಳಜಿ ತೀರಾ ವಿಪರೀತ ಎಂದು ಉಳಿದವರ ಆಕ್ಷೇಪಣೆ.**

**ಇನ್ನೂ ಒಂದು ಹೆಜ್ಜೆ ಮುಂದಿಟ್ಟ ಅವರು, ಸತ್ಯ ಸಾಯಿಬಾಬಾ ಉಂಗುರ, ವಾಚು ಸೃಷ್ಟಿಸುವ ಬದಲು 'ತಮಗೊಂದು ಕುಂಬಳಕಾಯಿ ಸೃಷ್ಟಿಸಿಕೊಡಲಿ' ಎಂದು ಸವಾಲು ಹಾಕಿ ತಮ್ಮ ಕುಂಬಳಕಾಯಿ ಪ್ರೇಮ ಪ್ರಕಟಿಸಿದ್ದರು.**

## ರವೆ ಇಡ್ಲಿ ಅಧ್ಯಕ್ಷರು

'ಹೀಗೂ ಒಬ್ಬರು ಇರುತ್ತಾರಾ!' ಅನ್ನಿಸಬಹುದು. ಈಗ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾಗಿರುವ ಬರಗೂರು ರಾಮಚಂದ್ರಪ್ಪ ತಾವಾಗಿ ಈ ವಿಷಯ ಹೇಳಿಕೊಳ್ಳುವವರೆಗೂ ತಿಳಿದಿರಲಿಲ್ಲ. ಸಾಹಿತ್ಯ ಅಕಾಡೆಮಿಗೆ ಅವರು ಹಿಂದೆ ಅಧ್ಯಕ್ಷರಾಗಿದ್ದರು. ಬೆಳಗ್ಗೆ ಕಾಲೇಜು ಮುಗಿಸಿಕೊಂಡು ಮಧ್ಯಾಹ್ನ ಸೀದಾ ಅವರು ಅಕಾಡೆಮಿ ಆಫೀಸಿಗೆ ಬರುತ್ತಾ ಇದ್ದರು. ಅಷ್ಟೊತ್ತಿಗೆ ಊಟದ ಹೊತ್ತು ಮುಗಿದಿರುತ್ತಿತ್ತು. ಹಸಿವೆ ತಾಂಡವ, ಪಕ್ಕದ ಹೋಟೆಲಿಂದ ರವೆ ಇಡ್ಲಿ ತರಿಸಿಕೊಂಡು ತಿನ್ನುತ್ತಾ ಇದ್ದರು. ಇದೇ ಪರಿಪಾಠ ಆಗಿ, ಅವರ ಗೆಳೆಯರು, ಪರಿಚಿತರು ಬರಗೂರು ಅವರನ್ನು 'ರವೆ ಇಡ್ಲಿ ಅಧ್ಯಕ್ಷರು' ಅನ್ನುತ್ತಿದ್ದರಂತೆ.

ಬಂಡಾಯಗಾರರಾದ ಅವರನ್ನು ಬೆಂಕಿ ಬರಗೂರು ಎನ್ನುವುದು ನಮಗೆ ಗೊತ್ತಿತ್ತು. ಈಗ ಹೊಸದೊಂದು ಬಿರುದೂ ಅವರಿಗೆ ಸೇರಿಕೊಂಡಂತೆ ಆಗಿದೆ.

ಮನಸ ಮಾಡೀನಿ. ಮಾನ ಮರ್ಯಾದಿಕ್ಕಿಂತ ನನ್ನ ಬಾಳೆ ಬದುಕು ಹೆಚ್ಚು ಆಗೈತೇನು. ನೀವ್ವಾರೂ ಚಿಂತಿ ಮಾಡಬ್ಯಾಡಿರಿ. ನನ್ನ ಹಣೆ ಬರದಾಗ ಶೆಟಿಗೆವ್ವ ಹೀಂಗ ಬರದೀರಬೇಕು ಆಗಿ ಹೋದ ಮಾತಿಗೆ ಊರ ಮುಂದ ಕುಂತು ಅತ್ತರಂತೆ.''

ಅಯ್ಯ ನನ್ನ ಮಗಳ ನಿನಗ ಇದ್ದ್ಯಾಟ ಧೈರ್ಯ ನನಗ ಯಾಕ ಬಂದೀತು. ಹರೇದ ಮಗಳು ಬೆಂಕಿ ಶೆರಗಿನ್ಯಾಗ ಕಟಗೊಂಡು ಕುಂದುರಸಾ ಯಮ್ಮಾ ನಾ ಮೊದಲ ಹೇಳೀನಿ. ನಾನು ಬದುಕಬೇಕಂದರ ನನಗ ಏನೂ ಅನಬ್ಯಾಡ್ರಿ. ಮತ್ತ ನೀವು ಅದ ನರಕಕ್ಕೆ ಹೋಗು ಅಂದ್ರ ನನ್ನ ಜನ್ಮದ ಆಶೆ ಬಿಡ್ರಿ.'' ಮೊಮ್ಮಗಳ ಕಟ್ಟನಿಟ್ಟ ಮಾತಿಗೆ ವೆಂಕಮ್ಮ ಗೌಡಸ್ಯಾನಿ ಬಾಯಿ ಕಟ್ಟಿ ಹೋತು. ಮಗನ ಮುಂದ ಮೊಮ್ಮಗಳ ಸುದ್ದಿ ಆಕೀ ಹೇಳಿದ ಮಾತು ಎಲ್ಲಾ ಹೇಳಿದಳು. ಗೌಡರ ಆತ್ಮೀಯಗೆಳೆಯ ಒಬ್ಬಾಂವ ಆ ಊರಾಗ ಇದ್ದಾ. ಅವನ ಕೂಡ ಹೇಳಿಸಿದರ ನಮ್ಮ ಹಾದಿಗೆ ಬರತಾಳ ಅಂತಾ ವಿಚಾರ ಮಾಡಿದ್ರು ಗೌಡ್ರು.

ಯಾರ ಏನ ಹೇಳಿದರೂ ತನ್ನ ಹಟದ ಮುಂದ ಬೇರೆಯವರ ಆಟ ನಡೆದಿಲ್ಲ. ಸತ್ಯವ್ವ ಅಂದ್ರ ಸತ್ಯವಾನ ಸಾವಿತ್ರಿ ಇದ್ದ ಹಾಗೆ. ಕಲಿಯುಗದಾಗೂ ಇಂತವರು ಇರುವದಕ ಅಲ್ಪ ಸ್ವಲ್ಪ ಮಳಿ ಬೆಳಿ ಕಾಣುದು.

ಗಂಡನ ಮನಿ ಬಿಟ್ಟ ಬಂದ ನಾಲ್ಕೈದು ವರ್ಷದಾಗ ಸತ್ಯವ್ವನ ಗಂಡ ಮತ್ತ ಮದುವಿ ಆದ. ಮಕ್ಕಳು ಆದರು. ಸತ್ಯವ್ವನ್ನ ಅನುಮತಿ ತಗೊಂಡ ಲಗ್ನ ಮಾಡಿದರು. ಗಂಡ ಬರುದಕ ಹೋಗುದುಕ ಸಹಿತ ಅನುಮತಿ ನೀಡಲಿಲ್ಲ. ಸತ್ಯವ್ವ ಗೌಡತಿ ಸಂಸಾರದ ಸುಖ ಕಂಡ ಮ್ಯಾಲೆ ಮನಸ್ಸು ಕಲ್ಲು ಮಾಡುದು ಭಾಳ ಕಠಿಣ. ಆದ್ರ ಗೌಡ್ರ ಮಗನ್ನ ತನ್ನ ಹೊಟ್ಯಾಗಿನ ಮಗನಿಕ್ಕಿಂತ ಹೆಚ್ಚ ಮಾಡಿ ಜ್ವಾಪಾನ ಮಾಡಿದಳು. ಗೌಡ್ರು ಸೊಸಿ ಬಂದಾಗಿಂದ ಅಂಕಣ ಕಟ್ಟಿ ಎರಲಿಲ್ಲ.ಕಂಡವರು ಕಂಡಂಗ ಕಥೆ ಕಟ್ಟುದು ಗೌಡ್ರಿಗೆ ಬೇಕಾಗಿರಲಿಲ್ಲ. ತನ್ನ ಸಲುವಾಗಿ ಅಡಗಿ ಮಾಡಾಕ ತನ್ನ ಸುಖ ದುಃಖ ಕೇಳಾಕ ಒಬ್ಬ ಹೆಂಗಸಿನ್ನ ಇಟಗೊಂಡ ಕುರಬರ ಶಿವಬಾಯಿ ಗಂಡನ್ನ ಬಿಟ್ಟು ಗೌಡ್ರ ಬೆನ್ನ ಹತ್ತಿದಳು. ಗೌಡ್ರು ತನ್ನ ತ್ವಾಟದಾಗ ಒಂದು ಸಣ್ಣ ಮನಿ ಕಟ್ಟಿಸಿ ತಾವಿಬ್ಬರ ಇರಾಕ ಹತ್ತಿದರು.

ಊರ ಮುಂದಿನ ತ್ವಾಟದಾಗ ಹನ್ನೆರಡು ಎಕರೆ ನೀರಾವರಿ. ಒಕ್ಕಲತನ ಒಳ್ಳೆ ಮಟ್ಟಸವಾಗಿ ನಡೆಸುತ್ತಿದ್ದರು ಗೌಡ್ರು. ಆಳಿನ ಹಿಂದ ಶಿವಬಾಯಿ ನಿಂತ ಕೆಲಸ ಮಾಡುಸುತ್ತಿದ್ದಳು. ಗೌಡ್ರು ಕುಡುದು ಬಂದ್ರು ಕುಡುದವರಂಗ ಕಾಣಿಸ್ತಿರಲಿಲ್ಲ. ಸೊಸೆ ಜೊತಿ ವಾರದಾಗ ಒಂದೆರಡು ಭೆಟ್ಟಿ. ಮಾತು ಕೂಡ ಅಷ್ಟಕ್ಕಷ್ಟೆ. ಗೌಡ್ರ ಚಟಗಳಿಗೆ ಸೊಸಿ ಸೇರಲಿಲ್ಲ. ತನ್ನಂಗ ಯಾರು ಇರತಾರ. ಹೆಣ್ಣ ಮಕ್ಕಳು ಮನಸ್ಸು ಗಟ್ಟಿ ಇದ್ದಂಗ ಗಂಡಸರ ಮನಸ್ಸು ಗಟ್ಟಿ ಇರಬೇಕಲ್ಲ. ಎರಡು ಊರ ಗೌಡಕಿ ಮಾಡುತ್ತಿದ್ದ ಗೌಡ್ರು. ಮಂದ್ಯಾಗ ತಲೆ ತಗ್ಗಿಸುವಂತೆ ಆಗಿತ್ತು ಅವರ ಜೀವನ! ಗೌಡ್ರ ಬುದ್ದಿವಂತಿಕೆ ಅಂದ್ರ ಹೇಳಾಕ ಬರಲಾರದಷ್ಟು. ಯಾಕಂದರ ಅವರ ನ್ಯಾಯ, ಕಾನೂನು ಕಾಯಿದೆ ಬಲ್ಲವರಿದ್ದರು. ಎಂಥಾ ನ್ಯಾಯ ಇದ್ದರೂ ಲಟಕಿ ಹೊಡಿಯುದರಾಗ ಮುಗಿಸಿ ಬಿಡುತ್ತಿದ್ದರು.

ಸತ್ಯವ್ವ ಗೌಡತಿಗೆ ಒಂಟಿತನ ಕಾಡಲಿಲ್ಲ. ಕೈಯೊಳಗ ಆಡೋ ಕೂಸು ಇತ್ತು. ಮನ್ಯಾಗ ಅಜ್ಜಿ ಇದ್ದಳು. ಆದ್ರ ಗಂಡನ ಮನಿ ಬಿಟ್ಟ ಬಂದ ಏಳೆಂಟು ವರ್ಷದಾಗ ಸತ್ಯವ್ವ ಗೌಡತಿಗೆ ಬರಸಿಡಿಲಿನಂತಾ ಸುದ್ದಿ ಬಂತು. ಗಂಡಗ ದೊಡ್ಡ ಬ್ಯಾನಿ ಹತ್ತಿತ್ತು. ತಂದಿ ಮಾಡಿದ ಪಾಪಕ್ಕ ಮಗಗ ಯಾಕ ದೇವರು ಶಿಕ್ಷೆ ಕೊಟ್ಟ. ನನ್ನ ಗಂಡ ಎಲ್ಲಿ ಇದ್ದರೂ ಚೊಲೊ ಇರಲಿ ಅಂತಾ ದೇವರಿಗೆ ದಿವ್ಸ ಕೇಳತಿದ್ದಿನಲ್ಲಾ, ದೇವರು ಇದೊಂದು ನನಗ



ದೊಡ್ಡ ಚಿಂತಿ ಹಾಕಿದನ್ಲಾ ಅಂತಾ ಸತ್ಯವ್ವ ಗೌಡತಿ ಮನಸಿಗೆ ಬಹಳ ಹಚಕೊಂಡ್ಲು. ರಾಮಭಟ್ಟನ ಹತ್ತಿರ ಹೋಗಿ ಕೇಳಿದರ ದೇವಿಪುರಾಣ ದಿನಾಲೂ ಪಠಣ ಮಾಡಿದರ ನಿನ್ನ ಗಂಡನ ರೋಗ ತನ್ನಿಂದ ತಾನೇ ಹೋಗುತ್ತ. ಆದ್ರೆ ವರ್ಷಕ್ಕ ಒಂದು ದಿನ ಮಹಾನವಮಿ ದಿನ. ರಾತ್ರಿ ಪುರಾಣ ಪೂರಾ ಮುಗಿಸಿರಿ. ದೇವಿಗೆ ನಂದಾದೀಪ ಬೆಳಗಿಸಿರಿ ಅಂತ ಭಟ್ಟರು ಹೇಳಿದಾಗ ಸತ್ಯವ್ವನ ಮನಸ್ಸಿನ್ಯಾಗ ದೇವಿ ಹೊಕ್ಕಳು. ಮುಂದೆ ಬರುವ ಮಹಾನವಮಿಯಿಂದ ದೇವಿ ಪುರಾಣ ಸುರು ಮಾಡಿ ಬಿಟ್ಟಳು. ಬೆಳಕು ಹರಿಯಕ್ಕಿಂತ ಮುಂಚೇನ ಎದ್ದು ತಣ್ಣೀರ ಜಳಕ ಮಾಡಿ, ಸೂರ್ಯ ತಾಯಿ ಹೊಟ್ಯಾಗಿಂದ ಬರುದಕ ಗೌಡ್ರ ಮನ್ಯಾಗಿಂದ ಪೂಜೆ ಮುಗಿಸಿದ ಗಂಟಿ ಸದ್ದು ಕೇಳಿಸುತ್ತಿತ್ತು. ಸತ್ಯವ್ವ ಯಾಕ ಪೂಜೆ ಹಿಡದಾಳ ಅನ್ನುದು ಯಾರಿಗೂ ತಿಳಿದಿರಲಿಲ್ಲ. ವಾಡೆದಂಥ ಮನಿ ಹೊರಗಿಂದ ಒದರಿದರ ಒಳಗಿನವರಿಗೆ ಕೇಳೂರದಂಥ ದೊಡ್ಡ ಮನಿ. ಮನಿತಕ್ಕ ಮಂದಿ ಇರಲಿಲ್ಲ ಮನಿಯೊಳಗ. ಬರೀ ಚಿಂತಿ ಮುಸುಕು ಮನಿ ತುಂಬಾ ತುಂಬಿತ್ತು. ದೇವರು ಒಂದು ಕೊಟ್ಟರೆ ಇನ್ನೊಂದು ಕಸಗೊಳ್ಳುದು ಅವನ ಕೆಲಸ. ಗೌಡರ ಮನೆತನದಾಗ ಯಾವುದಕ್ಕೂ ಕಡಿಮೆ ಇರಲಿಲ್ಲ.

ಗೌಡ್ರು ಸೊಸಿ ಬಗ್ಗೆ ಚಿಂತಿ ಮಾಡೋದು ಬಿಟ್ಟಿರಲಿಲ್ಲ. ಆಕೀನ ಬಾಳಿನಾಗ ಬಿರುಗಾಳಿ ಬೀಸೂದು ಕಂಡು ತತ್ತರಿಸಿ ಬಿಟ್ಟಿದ್ದರು. ಉಂಡು ಕೂಳು ಹೊಟ್ಟಿಗೆ ಹತ್ತಿರಲಿಲ್ಲ. ಮಾವ ಬರಬರುತ ಸೊರಗೊದ ಕಂಡು ಸೊಸಿ ದೂರದಿಂದ ಮರ ಮರ ಮರಗುತ್ತಿದ್ದಳು. ಮೊಮ್ಮಗಳ ಚಿಂತ್ಯಾಗ ಅಜ್ಜಿ ಕೂಡಾ ಸೊರಗಿ ಸಾಯು ಹೆಣ ಆಗಿದ್ದಳು. ಆದರ ಸತ್ಯವ್ವ ಗೌಡತಿ ಮಾತ್ರ ಮನೆಯೊಳಗ ಇದ್ದ ಬಿಸಿಲಿನ ಮಾರಿ ಕಾಣದ ನಿಂಬಿ ಹಣ್ಣಿನ ಬಣ್ಣ ಬಂದಿತ್ತು. ವರ್ಷಕ್ಕೊಂದು ದಿನ ಮನ್ಯಾಗ ಹಬ್ಬ ದೇವಿ ಪುರಾಣ ಭಜನಿ ಮೇಳದವರು ಬರುತ್ತಿದ್ದರು. ಗೌಡಗ ಮಂದಿ ಏನ ಕಡಿಮಿ 'ಕೈ ಮಾಡಿದರ ಕೈಲಾಸನ' ಬರುತ್ತಿತ್ತು. ಬೆಳ್ಳಬೆಳ್ಳತನ ರಾಮಭಟ್ಟನ ಕೂಡ ಪುರಾಣ ಓದಿಸಿ ಬೆಳಕ ಹಳಿಯುದುಕ ಪುರಾಣ ಮಂಗಲ ಮಾಡುತ್ತಿದ್ದರು. ರಾತ್ರಿ ಪೂರಾ ಬೇಕಾದವರನ ಕರಕೊಂಡ ಗೌಡಸ್ಯಾನಿ ಹುಗ್ಗಿ ಹೋಳಿಗಿ ಮಾಡಿರುತ್ತಿದ್ದಳು. ಮರುದಿನ ಮುಂಜಾನೆ ಬೇಕಾದ ಮಂದಿನ ಕರದು ಊಟ ಮಾಡಿಸುತ್ತಿದ್ದಳು.

ಮಂದಿ ಬಾಯಿಸುಮ್ಮನ ಇರೂರದು. ಕಟ್ಟಿಮ್ಯಾಲೆ ಕುಂತು ನಿಂಗವ್ವ ಗಂಗವ್ವ ಮಾತಾಡುತ್ತಿದ್ದರು. 'ನೋಡು ಎಕ್ಕಾ ನಾನು ನೋಡಾಕತ್ತಿ ಏಳೆಂಟು ವರ್ಷ ಆತು ಗೌಡರ ಮನಿಯಾಗ ದೇವಿ ಪುರಾಣ ಯಾಕ ಚಾಲೂ ಮಾಡಿದರ ಅನ್ನುದ ತಿಳಿಯಲಿಲ್ಲ ಅಂತ ನಾಗವ್ವ ಅಂದ್ರ ಅಯ್ಯ ನಿನ್ಗ ತಿಳಿದಿಲ್ಲೇನ ಸೊಸಿ ಬಾಳೆ ಮೂರಾಬಟ್ಟೆ ಆತು ಒಂದು ಹಾದಿಗೆ ಅತ್ತಲಿ ಅಂತ ಏನರ ಮಾಡತಿರಬಹುದು ಬಿಡ ಇದರಾಗ ಏನು ದೊಡ್ಡ ಮಾತ ಐತಿ. ಅಲ್ಲ ಎಕ್ಕಾ ದೊಡ್ಡ ಮಾತರ ಇರಲಿ ಸಣ್ಣ ಮಾತರ ಇರಲಿ ಹೊತ್ತು ಹ್ವಾದ ಮ್ಯಾಲ ಮತ್ತ ಬರತೈತೇನ. ಇನ್ನ ಮ್ಯಾಂಗಿಂದ ಸೊಸಿ ಬಾಳೆ ಏನ ಸುದ್ದ ಮಾಡತಾನ ಗೌಡ. ತಾನು ಹೆಂಡ್ತಿ ಸತ್ತವ. ಈಕಿ ಗಂಡ ಬಿಟ್ಯಾಕಿ ತಿರಗಿ ಆಕಿ ಗಂಡಗ ಮದವಿ ಆಗಿ ಮಕ್ಕಳ ಸತ ಹುಟ್ಯಾರ. ಈಕಿದೇನ ನೆಡಿತೈತಿ ಅದೇನ ಅಂತಾರಲ್ಲ 'ಸವತಿ ಅಂದ್ರ ಸತ್ತ ಹೆಣ ಕೂಡ ನಿಂದರತೈತಿ. ಈಕಿ ಗಂಡನ ಮನಿಗೆ ಹೋದಂಗ ಬಾಳೆ ಮಾಡಿದಂಗ.' ಅಯ್ಯಾ ಇರಲಿ ಬಿಡಬೇ ಮಾಡಿದವರ ಪಾದ ಆಡಿದವರ ಬಾಯಾಗಂತ ನಮಗ್ಯಾಕ ಬೇಕು ಅವರವರ ಹಣೆ ಬರದಾಗ ಏನೇನ ಬರದೈತಿ ಅದು ಆಗುತ್ತ ಎಲ್ಲಾ ಚಂದ ಆಗಬೇಕಾದರ ನಸೀಬ ಇರಬೇಕಲ್ಲ.'

ಹೊರಗ ನಡಿಯುವಂಥ ಸುದ್ದಿ ಒಳಗ ಇರುವ ಗೌಡತಿಗೆ

ಏನು ಗೊತ್ತ. ಗೊತ್ತು ಆಗಿದಿದ್ದರು ಮನಸಿನ್ಯಾಗ ವಿಚಾರ ಮಾಡುತ್ತಿದ್ದಳು. ಆದ್ರೂ ಮನಸ್ಸು ಕಲ್ಲು ಆಗಿತ್ತು. ಅದು ಕರಗುವಂಥ ಸಮಯಿನ ಬಂದಿಲ್ಲ. ಹುಣ್ಣಿಮೆ ಚಂದ್ರನಂಗ ಬೆಳಿತಿದ್ದ ಗೌಡರ ಮಗ ಚಂದ್ರು ಇರುವ ಒಬ್ಬ ಮಗನಿಂದ ಮನಸ್ಸಿನ ನೆಮ್ಮದಿ ಕೆಡಿಸಿಕೊಂಡಿರಲಿಲ್ಲ ಗೌಡತಿ.

ಸವತಿ ಮಕ್ಕಳು ಲಗ್ನದ ವಯಸ್ಸಿಗೆ ಬರೂಕ ಆ ಕಡೆ ತನ್ನ ಗಂಡನ ತಂದಿ ಮುದಿಮಾವ ಗೊಟಕ್ ಅಂದ. ಆದರ ಗೌಡತಿ ಹಿಡಿದ ಹಟ ಬಿಡಲಿಲ್ಲ. ಜ್ಞಾಪಾನ ಮಾಡಿದ ಮಗನ್ನ ಒಂದು ನರಿಗೆ ಹಚ್ಚದ ಈ ಮನಿ ಬಿಡಾಕ ತಯಾರ ಇರಲಿಲ್ಲ. ಗೌಡತಿ ಪೂಜಾದ ಫಲನೂ ಫಲಿಸಿತು. ಸತ್ಯವ್ವ ಗೌಡತಿ ಗಂಡಗ ಹತ್ತಿದ ದೊಡ್ಡಬ್ಯಾನಿ ತನ್ನಿಂದ ತಾನ ಕಡಿಮಿ ಆಗುವ ಕಾಲ ಕೂಡಿ ಬಂತು. ಹುತ್ತದಾಗ ಕೈ ಇಟ್ಟರೂ ಹಾವು ಕಡಿಲಾರದಂಥ ಬ್ಯಾನಿ ಅಂತ ರೋಗದವನಿಗೆ, ಹಾವು ತಾನಾಗಿ ಬಂದು ಕಚ್ಚಿ ಬಿಟ್ಟಿತ್ತು. ರೋಗ ದಿನದಿಂದ ದಿನಕ್ಕ ಕಡಿಮಿ ಆಗಾಕ ಹತ್ತಿತ್ತು. ಮಾವ ಇರೂತನ ಆ ಮನಿ ಹೊಸಿಲು ತುಳಿಯುವದಿಲ್ಲ ಅಂತಾ ಶಪಥ ಮಾಡಿದ ಗೌಡತೀನ್ನ ಮಾವನ ತೀರಿದ ಮ್ಯಾಲೆ ಗಂಡ ಕರಿಯಾಕ ಬಂದ 'ನಾ ಅಲ್ಲಿಗೆ ಬರುವ ಕಾಲ ಇನ್ನೂ ಬಂದಿಲ್ಲ' ಅಂಥ ಗೌಡತಿ ಹೇಳಿ ಕಳ್ಸಿದ್ಲು.

ಇತ್ತ ಚಂದ್ರು ವಯಸ್ಸಿಗೆ ಬಂದ ಕನ್ಯಾ ನೋಡಿ ಮದುವಿ ಗಟ್ಟಿ ಮಾಡಿದರು. ಸುತ್ತ ಹಳ್ಳಿಗೆ ಹೆಸರು ಬರುವಂಗ ಅದ್ದೂರಿಯಿಂದ ಮದುವಿ ಮಾಡಿದರು. ಈ ಮನಿ ಪರಿಸಿಥಿತಿ ತಿಳಕೊಂಡು ಹೆಣ್ಣು ಕೊಟ್ಟವರು ಒಳ್ಳೆ ಚಾಣಾಕ್ಷ ಬುದ್ಧಿಯವರು. ಮಗಳ ಮನಿ ಹೊಕ್ಕರ ಮನಿಯಾಗ ಇದ್ದ ಗೌಡತೀನ ಮನಿ ಬಿಡುಸುದು ದೊಡ್ಡ ಮಾತ ಆಗಿ ಅವರಿಗೆ ಕಾಣಲಿಲ್ಲ. ಮೊದಲನ ಎಲ್ಲಾ ಸಮಾಚಾರ ತಿಳಕೊಂಡ ಹೆಣ್ಣುಕೊಟ್ಟವ್ರು. ಮನೆತನಕ್ಕ ಮಸಿ ಬಳಿ ಕಾಲ ಬಂದಾಗ ಪರಸ್ಥಿತಿ ತನ್ನಿಂದ ತಾನ ಬಿಗಡಾಯಿಸಾಕ ಚಾಲೂ ಮಾಡುತ್ತ! 'ಕರಿಗಾಲ ಕತ್ತಿ ಬಂದು ಕುದುರಿ ಪಾಗ ಅಳೀತಂತ' ಹಾಂಗ ಕುದುರಿ ಕಟ್ಟೂ ಜಾಗದಾಗ ಕತ್ತಿ ಕಟ್ಟೂವಂಥ ಪರಸ್ಥಿತಿ ಬರತೈತಿ. ಸೊಸೆ ನಡೆನುಡಿ ನೋಡಿ ಸತ್ಯವ್ವ ಗೌಡತಿಗೆ ತನ್ನ ಗಂಡನ ಮನಿಗೆ ಮರಳಬೇಕಂತ ಮನಸ್ಸನ್ಯಾಗ ಚಿಂತಿ ಬರಾಕ ಹತ್ತಿತು. ಹೋಗು ಅಂದ್ರ, ಒಳ್ಳೆ ಅಂದಾಕಿ, ಇನ್ನು ಇರು ಅಂದ್ರ ಇರಲಿಕ್ಕ ತಯಾರ ಆಗಲಿಲ್ಲ ಗೌಡತಿ. 'ನನ್ನ ಋಣ ಇಲ್ಲೀತನಕ ಇತ್ತು. ಹರೇದ ವಯಸ್ಸು ಮುಸುಕಿನ್ಯಾಗ ಕಳೀವಂಗ ದೇವರು ನನ್ನ ಹಣ್ಯಾಗ ಬರದಿದ್ದ. ಆದರ ನಾ ನಡಿಸಿದ ಆಚಾರ ವಿಚಾರ ಇನ್ನು ಇಲ್ಲಿ ನಡಿಯುವದಿಲ್ಲ. ನಾ ನೆಡಸಾಕ ಈ ಮನಿ ಸ್ವಂತ ಸೊಸೀನೂ ಅಲ್ಲ. ದೇಶದ ಲೋಕಾರೂಢಿಯಂಗ ಆ ಗೌಡರಿಗೆ ಅಕ್ಕನ ಮಗಳು. 'ಗಿಳಿಮರೀನ್ನ ಗಿಡಗನ ಕೈಯಾಗ ಕೊಡಬಾರದಂತ ದೇವರ ಮಾಡಿದ ಹಕೀಮತ್ತ ಇದು. ವರ್ಷದ ಕೂಸಿನ್ನ ಜ್ಞಾಪಾನ ಮಾಡಿದೆ. ಹಕ್ಕೀ ರೆಕ್ಕಿ ಬಲೀತು. ಅದು ಹಾರಾಕ ಕಲಿತ ಮ್ಯಾಲೆ ನಂದೇನ ಕೆಲಸ ಐತಿ. ಸಾಯೂ ಕಾಲಕ್ಕ ದೇವರ ಸೇವಾ ಮಾಡುಕ ನನ್ನ ದೇವರ ಗುಡಿಗೆ ನಾ ಹೋಗುವಾಕಿ ಅಂತಾ ಬಿಟ್ಟು ಹೋಗು ಮನಿ ಒಳಗ ಕೂತು ಬೋರ್ಯಾಡಿ ಅತ್ತಳು. ಮಾವಗ ಸೊಸಿ ಕಣ್ಣೀರ ಕಂಡು ನನ್ನ ಮೂದ ಮನಿ ಬೆಳಗಿದ ಸೊಸಿ ಮನಿ ಬಿಟ್ಟು ಗಂಡನ ಮನಿ ಸೇರುವುದು ವಿಚಾರ ಕೇಳಿ ಮಾವನಿಗೆ ದಿಕ್ಕ ತಿಳಿದಂಗ ಆತು. ಕೈಕಾಲು ಬಿದ್ದ ಹೋದ ತಾಯಿನ್ನ ತನ್ನ ಸ್ವಂತ ಸೊಸಿ ಜ್ಞಾಪಾನ ಮಾಡುವ ಭರವಸೀನ ಗೌಡಗ ಕಾಣಿಸಲಿಲ್ಲ. ತನ್ನ ಮಗಗ ಹೆಂಡ್ತಿ ಆಗಬಹುದು ಹೊರತು ಕಷ್ಟಕ್ಕ ಆಗುವಂಥ ಸೊಸಿ ಆಗಿರಲಿಲ್ಲ. ಕರುಳು ಕಕ್ಕಲಾತಿ ಕಂಡು ಅಕ್ಕನ ಮಗಳ ಚಿಂತ್ಯಾಗ ತಾಯಿ ಮುಪ್ಪು ಆದಳು. ಸೊಸಿ ಗಂಡನ ಮನಿ ಬಿಟ್ಟು ಬಂದು ಇಪ್ಪತ್ತೈದು ವರ್ಷ ಆದರೂ ಊರ ಮಂದಿ ಬಾಯಿ ಮ್ಯಾಲೆ ಕೈ ಇಟಗೊಳ್ಳುವಂಗ ನನ್ನ ಮರ್ಯಾದಿ ತಂದಳು. ಆದರ ತನ್ನ ಜೀವನದಾಗ ಎಂಥಾ ಸುಖಾನೂ ಕಾಣಲಿಲ್ಲ. ನನ್ನ ಸೊಸಿ ಸೊಸಿ ರೂಪದಾಗ ಇರಲಿಲ್ಲ ನನ್ನ ಹಡದ ತಾಯಿ ರೂಪದಾಗ ಜೀವನ ನಡೆಸಿದಳು. ನನ್ನ ತಬ್ಬಲಿ ಮಗನ ಹಡದ ತಾಯಿ ಸ್ವರೂಪ ಆಗಿ ಜ್ಞಾಪಾನ ಮಾಡಿದಳು. ಅಂದ ಹೇಳಿದ ಮಾತ ಕೇಳದಾಕಿ ಇಂದು ನನ್ನ ಮಾತ ಕೇಳ್ತಾಳ, ನಾಲ್ಕು ಮಂದಿ ಹಿರಿಯಾರನ್ನ ಕರಿಸಿ ಗಂಡನ ಮನಿಗಿ ಕಳಿಸೂ ತಯಾರಿ ನಡೆಸಿದರು.

ತನ್ನ ಬಾಳಿನಲ್ಲಿ ಕತ್ತಲೆಯಲ್ಲಿ ಬೆಳಕ ಕಂಡ ಗೌಡತಿ ಸಹನೆಯ ಮೂರ್ತಿಯಂತೆ ತಾಳ್ಮೆಯ ಪ್ರತೀಕದಂತೆ ಸೋದರ ಮಾವನ ಮನೆಯಲ್ಲಿ ಇಪ್ಪತ್ತೈದು ವರ್ಷ ಕಳೆದು ಸುಖ ಪಡುವ ದಿನಗಳು ಸರಿದು ಮುಪ್ಪಿನ ಕಾಲ ಚಾಲೂ ಆಗುವ ಗಳಿಗೆಯಲ್ಲಿ ಗಂಡನ ಮನಿ ಮತ್ತೆ ದಾರಿ ಹಿಡಿದಳು ಸತ್ಯವ್ವ ಗೌಡತಿ. ಆಕೆಯ ತ್ಯಾಗದ ಮನೋಭಾವನೆ ಯಾರೂ ಮರೆಯಲಾರರು. ಹಡದ ಮಗಸಕ್ಕಿಂತ ಪಡೆದ ಮಗ ಹೆಚ್ಚು ಎನ್ನುವ ಹಾಗೆ ಜೋಪಾನ ಮಾಡಿದ 'ತಾಯಿ ಮನಿ ಬಿಟ್ಟು ಹೋಗುವಾಗ, ಮಗ ತಾಯಿಯ ಪಾದಕ್ಕ ಬಿದ್ದು ಅತ್ತ. ನೆಲ ಹಿಡಿದ ಅಜ್ಜೀನ ಬಿಟ್ಟು ಹೃದಯವನ್ನ ಕಲ್ಲ ಮಾಡಿ ತನ್ನ ಸ್ವಾಭಿಮಾನಕ್ಕೆ ಧಕ್ಕೆ ಬರದಂಗ ನೋಡಿಕೊಳ್ಳಾಕೆ ತನ್ನದು ಎನ್ನುವ ದೇವರ ಮನೆಗೆ ನಡೆದಳು. ಹೆಣ್ಣಿಗೆ ಕಡೆಗಾಲಕ್ಕೆ ಗಂಡನ ಮನಿಯೇ ದಿಕ್ಕು 'ಅಲ್ಲಿ ಕಾರಿಂದ ಹಾಕಿದರೂ, ಕೈಯಿಂದ ತಿಂದರೂ ಮೋಕ್ಷ ಎನ್ನುವುದನ್ನು ಅರಿತಿರುವ ಗೌಡತಿ ಆಸರೆ ಕೊಟ್ಟ ಮಾವನಿಗೆ, ತಾಯಿಯ ಸ್ವರೂಪದಲ್ಲಿ ಕಂಡ ಮಗನಿಗೆ, ಮನಿ ಯಜಮಾನಿ ಎಂದು ಮರ್ಯಾದೆ ಕೊಟ್ಟ ಆಳುಗಳಿಗೆ, ಹೃದಯ ತುಂಬಿ, ಮನ ತುಂಬಿ, ಕಣ್ಣು ತುಂಬಿ, ಹೊಸ ಸೀರೆ ಉಟ್ಟು ಮಡಿಲಲ್ಲಿ ಉಡಿಯಕ್ಕಿ ಹಾಕಿಸಿಕೊಂಡು ಸೋದರ ಮಾವನ ಮನೆ ಹೊಸಿಲು ದಾಟಿದಳು.

ಹೊರಗ ನಿಂತ ಮಾವನ ಪಾದಕ್ಕ ತಲೆ ಬಾಗಿದಾಗ ಕೊರಳು ಬಿಗಿದು ಬಂದು ಮಾವ ಹೆಣ್ಣುಮಕ್ಕಳು ಅತ್ತ ಹಾಗೆ ದನಿ ತಗೆದು ಅತ್ತ. ಸೊಸೆನೇ ಸಮಾಧಾನಪಡಿಸಿದಾಗ ಮಾವನಿಗೆ ಆಶ್ಚರ್ಯ ಸಂತೋಷ ಒಟ್ಟಿಗೆ ಕೂಡಿ ಬಂದವು. ಲಿಂಬಿಹಣ್ಣಿನ ಬಣ್ಣವಿದ್ದ ಸೊಸೆಯ ಹಣೆಯಲ್ಲಿ ಕೆಂಪು ಕುಂಕುಮ ಮೈಲುದೂರ ಎದ್ದು ಕಾಣುತ್ತಿತ್ತು. ಸೊಸೆ ಇದೇ ರೂಪದಲ್ಲಿ ಅವಳ ಬಾಳು ಬೆಳಗಲಿ' ಅಂತ ಆಶೀರ್ವದಿಸಿ ಎತ್ತಿನ ಬಂಡಿ ಹತ್ತಿಸಿದ. ಬಂಡಿ ಮರಿಯಾಗುವವರೆಗೂ ಹೊರಗೆ ನಿಂತು ನೋಡಿದ ಮಾವನಿಗೆ ಸೊಸೆಯ ಭವ್ಯಮೂರ್ತಿ ಎದುರಿಗೆ ನಿಂತ ಹಾಗಿತ್ತು. ದೂರವಾಗುತ್ತಿರುವ ಬಂಡಿ ಮರೆಯಾದಾಗ ಕಣ್ಣಿಗೆ ಮಂಜು ಮುಸುಕಿದ ಹಾಗೆ ದುಗುಡದಿಂದ ನಿಂತಲ್ಲಿ ಕಾಲು ಕಿತ್ತದೇ ಅಲ್ಲಿಯೇ ಕುಳಿತು ಸಮಾಧಾನದಿಂದ ನಿಟ್ಟುಸಿರುಬಿಟ್ಟ. ■

## ಪಾಠ



ಮೊರೆಗೆ
ಕಿವಿಗೊಡದಾಗ
ಜರೆದ ಇಳೆಗೆ
ಕಲಿಸಿತು
ಪಾಠ
ಮುನಿದ
ಮುಗಿಲು
ತೂರಿ
ಆಲಿಕಲ್ಲು!!

- ಮ.ಶ್ರೀ.ಮುರಳಿಕೃಷ್ಣ

## ಆಗೊಮ್ಮೆ ಈಗೊಮ್ಮೆ

**ಕಳೆದ ಸಲ 'ಎಲ್ಸಿ' ವಿಷಯ ಹೇಳಿದ್ದೆವು. ಈ ಸಲ 'ಮೈಸೀ' ವಿಷಯ ಕೇಳಿ. ಮೈಸೀ ಪಾಟೀಲರು ಆಗೊಮ್ಮೆ ಈಗೊಮ್ಮೆ ಕವನ ಬರೆಯುತ್ತಾರೆ. ಹಾಗಾಗಿಯೆ ಅವರ ಇತ್ತೀಚಿನ ಕವನ ಸಂಕಲನದ ಹೆಸರು 'ಆಗೊಮ್ಮೆ ಈಗೊಮ್ಮೆ'. ಮುಖ ಪುಟದಲ್ಲಿ 'ಮೈಸೀ' ಎಂದಷ್ಟೇ ಮುದ್ರಿಸಲಾಗಿದೆ.**

**ಯಾಕೆ ಎಂದು ಕೇಳಿದ್ದಕ್ಕೆ ಹುಡುಗಿ ಅಂತ ತಿಳಿದು ಯಾರಾದರೂ ಪ್ರೇಮ ಪತ್ರ ಬರೆಯಬಹುದು ಎಂದು ಜೋರಾಗಿ ಪಾಟೀಲರು ಹೇಳಿದರು. ಅಷ್ಟೇ ಅಲ್ಲ ಪುರುಷರೊಬ್ಬರ ವಿಚಿತ್ರ ಹೆಸರನ್ನು ಹುಡುಗಿ ಎಂದು ತಿಳಿದು ಹಿರಿಯ ರಾಜಕಾರಣಿಯೊಬ್ಬರೇ ಬೇಸ್ತುಬಿದ್ದ ಘಟನೆಯನ್ನು ಹೇಳಿದರು. 'ಆಗೊಮ್ಮೆ ಈಗೊಮ್ಮೆ' ಹೀಗೂ ಆಗುತ್ತದಲ್ಲವೇ?**

# ಪಾಪಣ್ಣನ ಮಹಿಳಾ ಪತ್ರಿಕೆ



■ ಎಚ್. ಸೂರ್ಯನಾರಾಯಣ ಕೆದಲಾಯ
(ಸೂರಿ ಹಾರ್ದಳ್ಳಿ)
216, 5 ಎ ಮುಖ್ಯರಸ್ತೆ, 16ನೆಯ ಅಡ್ಡರಸ್ತೆ
ಜಯಪ್ರಕಾಶನಗರ 4ನೆಯ ಘಟ್ಟ, ಬೆಂಗಳೂರು - 560 078.

**ನಿಮ್ಮಲ್ಲಿ ಕೊಳೆತು ಹೋಗುವಷ್ಟು ಹಣವಿದ್ದರೆ, ಅದನ್ನು ಹೊಳೆಗೆ ಹಾಕಲು ನಿಮಗೆ ಇಷ್ಟವಿಲ್ಲದಿದ್ದರೆ, ನೀವು ಕನ್ನಡ ಪತ್ರಿಕೆಯನ್ನು ಆರಂಭಿಸಬಹುದು. ಇದರಿಂದ ಸಾಕಷ್ಟು ಕಷ್ಟ - ನಷ್ಟ, ಕೆಟ್ಟ ಹೆಸರು ಬರುತ್ತದೆ.**

ನಾನೊಬ್ಬ ಬರಹಗಾರನಾಗಿರುವುದರಿಂದ ಯಾರಾದರೂ ಹೊಸ ಪತ್ರಿಕೆ ಹೊರಡಿಸುತ್ತಾರೆಂದರೆ ಎಲ್ಲ ಲೇಖಕರ ಹಾಗೆ ಖುಷಿ ಪಡುತ್ತೇನೆ. ಆದರೆ ಪತ್ರಿಕೆಗಳು ನನ್ನ ಲೇಖನಗಳನ್ನು ಪ್ರಕಟಿಸಬೇಕು, ಮಾತ್ರವಲ್ಲ, ಅದಕ್ಕೆ ಗೌರವಧನವನ್ನು ಕೊಡಬೇಕು, ಇದು ನನ್ನ ಬೇಡಿಕೆ. ಆ ಪತ್ರಿಕೆಯ ಪ್ರಸಾರ ಎಷ್ಟಿದೆ, ಮಾಲಿಕರ ಸ್ಥಿತಿಗತಿಗಳು ಹೇಗಿವೆ, ಹೇಗಾಗುತ್ತದೆ ಎಂಬುದು ನನಗೆ ಸಂಬಂಧಿಸಿದುದಲ್ಲ. ಆದರೆ ನಮ್ಮವರೇ ಆದ ಒಬ್ಬರು ಇಂತಹ ಸಾಹಸಕ್ಕೆ ಇಳಿಯುತ್ತಾರೆಂದರೆ ಅದು ದುಃಖದ ವಿಷಯ, ಹಾಗೆಯೇ ಹಿರಿಯನಾದ ನಾನು ಬುದ್ಧಿವಾದ ಹೇಳಬೇಕಾದುದೂ ಸರಿಯಲ್ಲವೇ?

ಪಾಪಣ್ಣ ನನ್ನ ಆತ್ಮೀಯ ಗೆಳೆಯ, ಯಾಕೆಂದರೆ ಅವನು ದಿನಾ ಸಂಜೆ ನನಗೆ ಕಾಫಿ ಕೊಡಿಸುತ್ತಾನೆ, ಜೊತೆಗಿದ್ದಾಗೆಲ್ಲಾ ಸಿಗರೇಟು ಕೊಡುತ್ತಾನೆ ಮತ್ತು ಕೇಳಿದಾಗೆಲ್ಲಾ ಅವನಿಂದ ನನಗೆ ಸಾಲ ಸಿಗುತ್ತದೆ. ಅವನಿಗೂ ಪೆನ್ನು ಹಿಡಿಯುವ ಚಟ ಅಂಟಿಸಿದ ಮಹಾ ಪಾಪಿ ನಾನು. ತನ್ನ ಲೇಖನಗಳನ್ನು ಪತ್ರಿಕೆಗಳ ಸಂಪಾದಕರು ನಿಷ್ಕರುಣೆಯಿಂದ ಹಿಂದಿರುಗಿಸಿದಾಗ ತಾನೇ ಪತ್ರಿಕೆ ಆರಂಭಿಸುತ್ತೇನೆ ಎಂದು ಹೊರಟವ, ಮೂರ್ಖ! ನನಗೆ ತುಂಬಾ ಬೇಸರವಾಯಿತು.

ಒಂದು ದಿನ ಅವನ ಹೆಂಡತಿ ಪಾಪಮ್ಮ ಅಳುತ್ತಳುತ್ತಾ ನಮ್ಮ ಮನೆಗೆ ಬಂದಳು. 'ನೋಡಿ, ನಾನು ಒಂದು ಸೀರೆ ಕೇಳಿದರೆ ಕೊಡಿಸೋಕೆ ಆರು ತಿಂಗಳ ನಿಗದಿತ ಅವಧಿ ಎನ್ನುತ್ತಾರೆ, ಆ ಪ್ರಕಾರ ಆ ಸಾಲಿನಲ್ಲಿ ಈಗಾಗಲೇ ಎಂಟು ಸೀರೆ ಪೆಂಡಿಂಗ್ ಇದೆ' ಎಂದು ಕಂಪ್ಲೈಂಟಿಸಿ, ಪತ್ರಿಕೆಯನ್ನು ಪ್ರಾರಂಭಿಸುವ ಅವರ ಹುಚ್ಚನ್ನು ಬಿಡಿಸಿ ಎಂದು ನನಗೆ ದುಂಬಾಲು ಬಿದ್ದಿದ್ದಳು. ಹೆಣ್ಣಾದರೇನಂತೆ, ಅವಳಲ್ಲಿ ಪ್ರಪಂಚದ ಅನುಭವವೂ ಇದೆ.

ಈ ಜಗತ್ತಿನಲ್ಲಿ ಹಲವಾರು ಪರಿಯ ಜನರಿರುತ್ತಾರೆ. ಅವರಲ್ಲಿ ಪಾಪಣ್ಣನಂಥವರು ತಾವಾಗಿಯೇ ತಿಳಿದುಕೊಳ್ಳುವುದಿಲ್ಲ. ಬೇರೆಯವರು ಹೇಳಿದ್ದನ್ನೂ ಅರ್ಥಮಾಡಿಕೊಳ್ಳುವುದಿಲ್ಲ.ಮಾತ್ರವಲ್ಲ, ತಮಗೆ ಅರವತ್ತನಾಲ್ಕು ವಿದ್ಯೆಗಳೂ ತಿಳಿದಿವೆ ಎಂದು ಭಾವಿಸುತ್ತಾರೆ. ಇವರ ಈ ಭ್ರಮೆಗಳಿಂದ ಕೆಲ ಮೋಸಗಾರರು ತಮ್ಮ ಥೈಲಿ ಭದ್ರಮಾಡಿಕೊಳ್ಳುತ್ತಾರೆ.

ನಿಮ್ಮಲ್ಲಿ ಕೊಳೆತು ಹೋಗುವಷ್ಟು ಹಣವಿದ್ದರೆ, ಅದನ್ನು ಪೊಳೆಗೆ ಹಾಕಲು ನಿಮಗೆ ಇಷ್ಟವಿಲ್ಲದಿದ್ದರೆ ನೀವು ಕನ್ನಡ ಪತ್ರಿಕೆಯನ್ನು ಆರಂಭಿಸಬಹುದು. ಇದರಿಂದ ಸಾಕಷ್ಟು ಕಷ್ಟ - ನಷ್ಟ ಕೆಟ್ಟ ಹೆಸರು ಬರುತ್ತದೆ.

ಪಾಪಣ್ಣನೆದುರು ಒಂದು ಗ್ಲಾಸ್ ಬೀರ್ ಇರಿಸಿ, ಅವನ ಸಿಗರೇಟಿಗೆ ನಾನೇ ಕಡ್ಡಿ ಅಂಟಿಸಿ, ಅವನ ಬಾಯಿಗೆ ಕಾಳು ಶೇಂಗಾ ಎಸೆದು, ಮಗುವಿಗೆ ಹೇಳಿದ ಹಾಗೆ ಅಂದೆ, 'ಎಂತೆಂಥಾ ದೊಡ್ಡ ದೊಡ್ಡ ಕುಳಗಳೂ ಕನ್ನಡ ಪತ್ರಿಕೆ ತಂದು ಧೂಳೀಪಟವಾಗಿದ್ದಾರೆ. ಹಾಗಿರುವಾಗ ನಿನಗೇಕೆ ಇಲ್ಲದ ಉಸಾಬರಿ? ತಲುಬಿದ್ದರೆ ಒಂದೆರಡು ಪುಸ್ತಕಗಳ ಪ್ರಕಟಿಸು, ಓದುತ್ತಾರೆಂಬ ಭ್ರಮೆ ಬಿಟ್ಟು ದೊಡ್ಡ ದೊಡ್ಡ ಸಾಹಿತಿಗಳಿಗೆ ಕೊಟ್ಟು, ಅವನ್ನು ಅವರ ಷೋಕೇಸಿನಲ್ಲಿ ಇಡುವಂತೆ ಮಾಡು. ಪತ್ರಿಕೆಗಳಿಗೆ ಕಳಿಸು, ಸಾದರ ಸ್ವೀಕಾರದಲ್ಲಿ ನಿನ್ನ ಹೆಸರು ಕಂಡು ಖುಷಿಯಾದರೆ ಒಂದು ಪಾರ್ಟಿ ಕೊಡಿಸು. ಈ ನಿಯತಕಾಲಿಕೆಗಳ ಪ್ರಕಟಣೆಯ ತಿಕ್ಕಲುತನ ಬೇಡ' ಎಂದು.

'ಇಲ್ಲ ಕಣೋ, ನಾನು ತರ್ತಿರೋದು ಹೆಂಗಸರ ಪತ್ರಿಕೆ. 'ಪ್ರಿಯ ಶೋಭಾ' ಎಂದು ಅದರ ಹೆಸರು. ಈಗಲೇ ಹೆಸರನ್ನು ರಿಜಿಸ್ಟರ್ ಮಾಡಿಸಿಬಿಟ್ಟಿದೀನಿ', ಎಂದ ಪಾಪಣ್ಣ.

'ಹೋಗಲಿ ಬಿಡು, ಯಾವುದೋ ದುರದೃಷ್ಟದ ಗಳಿಗೆಯಲ್ಲಿ ಆಗಿಹೋಯ್ತು, ಅಷ್ಟೇ ತಾನೇ ಎಂದು ಸುಮ್ಮನಾಗು. ಇನ್ನು ಸಾಕು' ಎಂದೆ. ಆತ ತನ್ನ ನಿರ್ಧಾರವನ್ನು ಬದಲಿಸುವ ಹಾಗೆ ಕಾಣಿಸಲಿಲ್ಲ.

'ಆರ್ಟಿಕಲ್ಸ್ ಎಲ್ಲಾ ರೆಡಿ ಮಾಡ್ಕೊಂಡಿದ್ದೀನಿ. ಹೆಂಗಸರ ಪತ್ರಿಕೆ ತರೋದು ಇತರ ಪತ್ರಿಕೆಗಳ ಹಾಗೆ ಕಷ್ಟವಲ್ಲ' ಎಂದ. ಅವನ ಅವಸರ ನನಗೆ ನಗು ತರಿಸಿತು.

'ಅದೇನಪ್ಪಾ ವ್ಯತ್ಯಾಸ?'

'ಹೆಂಗಸರ ಪತ್ರಿಕೆಯಲ್ಲಿ ಅರವತ್ತು ಭಾಗ ಸೀರೆ, ಆಭರಣ, ಅಡಿಗೆಗಳಿಗೆ ಮೀಸಲು ಇತರ ಭಾಷೆಯ ಪುಸ್ತಕಗಳಿಂದ ಅನಾಮತ್ತಾಗಿ ಎತ್ತಿ ಪ್ರಕಟಿಸಿದರೆ ಆಯಿತು', ಎಂದ.

'ರೀಪೀಟ್ ಆಗೋಲ್ಲವೇ ಪ್ರತೀ ಸಲ?' ಎಂದು ಪ್ರಶ್ನಿಸಿದೆ.

'ಆಗೋಲ್ಲ' ಅವನೆಂದ. 'ಚಳಿಗಾಲದ ಸಂಚಿಕೆಗಳಲ್ಲಿ ಚಳಿಗಾಲದಲ್ಲಿ ತೊಡುವ ಬಟ್ಟೆ ಹೇಗಿರಬೇಕು, ಎಂಬ ಲೇಖನ, ಚಳಿಗಾಲದ ತಿಂಡಿಗಳ ಬಗ್ಗೆ ವಿವರಗಳು. ಚಳಿಗಾಲದಲ್ಲಿ ದೊರಕುವ ಹಣ್ಣುಗಳ ಬಗ್ಗೆ ಲೇಖನ ಇರುತ್ತವೆ.

'ಬೇಸಿಗೆ ಕಾಲದಲ್ಲಿ ಆ ಕಾಲಕ್ಕೆ ಸೂಕ್ತವಾದ ಬಟ್ಟೆ, ಆಹಾರ, ಆಭರಣ, ಅಡುಗೆಗಳ ಲೇಖನ ಎನ್ನು' ನಾನು ಕೇಳಿದೆ.

'ಸರಿ, ಹಾಗೆಯೇ ಮಳೆಗಾಲಕ್ಕೆ ಕೂಡಾ, ಆರು ಸಂಚಿಕೆಗಳ ಲೇಖನ ರೆಡಿ, ಎಂದ.

'ಇತರ ಲೇಖನಗಳು?' ನಾನು ನನ್ನ ಸಂಶಯವನ್ನು ಪ್ರಸ್ತುತ ಪಡಿಸಿದೆ.

'ಸಿನೆಮಾ ಪುಟಗಳಂತೂ ಇದ್ದೇ ಇರಬೇಕು. ಒಂದೆರಡು ನಟ - ನಟಿಯರ ಬ್ಲೋ ಅಪ್‌ಗಳು. ಪದಬಂಧ ಇರದಿದ್ದರೆ ಕನ್ನಡ ಪತ್ರಿಕೆಗಳು ತಾವೇ ಅನಧಿಕೃತವಾಗಿ ರೂಪಿಸಿಕೊಂಡು ಬಂದ ವಿಧಿ ವಿಧಾನಗಳಿಗೆ ದ್ರೋಹ ಬಗೆದಂತೆ ಆಗುತ್ತದೆ'.

'ಮಾಸ ಭವಿಷ್ಯ ಮರೆಯಬೇಡ. ಜಾಹೀರಾತಿಲ್ಲದೆಯೂ ಪತ್ರಿಕೆ ಬದುಕ ಬಹುದು, ಭವಿಷ್ಯದ ಕಾಲಂ ಇಲ್ಲದಿದ್ದರೆ ಜನ ಪುಸ್ತಕ ಕೊಳ್ಳುವುದಿಲ್ಲ ಎಂದು ಬೀಚಿಯೇ ಹೇಳಿದ್ದಾರೆ', ಎಂದೆ.

'ಅದಿಷ್ಟು ಪುಟ ವೇಸ್ಟು, ಆದರೆ ವಿಧಿಯಿಲ್ಲ' ಪಾಪಣ್ಣನೆಂದ.ನಾನೇ ಬರೆಯುತ್ತೇನೆ. ಜ್ಯೋತಿಷಿಗಳಿಗೆ ಕಾಸು ಕೊಡುವ ಪ್ರಮೇಯವೇ ಇಲ್ಲ'

'ಅಲ್ಲಯ್ಯಾ... ಅದನ್ನ ಹಾಗೆ ಹ್ಯಾಗೋ ಬರೆಯೋಕೆ ಆಗುತ್ತಾ? ಆಧಾರ ಬೇಡವಾ?'

'ನಿನ್ನ ತಲೆ,' ಅವನು ಖಂಡಿಸಿದ. 'ಪ್ರಪಂಚದ ಆರುನೂರು ಪ್ಲಸ್ ಕೋಟಿ ಜನರಿಗೆ ಇರೋದು ಹನ್ನೆರಡೇ ರಾಶಿ. ಐವತ್ತು ಕೋಟಿ ಜನರ ಭವಿಷ್ಯ ನಾಲ್ಕಾರು ವಾಕ್ಯಗಳಲ್ಲಿ. ಅದು ಎಂದೂ ಸರಿಯಾಗುವುದಿಲ್ಲ. ತಮಾಷೆಯೆಂದರೆ ಯಾರೂ ಅದನ್ನು ಖಂಡಿಸಿ ಬರೆಯುವುದಿಲ್ಲ. ತಮಾಷೆ ಗೊತ್ತಾ ನಿನಗೆ? ನಂಬದವರು ಕೂಡಾ ಓದುವ ಏಕೈಕ ಭಾಗ ಎಂದರೆ ಇದು. 'ಅವನು ಗಹಗಹಿಸಿ ನಕ್ಕ, ನನ್ನನ್ನು ಚಿಂತೆಗೆ ಹಚ್ಚಿದ.

'ಅದು ಸರಿ ಅನ್ನು, ಇತರ ಲೇಖನಗಳು?'

'ಬಹು ಸುಲಭ. ನಾನೇ ಎಲ್ಲಾ ಬೇರೆ ಬೇರೆ ಹೆಸರಿನಲ್ಲಿ ಬರೆಯಬಹುದು. ಆದರಿಂದ ಲೇಖಕರಿಗೆ ಕಾಸು ಕೊಡುವ ತಾಪತ್ರಯವಿಲ್ಲ. ಮೊದಲ ಸಂಚಿಕೆಯಲ್ಲಿ ಹೆಂಡತಿ ಗಂಡನನ್ನು ಹೊಡೆದರೆ ಏನು ಮಾಡಬೇಕೆಂಬ ಲೇಖನ ಇರುತ್ತದೆ. ಎರಡನೆಯದರಲ್ಲಿ ಗಂಡ ಹೆಂಡತಿಯನ್ನು ಒದೆದರೆ ಏನು ಮಾಡಬೇಕು ಎಂಬ ಬಗ್ಗೆ ಲೇಖನ ಇರುತ್ತದೆ. ಮುಂದಿನದರಲ್ಲಿ ತಂದೆ - ತಾಯಿ ಜಗಳಾಡಿದರೆ ಮಕ್ಕಳ ಪಾತ್ರವೇನು ಎಂಬ ಒಂದು ಸಲಹೆ'.

'ನಾಲ್ಕನೆಯದರಲ್ಲಿ ಪಕ್ಕದ ಮನೆಯಲ್ಲಿ ಜಗಳವಾದಾಗ ನೆರೆಹೊರೆಯವರ ಪಾತ್ರವೇನೆಂಬ ಬಗ್ಗೆ ಲೇಖನ ತಾನೆ?' ನಾನು ಕೇಳಿದೆ.

'ಕರೆಕ್ಟ್', ಪಾಪಣ್ಣನೆಂದ. ಇಲ್ಲಿಗೆ ಆರು ತಿಂಗಳು ಕಳೆದವು. ಮುಂದಿನ ಸಂಚಿಕೆಯಲ್ಲಿ ಮಕ್ಕಳು ಹೇಗಿರಬೇಕು. ಹೆತ್ತವರು ಮಕ್ಕಳನ್ನು ಹೇಗೆ ಸಂಭಾಳಿಸಬೇಕು. ಮನೆಯ ಶಾಂತಿಯಲ್ಲಿ ಅಜ್ಜಿಯ ಪಾತ್ರವೇನು, ಅಜ್ಜನ ಕೆಲಸವೇನು, ಎಂಬ ಬರೆಹಗಳು.'

'ಇಲ್ಲಿ ನನ್ನದನ್ನೂ ಸೇರಿಸು. ಚಳಿಗಾಲದಲ್ಲಿ ತೋಟದ ರಕ್ಷಣೆ, ಮಳೆಗಾಲದಲ್ಲಿ ಪಾರ್ಕಿನ ದೇಖಬಾಲ್, ಬೇಸಿಗೆಯಲ್ಲಿ ಗಿಡಗಳ ಪೋಷಣೆ, ಇವು ಕೂಡಾ ಇರಲಿ'.

'ಧಾರಾವಾಹಿ ಇರುವುದಿಲ್ಲವೇ?' ನನ್ನ ಪ್ರಶ್ನೆ.

'ಇರುತ್ತದೆ. ಹೃದಯದಲ್ಲಿ ಅರಳಿದೆ ಕಮಲ, ಮಿಣುಕು ಮಿಣುಕು ತುಡಿತ, ಮುಂತಾದ ಎರಡು ಕಾದಂಬರಿಗಳು ಇರುತ್ತವೆ'.

'ಸರಿ, ಇತರ ಲೇಖನಗಳ ರೂಪು ರೇಷೆ ಕೊಡುವೆಯಾ?'

'ಕೊಡುವೆ, ಒಂದು ಉದಾಹರಣೆ ಎಂದರೆ ಗಂಡ ಪರಸ್ತ್ರೀಯರನ್ನು ಪ್ರೀತಿಸಿದರೆ ಹೆಂಡತಿ ಮಾಡಬೇಕಾದ ಕರ್ತವ್ಯಗಳೇನು? ಎಂಬಂಥ ಲೇಖನಗಳು ಇರುತ್ತವೆ' ಅವನೆಂದ.

'ಮುಂದಿನದರಲ್ಲಿ ಹೆಂಡತಿ ವಿಟನೊಡನೆ ಸಂಪರ್ಕ ವಿರಿಸಿಕೊಂಡರೆ....' ನನ್ನ ಮಾತನ್ನು ಅವನು ತುಂಡರಿಸಿದ.

'ಛೇ...ಛೇ.... ಅದು ಸಾಧ್ಯವೇ ಇಲ್ಲ. ಇದು ಮಹಿಳೆಯರ ಪತ್ರಿಕೆಯೇ ಹೊರತು ಪುರುಷರಿಗಲ್ಲ. ಈಗಿನ ಗಂಡಸರು ಓದುತ್ತಾರೆಯೇ? ಓದುವುದಿರಲಿ, ಪುಟ ಕೂಡಾ ತಿರುಗಿಸಿ ನೋಡುವುದಿಲ್ಲ. ಆದುದರಿಂದ ಹೆಂಗಸರೇ ನಮ್ಮ ಪತ್ರಿಕೆಯ ಜೀವಾಳ. ಅವರ ವಿರುದ್ಧ ಯೋಚಿಸುವುದು ಕೂಡಾ ಅಶಕ್ಯ'.

ನಾನು ಯೋಚಿಸಿದೆ. ಯೋಚಿಸಿಯೇ ಯೋಚಿಸಿದೆ. ಪಾಪಣ್ಣ ನಾನು ತಿಳಿದುಕೊಂಡಷ್ಟು ದಡ್ಡನಲ್ಲ. ಕೊನೆಗೆ ನಾನು ಯಾಕೆ ಬಂದೆ ಎಂಬುದೇ ಮರೆತು ಹೋಯಿತು. ವಿನೀತ ಭಾವದಿಂದ ಕೇಳಿದೆ. 'ನನ್ನನ್ನೂ ನಿನ್ನ ಪತ್ರಿಕೆಯ ಪಾರ್ಟನರ್ ಮಾಡಿಕೊಳ್ತೀಯಾ ಪಾಪು?' ಆತ ಗಂಭೀರವಾಗಿ ತಲೆ ಆಡಿಸುತ್ತಾ ಎಂದ, 'ನೋಡೋಣ'.

■

## ನಲುಮೆ

ನನ್ನಲ್ಲಿ
ನಿನಗಿರುವ ಪ್ರೀತಿ
ಅರಿತೆ
ಅದಕ್ಕೆಂದೆ
ಹಾಲಿನಲ್ಲಿ ಸಕ್ಕರೆ
ಒಂದಾದಂತೆ
ಬೆರೆತೆ.

– ರಾಜಶ್ರೀ ವಿನಾಯಕ ಗುಮಾಸ್ತೆ.





ಅಪ್ಪಟ ಹಳ್ಳಿಯ ಹುಡುಗನಾಗಿದ್ದ ನಾನು ಹೈಸ್ಕೂಲು ಓದಿಗೆಂದು ನಗರಕ್ಕೆ ಬಂದು ನನ್ನ ತಂದೆ ತಾಯಿ ತಮ್ಮಂದಿರೊಂದಿಗೆ ಒಂದು ವಠಾರದ ಮನೆಯಲ್ಲಿ ವಾಸವಾಗಿದ್ದೆ. ಅದೇ ವಠಾರದ ಇನ್ನೊಂದು ಬಾಡಿಗೆ ಮನೆಯಲ್ಲಿ ಭಾರತಿ ಎಂಬ ಪುಟ್ಟ ಹುಡುಗಿ ತನ್ನ ಅಜ್ಜ ಅಜ್ಜಿಯೊಂದಿಗೆ ವಾಸವಾಗಿದ್ದಳು. ಅದೇನು ಕಾರಣವೊ ಆ ಪುಟ್ಟ ಹುಡುಗಿಗೆ ನನ್ನನ್ನು ಕಂಡರೆ ಬಲು ಅಚ್ಚುಮೆಚ್ಚು ಅಥವಾ ನನಗೇ ಆ ಪುಟ್ಟ ಹುಡುಗಿಯನ್ನು ಕಂಡರೆ ಅಚ್ಚುಮೆಚ್ಚಾಗಿತ್ತೊ ಏನೋ? ಒಟ್ಟಿನಲ್ಲಿ, ಈ ಅಚ್ಚು ಮತ್ತು ಮೆಚ್ಚು ನನ್ನ ಬರವಣಿಗೆಯ ಕುಚ್ಚು ಹಿಡಿಯಲು ನಾಂದಿಯಾಯಿತು ಎಂಬುದು ಮಾತ್ರ ಸತ್ಯವೇ ಸತ್ಯ.

# 'ನಾನೂ ಬರಹಗಾರನಾದೆ'

ದೀಪಾವಳಿ ಪ್ರಬಂಧ ಸ್ಪರ್ಧೆಯಲ್ಲಿ ಮೆಚ್ಚುಗೆ ಪಡೆದ ಪ್ರಬಂಧ

**ಕ**ವನ ಬರೆದು ಕವಿಯಾಗಬೇಕು, ಕಥೆ ಬರೆದು ಕಥೆಗಾರನಾಗಬೇಕು, ಕಾದಂಬರಿ ಬರೆದು ಕಾದಂಬರಿಕಾರನಾಗಬೇಕು, ಪುಸ್ತಕಗಳನ್ನು ಬರೆದು ಸಾಹಿತಿ ಆಗಬೇಕು. ಓದುಗರ ಮೆಚ್ಚುಗೆ ಗಳಿಸಬೇಕು. ಶಾಭಾಷ್ ಅವರನ್ನಬೇಕು. ಅದನ್ನು ಕೇಳಿ ಹೆಮ್ಮೆಯಿಂದ ನಾನು ಬೀಗಬೇಕು. ಈ ಯಾವ ಆಸೆಗಳೂ ಚಿಕ್ಕಂದಿನಲ್ಲಿ ನನಗಿರಲಿಲ್ಲ. ಇದ್ದ ಬಹುದೊಡ್ಡ ಆಸೆಯೆಂದರೆ ಒಬ್ಬ ಸಾಮಾನ್ಯ ಫುಟ್‌ಬಾಲ್ ಆಟಗಾರನಾಗಿದ್ದ ನಾನು-ಒಬ್ಬ ದೊಡ್ಡ ಫುಟ್‌ಬಾಲ್ ಆಟಗಾರನಾಗಬೇಕೆಂಬುದು. ಹಾಗಾಗಿಯೇ ಮೈಸೂರಿನ ದೊಡ್ಡಕೆರೆ ಮೈದಾನದಲ್ಲಿ ಗೆಳೆಯರೊಂದಿಗೆ ಸೇರಿಕೊಂಡು ಫುಟ್‌ಬಾಲ್ ಆಟದ ಅಭ್ಯಾಸದಲ್ಲಿ ತೊಡಗಿಕೊಂಡೆ. ಅಭ್ಯಾಸ ನಡೆಸಿದೆ. ಹೇಳಿಕೊಳ್ಳುವಂಥ ಆಟಗಾರನಾಗದಿದ್ದರೂ ಆಟದಲ್ಲೊಂದು ಬಗೆಯ ಸಮಾಧಾನವಿತ್ತು. ಆ ಆಟದ ಬಗ್ಗೆ ನನಗೆಷ್ಟು ವ್ಯಾಮೋಹವಿತ್ತೆಂದರೆ-ಭಾರತದ ಅಂದಿನ ಪ್ರಸಿದ್ಧ ಫುಟ್‌ಬಾಲ್ ಆಟಗಾರನಾಗಿದ್ದ ಚುನಿಗೋಸ್ವಾಮಿ ಫುಟ್‌ಬಾಲ್ ಆಡುವುದಕ್ಕಾಗಿಯೇ ತನ್ನ ಬಲಗಾಲಿನ ಮಂಡಿಚಿಪ್ಪನ್ನು ತೆಗೆಸಿದ್ದ ಎಂಬ ಸುದ್ದಿ ಕಿವಿಗೆ ಬಿದ್ದು, ದೊಡ್ಡ ಆಟಗಾರನಾಗಬೇಕಾದರೆ ನಾನು ಯಾವ ಕಾಲಿನ ಮಂಡಿ ಚಿಪ್ಪನ್ನು ತೆಗೆಸಬೇಕಾಗುತ್ತದೆ ಎಂದು ಚಿಂತಿಸಿದ್ದೂ ಉಂಟು. ಈ ರೀತಿ ಚಿಂತನೆ ಮಾಡಿದ ಸುಮಾರು ಮುವ್ವತ್ತೈದು ವರ್ಷಗಳ ನಂತರ ನನ್ನ ಕಾಲುಗಳು ಸಮಕಾಲೀನವಾಗಿ ಎಷ್ಟು ದೂರ ನಡೆದಾಡಿಕೊಂಡಿರಲೂ ಸಾಧ್ಯವಾಗಿರುವುದಕ್ಕೆ ಅಂದಿನ ನನ್ನ ಚಿಂತನೆ ಕಾರ್ಯಗತವಾಗದಿದ್ದುದೇ ಎಂದು ನಾನು ಖಚಿತವಾಗಿ ನಂಬುತ್ತೇನೆ. ಅಂದು ಹೀಗೆಲ್ಲ ಯೋಚಿಸುತ್ತಿದ್ದ ನಾನು ಇಂದು ಕನ್ನಡದಲ್ಲಿ ಬರೆಯುತ್ತೇನೆ; ಪುಸ್ತಕಗಳನ್ನು ಪ್ರಕಟಿಸುತ್ತೇನೆ. ಅಂದರೆ ಅಂದಿನ ನನ್ನ ಗೆಳೆಯರಿಗೆ ಸೋಜಿಗದ ಸಂಗತಿಯೇ. ಅವರಿಗಿರಲಿ, ನನ್ನನ್ನೇ ಒಮ್ಮೆ ತಿರುವಿ ಹಾಕಿದಾಗ, ಚೋದ್ಯವಾಗುತ್ತದೆ ನಾನು ಅಂದುಕೊಂಡಿದ್ದು ಒಂದು ಆದದ್ದು ಇನ್ನೊಂದು ಅಂತ. ಈ ತಳಸಂಪಳಕ ಬೆಳವಣಿಗೆಗೆ ನಾನೇ ಕಾರಣನೋ? ನನ್ನ ಪರಿಸರವೇ ಕಾರಣವೋ? ಎಂಬ ಚಿದಂಬರ ರಹಸ್ಯ ನನ್ನ ಚಿತ್ತವನ್ನು ಆಗಾಗ್ಗೆ ಚಿತ್ತು ಮಾಡದೆ ಇಲ್ಲ.

ಅಪ್ಪಟ ಹಳ್ಳಿಯ ಹುಡುಗನಾಗಿದ್ದ ನಾನು ಹೈಸ್ಕೂಲು ಓದಿಗೆಂದು ನಗರಕ್ಕೆ ಬಂದು ನನ್ನ ತಂದೆ ತಾಯಿ ತಮ್ಮಂದಿರೊಂದಿಗೆ ಒಂದು ವಠಾರದ ಮನೆಯಲ್ಲಿ ವಾಸವಾಗಿದ್ದೆ. ಅದೇ ವಠಾರದ ಇನ್ನೊಂದು ಬಾಡಿಗೆ ಮನೆಯಲ್ಲಿ ಭಾರತಿ ಎಂಬ ಪುಟ್ಟ ಹುಡುಗಿ ತನ್ನ ಅಜ್ಜ ಅಜ್ಜಿಯೊಂದಿಗೆ ವಾಸವಾಗಿದ್ದಳು. ಅದೇನು ಕಾರಣವೊ ಆ ಪುಟ್ಟ ಹುಡುಗಿಗೆ ನನ್ನನ್ನು ಕಂಡರೆ ಬಲು ಅಚ್ಚುಮೆಚ್ಚು ಅಥವಾ ನನಗೇ ಆ ಪುಟ್ಟ ಹುಡುಗಿಯನ್ನು ಕಂಡರೆ ಅಚ್ಚುಮೆಚ್ಚಾಗಿತ್ತೊ ಏನೋ? ಒಟ್ಟಿನಲ್ಲಿ, ಈ ಅಚ್ಚು ಮತ್ತು ಮೆಚ್ಚು ನನ್ನ ಬರವಣಿಗೆಯ ಕುಚ್ಚು ಹಿಡಿಯಲು ನಾಂದಿಯಾಯಿತು ಎಂಬುದು ಮಾತ್ರ ಸತ್ಯವೇ ಸತ್ಯ.

ಪ್ರತಿದಿನ ಸಂಜೆಯಾಯಿತೆಂದರೆ, ನಮ್ಮ ಮನೆಗೆ ಗುಡುಗುಡನೆ ಓಡೋಡಿ ಬರುತ್ತಿದ್ದ ಆ ಪುಟ್ಟ ಹುಡುಗಿ ಯಾವುದಾದರೊಂದು ಕಥೆ ಹೇಳಲು ನನಗೆ ದುಂಬಾಲು ಬೀಳುತ್ತಿದ್ದಳು. ಹಳ್ಳಿಯಲ್ಲಿದ್ದಾಗ ಹತ್ತಿ ತೊಳೆ ಬಿಡಿಸುವಾಗ,

ಕಡಲೆಕಾಯಿ ತಾಳು ಬಿಡಿಸುವಾಗ ನನ್ನ ಅಜ್ಜಿ ತೊಡೆಯಮೇಲೆ ಕೂತೋ ಮಲಗೋ ಕೇಳಿದ್ದ ಕಥೆಗಳನ್ನು ಒಂದೊಂದಾಗಿ ನನ್ನದೇ ಆದ ಧಾಟಿಯಲ್ಲಿ ಹೇಳುತ್ತಿದ್ದೆ. ಹಳ್ಳಿಯಲ್ಲಿ ಕಲಿತ ಕಥೆ ಮುಗಿದು ಹೋದ ಮೇಲೆ ಬೇರೆ ಬೇರೆ ಪುಸ್ತಕಗಳನ್ನು ಓದಿ ಕಥೆ ಹೇಳತೊಡಗಿದೆ. ನನ್ನದೇ ಆದ ಕಥೆಗಳನ್ನು ಕಟ್ಟತೊಡಗಿದೆ. 'ಈ ಕಥೆಗಳನ್ನು ಬರೆದು ಪೇಪರ್‌ಗೆ ಕಳ್ಸೊ' ಅಂತ ಗೆಳೆಯನೊಬ್ಬನು ಕೊಟ್ಟ ಸಲಹೆ ಮೇರೆಗೆ ನನ್ನ ಮೊದಲನೆಯ ಕಥೆ ಬಿಳಿಹಾಳೆಯ ಮೇಲೆ ಮೂಡತೊಡಗಿತು. ಆದರೆ ಅದನ್ನು ಯಾವ ಪತ್ರಿಕೆಗೂ ಕಳಿಸಲಿಲ್ಲ. ಯಾಕೆಂದರೆ, ಪತ್ರಿಕೆಗಳಲ್ಲಿ ಪ್ರಕಟಿಸಬೇಕಾದರೆ ನಾವು ದುಡ್ಡನ್ನು ಕೊಡಬೇಕಾಗುತ್ತದೆ ಅಂತ ಹಿರಿಯರೊಬ್ಬರು ಬೆದರಿಕೆ ಹಾಕಿದ್ದರಿಂದ ಈ ಮಾತು ನಿಜವೇ ಇರಬೇಕೆಂದು ಹಿಂಜರಿದು ಕಥೆಯನ್ನು ಕಳಿಸಲಿಲ್ಲ.

ಈ ನಡುವೆ ನನ್ನ ಹೈಸ್ಕೂಲು ಸಹಪಾಠಿಯೊಬ್ಬ ತೀರಿಹೋದ. ತೀರ ಆಪ್ತನಾಗಿದ್ದ ಗೆಳೆಯ ತೀರಿಹೋದ ಸಂಗತಿ ನನಗೆ ತೀವ್ರ ದುಃಖವನ್ನುಂಟುಮಾಡಿತು. ಆ ದುಃಖ ಶಮನವಾಗಲೋ ಎಂಬಂತೆ

ಅಗಲಿದೆ ನೀ ಒಂದು ಗಳಿಗೆಯಲ್ಲಿ
ಚಣವು ಬಿಡೆನು ಮನದಲ್ಲಿ

ಎಂದು ಪ್ರಾರಂಭವಾಗುವ ಪ್ರಾಸಬದ್ಧವಾದ ಕವಿತೆಯೊಂದನ್ನು ಬರೆದು ನನಗೆ ನಾನೇ ಹಲವಾರು ಬಾರಿ ಹಾಡಿಕೊಂಡೆ. ಶೋಕರಸದಲ್ಲಿ ತಲ್ಲೀನನಾದೆ. ನನ್ನ ಈ ಮೊದಲ ಕವನದ ಅಥವಾ ಶೋಕ ಕವನದ ವಿಶೇಷವೆಂದರೆ ನಾನು ಈವರೆಗೂ ಆ ಕವನವನ್ನು ಯಾರ ಮುಂದೆಯೂ ಓದಿಲ್ಲ. ಅದರ ಕಿವಿಗಳಿಗೆ ತೊಂದರೆಯನ್ನು ನೀಡಿಲ್ಲ. ಅಲ್ಲಿಂದೀಚೆಗೆ ಸಣ್ಣಪುಟ್ಟ ಕಥೆಗಳನ್ನು ಬರೆಯುವುದರ ಜೊತೆಗೆ ಕವನಗಳನ್ನೂ ಬರೆಯುವ ಪರಿಪಾಠ ಮಾಡಿಕೊಂಡಿದ್ದು.

ಒಮ್ಮೆ ಹೀಗಾಯಿತು. ಅಲ್ಪಸ್ವಲ್ಪ ಭಾವಜೀವಿಯಾಗಿದ್ದ ನಾನು ಒಂದು ದಿನ ಹಿಂದಿ ತರಗತಿಯಲ್ಲಿ ಯಾವುದೋ ಒಂದು ಪದ್ಯರಚನೆಯ ಗುಂಗಿನಲ್ಲಿ ತೊಡಗಿದ್ದೆ. ಪದ್ಯ ರಚನೆಗೆ ಲಯ ಮತ್ತು ಪ್ರಾಸ ಎರಡು ಚೆನ್ನಾಗಿ ಗೊತ್ತಿರಬೇಕು ಎಂದು ಬಲವಾಗಿ ನಂಬಿದ್ದ ನಾನು ಅದಕ್ಕಾಗಿ ಹೆಣಗಾಡುತ್ತಿದ್ದೆ. ಹಿಂದಿ ಮೇಷ್ಟ್ರು ನನ್ನ ಬಳಿ ಬಂದದ್ದು ಗೊತ್ತಾಗಲಿಲ್ಲ. ಅವರು ಸ್ವಲ್ಪ ಹೊತ್ತು ನನ್ನ ಬರವಣಿಗೆಯನ್ನು ಗಮನಿಸುತ್ತಿದ್ದರು. ಹಿಂದಿ ಪಾಠವನ್ನು ಕಡೆಗಣಿಸಿ ಪದ್ಯ ಉತ್ಪಾದನೆಯಲ್ಲಿ ತೊಡಗಿದ್ದ ನನ್ನನ್ನು ನೋಡಿ ವ್ಯಂಗ್ಯವಾಗಿ ಕೇಳಿದರು 'ಏನು ಬರಿತಿದ್ದೀಯ?' ಅಂತ. ಸತ್ಯವನ್ನು ಹೇಳಿದರೆ ಕ್ಷಮಿಸುತ್ತಾರೆ ಎಂಬ ಅನಿವಾರ್ಯ ನಂಬಿಕೆಯಿಂದ 'ಒಂದು ಪದ್ಯ ಬರೀತಿದ್ದೀನಿ ಸಾರ್' ಅಂದೆ. ಸಿಟ್ಟು ಅವರೊಡಳೊಳಗಿಂದ ಉಕ್ಕಿ ಬಂತೆಂದು ತೋರುತ್ತದೆ. 'ಪಾಠದ ಟೈಮ್‌ನಲ್ಲಿ ಪಾಠ ಕೇಳೋದು ಬಿಟ್ಟು ಪದ್ಯ ಬರಿತಾನೆ ಪದ್ಯ', ಅಂತ ಸಿಡಿಯುತ್ತ ನನ್ನ ಎಕ್ಸರ್‌ಸೈಸ್ ಪುಸ್ತಕವನ್ನು ಕಿತ್ತುಕೊಂಡು 'ಬೆಂಚ್ಮೇಲೆ ನಿಂತ್ಕೊ' ಅಂತ ಶಿಕ್ಷೆ ವಿಧಿಸಿದರು. ಅವರ ಭುಜಂಗಾವತಾರಕ್ಕೇ ಹೆದರಿದ ನಾನು ಸಪ್ಪಗೆ ಬೆಂಚಿನ ಮೇಲೆ ನಿಂತುಕೊಂಡೆ. ನನಗೂ ನನ್ನ ಪದ್ಯಕ್ಕೂ ಒದಗಿ ಬಂದ ದುರವಸ್ಥೆಯನ್ನು ಕಂಡು ನನ್ನ ಗೆಳೆಯರು ಪಿಸಿಪಿಸಿನೆ ನಕ್ಕರು. ರಾಮು ಎಂಬ ಗೆಳೆಯ ಮಾತ್ರ ಪಕ್ಕದ ರೂಮಿನಲ್ಲಿ ಪಾಠ ಮಾಡುತ್ತಿದ್ದ ಮೇಷ್ಟ್ರು ಬಂದು ಇಣಿಕಿ ನೋಡುವಷ್ಟು ಗಟ್ಟಿಯಾಗಿ ನಕ್ಕಿದ್ದ. ಅಂದಿನಿಂದ ತರಗತಿಯಲ್ಲಿ ಪದ್ಯವನ್ನಾಗಲಿ ಗದ್ಯವನ್ನಾಗಲಿ ಬರೆಯುವ ಸಾಹಸಕ್ಕೆ ಕೈ ಹಾಕಲಿಲ್ಲ.

ನನಗೆ ಚೆನ್ನಾಗಿ ನೆನಪಿರುವ ಇನ್ನೊಂದು ಘಟನೆಯೆಂದರೆ ಪದ್ಯವೊಂದನ್ನು ಪರಿಜ್ಞಾನವಿಲ್ಲದೆ ಓದಿ, ನನ್ನ ತಾಯಿಯಿಂದ ತಾರಾಮಾರ ಬೈಸಿಕೊಂಡಿದ್ದು. ಸುಗಮ ಸಂಗೀತ ಕ್ಷೇತ್ರದಲ್ಲಿ ಆಗಿನ್ನೂ ಕೇವಲ ಅನಂತಸ್ವಾಮಿ ಆಗಿದ್ದ ಮೈಸೂರು ಅನಂತಸ್ವಾಮಿಯವರು ಸಮಾರಂಭವೊಂದರಲ್ಲಿ ಲಯಮಾಂತ್ರಿಕ ದ.ರಾ.ಬೇಂದ್ರೆಯವರ 'ಇಳಿದು ಬಾ ತಾಯಿ ಇಳಿದುಬಾ' ಎಂಬ ಹಾಡನ್ನು ಸುಶ್ರಾವ್ಯವಾಗಿ ಹಾಡಿದ್ದರು. ಅದನ್ನು ಕೇಳಿ ಸ್ಫೂರ್ತಿ ಬಂದಂತಾಗಿ ನಾನು ನನ್ನದೇ ಆದ ಭಾವಲಹರಿಯಲ್ಲಿ ಪದ್ಯವೊಂದನ್ನು ರಚಿಸಿದೆ. ನಾನು ಬರೆದ ಪದ್ಯವನ್ನು ಯಾರಾದರೊಬ್ಬರ ಮುಂದೆ ಓದಬೇಕು ಇಲ್ಲವೆ ಹಾಡಬೇಕೆಂದು ತಹತಹಿಸುತ್ತಿದ್ದೆ. ಅದೇ ದಿನ ಮೈಸೂರಿನಲ್ಲಿ ಮಳೆಯೋ ಮಳೆ. ನಾವಿದ್ದ ಬಾಡಿಗೆ ಮನೆಯ ಹಂಚಿನ ಸಂದಿಯಿಂದ, ಬಾಗಿಲ ಕಿಂಡಿಯಿಂದ, ಕಿಟಕಿ ತೂತಿನಿಂದ ಹೀಗೆ ಎಲ್ಲ ಕಡೆಯಿಂದ ಮಳೆ ನೀರು ತಾರಾಮಾರ ಸೋರುತಿತ್ತು. ನನ್ನ ತಾಯಿಗಂತೂ ನೀರು ಸೋರುವಲ್ಲೆಲ್ಲ ಪಾತ್ರೆ ಇಟ್ಟೂ ಇಟ್ಟು ಸಾಕಾಗಿ ಹೋಗಿತ್ತು. ಸೋರುತ್ತಿರುವ ನೀರು ನನ್ನ ಮೇಮೇಲೆಲ್ಲ ಬಿದ್ದು ನಾನೂ ನೆನೆದಿದ್ದೆ. ಆದರೂ ಏನೋ ನೆನಪಾದವನಂತೆ ನನ್ನ ತಾಯಿಗೆ 'ಸುಬ್ಬು ಸುಬ್ಬು ನಾನೊಂದು ಪದ್ಯ ಬರೆದಿದ್ದೀನಿ ಹಾಡ್ತೀನಿ ಕೇಳು' ಅಂತ

ಇಳಿದು ಬಾ ತಾಯಿ
ಇಳಿದು ಬಾ
ಹಂಚಿನಡಿಯಿಂದ
ಕಿಟಕಿ ಒಳಗಿಂದ
ಬಾಗಿಲೊಳಗಿಂದ
ಎಲ್ಲ ಕಡೆಯಿಂದ

ಇಳಿದು ಬಾ.... ಎಂದು ಪ್ರಾರಂಭವಾಗುವ ಪದ್ಯವನ್ನು ಅತ್ಯಂತ ಉತ್ಸಾಹದಿಂದ ನನ್ನದೇ ಆದ ರಾಗತನ್ಮಯತೆಯಲ್ಲಿ ಹಾಡಿದೆ. ಮಳೆ ನೀರಿನಿಂದ ಬೇಸತ್ತು ಹೋಗಿದ್ದ ನನ್ನ ತಾಯಿ ಇನ್ನಿಲ್ಲದ ಸಿಟ್ಟಿನಿಂದ 'ನಿನಗೂ ನಿನ್ನ ಪದ್ಯಕ್ಕೊ ಬೆಂಕಿ ಇಕ್ಕ', ಅಂತ ಬೈದು ಹಸ್ತಪ್ರತಿಯನ್ನು ನನ್ನ ಹಸ್ತದಿಂದ ಕಿತ್ತೆಸೆದರು. ಹಸ್ತಪ್ರತಿ ಸೋರುವ ನೀರಿನಲ್ಲಿ ಸೋರಿ ಹೋಗಿ, ನನಗೂ ನನ್ನ ಕವಿತೆಗೂ ಭಾರಿ ಮುಖಭಂಗವಾಯಿತು. ಅಂದಿನಿಂದ ಕೆಲವಾರು ವರ್ಷಗಳ ಕಾಲ ನನ್ನ ಬರಹಗಳನ್ನು ಯಾರ ಮುಂದಾದರೂ ಓದುವುದಕ್ಕೆ ನನ್ನ ಮನಸ್ಸು ಹಿಂಜರಿಯುತ್ತಿತ್ತು.

ಆದರೂ, ಮೊದಲಿನಿಂದಲೂ ನನ್ನದು ಸ್ವಲ್ಪ ಛಲದ ಸ್ವಭಾವವೇ. ಆದುದರಿಂದಲೇ ಫುಟ್‌ಬಾಲ್ ಆಡುವುದಕ್ಕಾಗದೇ ಇದ್ದರೂ ಇಂದಿಗೂ ಕನಿಷ್ಠ ಪಕ್ಷ ಆಟ ನೋಡುವುದನ್ನು ಮಾತ್ರ ಬಿಟ್ಟಿಲ್ಲ. ಹಾಗೆಯೇ ಎರಡು ಬಾರಿ ನನ್ನ ಬರವಣಿಗೆಗೆ ಮುಖಭಂಗವಾದರೂ ಬರೆಯುವುದನ್ನೇನೂ ನಿಲ್ಲಿಸಲಿಲ್ಲ. ನನ್ನಷ್ಟಕ್ಕೆ ನಾನೇ ಕಥೆ, ಕವನ, ಕಾದಂಬರಿ, ನಾಟಕಗಳನ್ನು ಬರೆಯುತ್ತಲೇ ಹೋದೆ.

ಹೈಸ್ಕೂಲು ಮುಗಿಸಿ ಕಾಲೇಜಿಗೆ ಸೇರಿದೆ. ಹೊಸ ಗೆಳೆಯರು. ಹೊಸ ವಾತಾವರಣ. ಹೊಸ ಅನುಭವ ಆಗತೊಡಗಿತು. ಆಗ, ಪ್ರತಿದಿನ ಕಾಲೇಜಿಗೆ ಹೋಗುವ ದಾರಿಯಲ್ಲಿ ಒಬ್ಬಳು ಹುಡುಗಿ ಸಿಗುತ್ತಿದ್ದಳು. ನೋಡುವುದಕ್ಕೇ ಸುಂದರವಾಗಿದ್ದ ಆ ಹುಡುಗಿ ನಾನಿದ್ದ ಬಡಾವಣೆಯಲ್ಲೇ ವಾಸವಿದ್ದರಿಂದ ಅವಳ ಹೆಸರು ಲೀಲಾವತಿ ಅಂತ ಪತ್ತೆ ಮಾಡಿಬಿಟ್ಟೆ. ಯಾಕೊ ಏನೊ, ಒಂದೆರಡು ಬಾರಿ ಅವಳು ನನ್ನನ್ನು ನೋಡಿ ನಕ್ಕಂತಾಯಿತು. ಹುಡುಗಿ ನಕ್ಕದ್ದು ನಿಜವೋ? ನಾನು ಹಾಗಂದುಕೊಂಡದ್ದು ನಿಜವೋ? ನನಗೀಗಲೂ ಅರ್ಥವಾಗುತ್ತಿಲ್ಲ ಅಥವಾ ನನ್ನನ್ನು ನೋಡಿ ಬೇರೇನಾದರೂ ನೆನಪಾಗಿ ಹಾಗೆ ಮಾಡಿದಳೋ? ಅದೂ ಗೊತ್ತಿಲ್ಲ ಅಂತೂ ಈ ಪರಿಸ್ಥಿತಿ ನಾನೊಂದು ಪದ್ಯ ಬರೆಯಲು ಕಾರಣವಾಯಿತು ಎಂಬುದು ಮಾತ್ರ ಸತ್ಯ. ಅದೇ ಗುಂಗಿನಲ್ಲಿ ರಚನೆಯೊಂದು ಮೂಡಿ ಬಂತು -

ಹೇಳ್ತೀನಿ ನಾನೊಂದು ಲೀಲು
ಕೇಳ್ತಾ ನೀನೊಂದು ಹೇಳು
ನಿನ್ಮೇಲೆ ನನಗೆ ಮನಸು
ರಾತ್ರಿ ನಿನ್ನದೆ ಕನಸು
ನಿಂತ್ರು ನಿನ್ನದೆ ಧ್ಯಾನ
ಕುಂತ್ರು ನಿನ್ನದೆ ಗಾನ..... ಎಂದೆಲ್ಲ ಬರೆದು

ಅದನ್ನು ನನ್ನದೇ ಆದ ರಾಗಭಾವಗಳಲ್ಲಿ ಗುನುಗಿಕೊಂಡೆ. ಮತ್ತೆ ಆ ಪದ್ಯವನ್ನು ಅತ್ಯಂತ

**ಹೋಲಿಕೆ**



ಕವಿತೆ
ಹೆಣ್ಣಿನಂತೆ
ಒಲಿದರೆ ಸಲೀಸು
ಮುನಿದರೆ ತ್ರಾಸು

- ರಘುನಾಥ್ ಚ.ಹ

ಎಚ್ಚರಿಕೆಯಿಂದ ನೀಟಾಗಿ ಒಂದು ಬಿಳಿ ಹಾಳೆಯ ಮೇಲೆ ಬರೆದು, ಮಾರನೆಯ ದಿನ ಹುಡುಗಿ ಸಿಕ್ಕಾಗ ಅದನ್ನು ಕೊಡಬೇಕೆಂದುಕೊಂಡೆ. ಆ ಸಮಯಕ್ಕಾಗಿ ಕಾದೆ. ಸಮಯವೂ ಬಂತು. ಆದರೆ, ಪದ್ಯ ಬರೆದ ಹಾಳೆಯನ್ನು ಹುಡುಗಿಗೆ ಕೊಡಲು ಸುತ್ರಾಂ ಹಿಂಜರಿದು ಭಾವಭಂಗವಾಗಿ ಮುನ್ನಡೆದೆ. ಅದು ಇಂದೂ ಬೆಚ್ಚಗೆ ನನ್ನ ಕಪಾಟಿನಲ್ಲಿ ಗುರಿ ತಲುಪದ ಬಾಣದ ಹಾಗೆ ತೆಪ್ಪಗೆ ಬಿದ್ದಿರುವುದನ್ನು ಕಂಡು ಅನ್ನಿಸುತ್ತದೆ - ಪ್ರೇಮ ಕವನವನ್ನು ಬರೆಯುವುದು ದೊಡ್ಡದಲ್ಲ. ಅದನ್ನು ಪ್ರೇಮಿಗೆ ತಲುಪಿಸುವ ಧೈರ್ಯವೂ ಬೇಕು ಅಂತ. ಈಗೇನೋ ಧೈರ್ಯವಿದೆ. ಆದರೆ, ಅಂದು ನಕ್ಕ ಹುಡುಗಿ ಎಲ್ಲಿ?

ನಾನು ಬರೆಯತೊಡಗಿದಾಗಿನಿಂದ ಬರೀ ಕೆಟ್ಟ ಅನುಭವಗಳೇ ಆಯಿತೆಂದಲ್ಲ, ಒಳ್ಳೆಯ ಅನುಭವಗಳೂ ಆಗಿರುವುದುಂಟು.

ಅದು ಗೌರಿಹಬ್ಬದ ಸಮಯ. ನನ್ನದೊಂದು ಕವನ ದಿನಪತ್ರಿಕೆಯೊಂದರಲ್ಲಿ ಅಚ್ಚಾಗಿತ್ತು. ಅಷ್ಟಕ್ಕೆ ನಾನು ಸಂತೋಷಪಟ್ಟಿದ್ದೆ. ಗೌರಿಹಬ್ಬದ ದಿನ ನನ್ನ ತಮ್ಮ ಓಡೋಡಿ ಬಂದವನೆ ''ನಿನಗೆ ಎಂ.ಓ ಬಂದಿದೆ, ಪೋಸ್ಟ್‌ಮ್ಯಾನ್ ಕರಿತಿದ್ದಾನೆ ಬಾ' ಅಂದ. 'ಎಂ.ಓ ಕಳಿಸಿದವರ್‍ಯಾರಿರ ಬಹುದು?' ಅಂತ ಕುತೂಹಲದಿಂದ ಪೋಸ್ಟ್‌ಮ್ಯಾನ್ ಬಳಿ ಹೋದಾಗ, ನನ್ನ ಪ್ರಕಟಿತ ಕವನಕ್ಕೆ ಹದಿನೈದು ರೂಪಾಯಿ ಸಂಭಾವನೆಯಾಗಿ ಬಂದಿರುವುದನ್ನು ಕಂಡು ಮನಸ್ಸು ಪುಳಕಿತಗೊಂಡಿತು. ಪತ್ರಿಕೆಗಳಿಗೆ ಬರೆದರೆ ಹಣ ಸಿಗುತ್ತದೆ ಎಂಬ ವಿಷಯ ಗೊತ್ತಾದದ್ದೂ ಆಗಲೇ. ಹಾಗಾಗಿ ಅಲ್ಲಿಂದೀಚೆಗೆ ಪತ್ರಿಕೆಗಳಿಗೆ ಬರೆಯುವ ಚಾಳಿಯನ್ನೂ ಮುಂದುವರಿಸಿದೆ.

ಈ ರೀತಿ ಸಣ್ಣ ಪುಟ್ಟ ಬರಹಗಳನ್ನೇ ಬರೆಯುತ್ತಾ ಹೋದರೆ ಏನು ಪ್ರಯೋಜನ? ದೊಡ್ಡ ಲೇಖನಗಳನ್ನು ಬರೆಯಬೇಕು. ದೊಡ್ಡ ಹೆಸರು ಮಾಡಬೇಕು. ದೊಡ್ಡ ಹಣ ಸಂಪಾದಿಸಬೇಕು ಎಂಬ ಬೃಹತ್ ಆಶೆಯೂ ನನ್ನಲ್ಲಿ ಮೊಳಕೆಯೊಡೆಯಿತು. ಹಾಗಾಗಿ, ದೊಡ್ಡ ಲೇಖಕರು ಹೇಗೆ ಬರೆಯುತ್ತಾರೆ? ಹೇಗೆ ಇರುತ್ತಾರೆ? ಯಾವ ರೀತಿ ಬಟ್ಟೆ ತೊಡುತ್ತಾರೆ? ಇತ್ಯಾದಿ ಸಂಗತಿಗಳು ನನ್ನನ್ನು ಬಾಧಿಸತೊಡಗಿದವು. ಈ ಕುರಿತು ನಾನೇ ಚಿಂತಿಸಿದೆ. ಇತರರೊಂದಿಗೆ ತಿಳಿದ ಹಾಗೆ ಚರ್ಚಿಸಿದೆ. ಆ ಹೊತ್ತಿನಲ್ಲಿ ನನ್ನ ಸಹಪಾಠಿಯಾಗಿದ್ದ, ಈಗ ಅಮೆರಿಕದಲ್ಲಿ ನೆಲೆಸಿರುವ ವೈದ್ಯ ಗೆಳೆಯ ಜಯರಾಂ ಸಾಹಿತಿ ಆಗಬೇಕಾದರೆ ಸರಳ ಉಡುಪು ತೊಡಬೇಕು. ಅಂದರೆ ಪೈಜಾಮ, ಜುಬ್ಬ ಹೀಗೆ, ಏಕಾಂಗಿಯಾಗಿರಬೇಕು ಆಗ ಭಾವನೆಗಳು ಉದುರುತ್ತವೆ ಎಂದೊಂದು ಉಚಿತ ಸಲಹೆ ನೀಡಿದ. ಅವನ ಮಾತನ್ನು ಶಿರಸಾವಹಿಸಿ ಹಾಗೆಯೇ ಬಟ್ಟೆಗಳನ್ನು ಹೊಲಿಸಿದೆ. ಏಕಾಂಗಿಯಾಗಿ ಇರತೊಡಗಿದೆ. ಬಹಳ ಕಷ್ಟಪಟ್ಟು ಅನ್ನಿ, ಅಷ್ಟಕ್ಕೆ ಸಾಹಿತ್ಯಲೋಕದ ಅಂಗಳದಲ್ಲಿ ಓಡಾಡಿದ ಮನಸ್ಥಿತಿಯೂ ನನ್ನದಾಯಿತು. ಆದರೆ, ಕೃತಿಗಳೇನೂ ಉದುರಲಿಲ್ಲ.

ಇನ್ನು ದೊಡ್ಡ ಲೇಖನಗಳನ್ನು ಬರೆದರೆ ದೊಡ್ಡ ಸಾಹಿತಿಯಾಗಬಹುದೆಂಬ ಸ್ಥಾಯಿ ಭಾವ ನನ್ನಲ್ಲಿ ಇದ್ದೇ ಇದ್ದಿತಲ್ಲ? ಒಮ್ಮೆ ತರಗತಿಯ (ಕಾಲೇಜಿನಲ್ಲಿ) ಉಪನ್ಯಾಸಕರು 'ಸಾಹಿತ್ಯದಿಂದ ಆಗುವ ಪ್ರಯೋಜನವೇನು?' ಎಂಬ ವಿಷಯದ ಬಗ್ಗೆ ಒಂದು ಪ್ರಬಂಧ ಬರೆಯಲು ಹೇಳಿದರು. ಸಾಹಿತಿಯಾಗುವ ಮನಸ್ಥಿತಿಯಲ್ಲೇ ಇದ್ದ ನಾನು, ಎರಡು ಫುಲ್‌ಸ್ಕೇಪ್ ಹಾಳೆಯಲ್ಲಿ, ಒಂದೇ ಒಂದು ದೊಡ್ಡ ವಾಕ್ಯದಲ್ಲಿ ಇಡೀ ಪ್ರಬಂಧವನ್ನು ಬರೆದು ಮುಗಿಸಿದೆ. ನನ್ನ ಬರವಣಿಗೆಯ ಚಾತುರ್ಯಕ್ಕೆ ಮೇಷ್ಟರು ದಂಗಾಗಿ, ನನ್ನನ್ನು ಖಂಡಿತ ಹೊಗಳೇ ತೀರುತ್ತಾರೆ ಎಂಬ ಆಶಾಭಾವನೆಯಿಂದಿದ್ದೆ. ಪ್ರಬಂಧ ಓದಿದ ಉಪನ್ಯಾಸಕರು 'ಯಾವನೊ ದೊರೆಸ್ವಾಮಿ?' ಅಂತ ಕೈಯಲ್ಲಿ ಪೇಪರ್ ಹಿಡಿದುಕೊಂಡು ಕೇಳಿದರು. ಹೆಮ್ಮೆಯಿಂದ 'ನಾನು ಸಾರ್' ಅಂತ ಎದ್ದು ನಿಂತುಕೊಂಡೆ. 'ಒಳ್ಳೆ ಎತ್ತುಚ್ಚೆ ಹುಯ್ದಂಗೆ ಉದ್ದಕ್ಕೆ ಒಂದೇ ವಾಕ್ಯ ಬರೆದಿದ್ದೀಯಲ್ಲಾ? ಯಾವ ಬೇಕೂಫ ಹೇಳಿಕೊಟ್ಟ ನಿನಗೆ?' ಅಂತ ಗಡುಸುಮುಖದಿಂದ ಕೇಳಿದಾಗ ನನ್ನ ಸಾಹಿತಿಯ ಗರ್ವರಸವೆಲ್ಲ ಸೋರಿಹೋದುದು ಈಗ ತಮಾಷೆ ಅನ್ನಿಸುತ್ತದೆ.

ನಾನು ಬರಹಗಾರನಾಗಲು ನಡೆಸಿದ ಇನ್ನೊಂದು ಪ್ರಯತ್ನವನ್ನೂ ಇಲ್ಲಿ ಹೇಳಿಬಿಡುವುದು ಸೂಕ್ತ. ಸಾಹಿತಿ ಆಗಬೇಕಾದರೆ ಆತ ಪ್ರಕೃತಿ ಸನಿಹದಲ್ಲಿ ಇರಬೇಕು ಎಂಬ ಅಭಿಪ್ರಾಯವೊಂದು ನನ್ನಲ್ಲಿ ಮೊಳಕೆಯೊಡೆಯಿತು. ಆದರೆ, ಪ್ರಕೃತಿ ಇರುವುದು ಎಲ್ಲಿ? ನಾನಿರುವುದು ಮೈಸೂರು ನಗರದಲ್ಲಿ ಆದುದರಿಂದ, ಮೈಸೂರು ನಗರದ ಹೊರಗಡೆ ಪ್ರಕೃತಿಯಿರುವ ಏಕಾಂತ ಸ್ಥಳಕ್ಕೆ ಹೋಗಿ, ಅಲ್ಲಿ ಬರೆಯಬೇಕೆಂಬ ಅಭಿಪ್ರಾಯ ಮೂಡಿಬಂದಿತು. ಹಾಗಾಗಿ, ಮೈಸೂರಿನ ಸುತ್ತಮುತ್ತ ಇರುವ ಪ್ರಕೃತಿ ತಾಣಗಳನ್ನು ಲೆಕ್ಕಾಚಾರ ಹಾಕತೊಡಗಿದೆ. ಆಗ, ನೆನಪಿಗೆ ಬಂದದ್ದು ನನಗೆ ಚಿರಪರಿಚಿತವಾಗಿದ್ದ ರೇಸ್‌ಕೋರ್ಸ್ ಸಮೀಪದ ಜಾಗ. ಆ ಕಾಲದಲ್ಲಿ ತುಂಬು ಮರಗಳಿಂದ ತುಂಬಿದ್ದ ಜಾಗ ಒಂದು ಸಣ್ಣ ಕಾಡಿನಂತೇ ಇತ್ತು. ಆ ಮರದ ತೋಪಿನಲ್ಲಿ ಏಕಾಂಗಿಯಾಗಿ ಕುಳಿತು ಬರೆದರೆ ಖಂಡಿತ ಉತ್ತಮ ಸಾಹಿತ್ಯ ಮೂಡುತ್ತದೆ ಎಂಬ ಅಚಲ ನಂಬಿಕೆಯಿಂದ ಬಿಡುವು ಸಿಕ್ಕಾಗಲೆಲ್ಲ ಬಿಳಿ ಹಾಳೆ, ಪೆನ್ನು ಹಿಡಿದು ಆ ಕಡೆಗೆ ನನ್ನ ಸಾಹಿತ್ಯಯಾತ್ರೆ ಪ್ರಾರಂಭಿಸಿದೆ. ನಮ್ಮ ಮನೆಯಿಂದ ಸುಮಾರು ಮೂರು ಮೈಲಿ ದೂರದಲ್ಲಿದ್ದ ಆ ಸ್ಥಳಕ್ಕೆ ಹೋಗುವುದು ಯಾವ ಮರದ ಕೆಳಗೆ ಕೂರಬೇಕೆಂದು ಶೋಧಿಸುವುದು, ಏನು ಬರೆಯಬೇಕೆಂದು ಚಿಂತಿಸುವುದು ಈ ಕೆಲಸಗಳಲ್ಲೆ ನನ್ನ ಕಾಲವೆಲ್ಲ ಜಾರಿ ಹೋಗುತ್ತಿತ್ತು. ಕುವೆಂಪು, ಆರ್.ಕೆ.ನಾರಾಯಣ್ ಈ ಮುಂತಾದ ಪ್ರಸಿದ್ಧ ಲೇಖಕರೆಲ್ಲ ತಮ್ಮ ಕೃತಿಗಳನ್ನು ಬರೆಯುತ್ತಿದ್ದುದು, ಸ್ಫೂರ್ತಿ ಪಡೆಯುತ್ತಿದ್ದುದು ಕುಕ್ಕರಹಳ್ಳಿ ಕೆರೆಯ ದಡದ ಮೇಲೆ ಎಂಬ ಮಾತೊಂದು ಕಿವಿಗೆ ಬಿದ್ದುದರಿಂದ, ಅದೇ ಸ್ಥಳವೇ ನನಗೂ ಸೂಕ್ತವೆಂದು ಇನ್ನೊಮ್ಮೆ ಮನಸ್ಸು ಬದಲಿಸಿದೆ. ಜಾಗ ಕದಲಿಸಿದೆ. ಕೆರೆಯ ಯಾವ ಭಾಗದಲ್ಲಿ ಕುಳಿತು ಅವರು ಬರೆದಿರಬಹುದು ಎಂಬ ಸಂಶೋಧನೆಯಲ್ಲಿ ಇನ್ನಷ್ಟು ಕಾಲ ಜಾರಿತು. ಆದರೆ, ಈವರೆಗೆ ನಾನೇನು ಬರೆದಿದ್ದೇನೊ ಅದನ್ನೆಲ್ಲ ಬರೆದದ್ದು ನನ್ನ ಕಿರು ಕೋಣೆಯಲ್ಲೇ ಎಂಬುದು ಮಾತ್ರ ಸತ್ಯ. ಬರೆಯುವುದಕ್ಕೇ ಬೇಕಾದ್ದು ಜೀವನಾನುಭವ ಮತ್ತು ದೃಢ ಮನಸ್ಸು ಎಂಬ ವಾಸ್ತವತೆ ಕ್ರಮೇಣ ನನಗೆ ಅರಿವಾಗುತ್ತ ಬಂತು.

ಬಳಿಕ ಕಥೆ, ಕಾದಂಬರಿ, ಕಾವ್ಯ, ನಾಟಕಗಳನ್ನು ಸಾಮರ್ಥ್ಯವಿರುವಷ್ಟು ಬರೆದೆ. ಅವು ಪುಸ್ತಕಗಳ ರೂಪದಲ್ಲೂ ಹೊರಬಂದವು. ಆದರೂ ನನ್ನೊಳಗಿರುವ ಫುಟ್‌ಬಾಲ್ ಆಟಗಾರ ಮಾತ್ರ ದೊಡ್ಡಕೆರೆ ಮೈದಾನದಲ್ಲಿ ಆಗಾಗ ಸುತ್ತುವುದುಂಟು. ಒಂದು ಸಮಯ ನಾನು ಬರಹಗಾರನಾಗುವ ಬದಲು ಫುಟ್‌ಬಾಲ್ ಆಟಗಾರನಾಗಿಯೇ ಮುಂದುವರೆದಿದ್ದರೆ ನನ್ನ ಓದುಗರ ಸಂಖ್ಯೆಗಿಂತ ನೋಡುಗರ ಸಂಖ್ಯೆ ಖಂಡಿತ ಹೆಚ್ಚಿರುತ್ತಿತ್ತೇನೊ ಅಂತ ಈಗಲೂ ಒಮ್ಮೊಮ್ಮೆ ಅನ್ನಿಸುತ್ತದೆ. ಆದರೆ, ಅನ್ನಿಸುವುದಕ್ಕಿಂತ ಆಗಿರುವುದೇನು ಎಂಬುದು ತಾನೆ ಮುಖ್ಯ. ಅಲ್ಲವೆ?

■ **ಹೊರೆಯಾಲ ದೊರೆಸ್ವಾಮಿ, ಮೈಸೂರು**

---

## ವಾರ ಪತ್ರಿಕೆ ಖರೀದಿಸಿ ಹಂಚುವ ಕವಿ

**ಉತ್ತರ ಕರ್ನಾಟಕದ ಕಡೆ ಕವಿಗಳ ಸಂಖ್ಯೆ ಹೆಚ್ಚು. ಅವರು ಬರೆಯುವುದು ಪ್ರಸಿದ್ಧ ಪತ್ರಿಕೆಗಳಲ್ಲಿ ಅಚ್ಚಾದರಂತೂ ಹುಗ್ಗಿ ಉಂಡಷ್ಟು ಖುಷಿ. ಹಾಗೆ ಪತ್ರಿಕೆಯಲ್ಲಿ ಪ್ರಕಟವಾದದ್ದು ನಾಕಾರು ಜನಕ್ಕೆ ತಿಳಿಯಲಿ ಎಂದೂ ಆಸೆ. ಅಂಥ ಕವಿಯೊಬ್ಬರ ಕವನ ವಾರಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದನ್ನು ಹಿಡಿದು ಅವರು ಬೆಳಗ್ಗೆಯೇ ಬ್ಯಾಂಕಿಗೆ ಹೋದರು. ಅಲ್ಲಿ ಎದುರಾದವರು 'ಇದೇನು? ಈಗ ಬಂತಾ?' ಎಂದಿದ್ದೇ. ' ಹೂಂ. ನನ್ನ ಕವಿತಾ ಬಂದದ' ಎನ್ನುತ್ತಾ ಪುಟ ತೆರೆದು ಅವರ ಮುಖಕ್ಕೆ ಹಿಡಿದು, ಓದಿಸಿಯೇಬಿಟ್ಟರು. ಅಷ್ಟೇ ಅಲ್ಲ 'ನೀವೇ ಇಟಕೋರಿ. ನಾ ಇನ್ನೊಂದ ಖರೀದಿ ಮಾಡತೀನಿ' ಎಂದು ಹೋಗಿಯೇ ಬಿಟ್ಟರು. ಇದೇ ರೀತಿ ಅವರು ದಿನವಿಡೀ ಆ ವಾರಪತ್ರಿಕೆಯ ನೂರಾರು ಸಂಚಿಕೆಗಳನ್ನು ಕೊಂಡು ಎದುರಾದವರಿಗೆಲ್ಲ ಅರ್ಪಿಸಿ ಧನ್ಯರಾದರು.** ■

# ಮಕ್ಕಳನ್ನು ದಿಕ್ಕುಗೆಡಿಸುವ ಟಿವಿ ಜಾಹೀರಾತುಗಳು



**ಬುದ್ಧಿ ಬಲಿಯದ ಮಕ್ಕಳ ಮನಸ್ಸಿನ ಮೇಲೆ ಟಿವಿ ಜಾಹೀರಾತುಗಳ ಪ್ರಭಾವ ಅಪಾರ. ಅಲ್ಲಿ ಬರುವ ವಿವರಗಳೆಲ್ಲ ಸತ್ಯ ಎಂದೇ ಮಕ್ಕಳು ಭಾವಿಸುತ್ತವೆ.**

**ಚಾಕೋಲೇಟ್‌ನಿಂದ ಹಿಡಿದು ದುಬಾರಿ ಕಾರಿನವರೆಗೆ ಟಿವಿಯಲ್ಲಿ ಕಾಣಿಸುವುದೆಲ್ಲ ಬೇಕು ಎಂದು ಆಶಿಸುತ್ತವೆ. ತಂದೆ ತಾಯಿಗಳು, ಮನೆಗೆ ಬೇಕೋ ಬೇಡವೋ, ಮಕ್ಕಳ ಒತ್ತಾಯಕ್ಕಾಗಿ ಏನೆಲ್ಲ ಖರೀದಿಸ ಬೇಕಾಗುತ್ತದೆ. ಇತ್ತೀಚೆಗೆ ನಡೆಸಿದ ಸರ್ವೆ ಒಂದು ಇದನ್ನು ಬಹಿರ್ರಂಗ ಗೊಳಿಸಿದೆ.**

ಇಂದಿನ ಮಕ್ಕಳೇ ನಾಳಿನ ಗ್ರಾಹಕರು. ಬುದ್ಧಿ ಬಲಿಯದ ಮಕ್ಕಳು ತಮ್ಮ ಹಟ, ಮುನಿಸಿಂದ ತಂದೆ ತಾಯಿಯ ಮೇಲೆ ಒತ್ತಡ ಹೇರಿ, ಏನೆಲ್ಲ ಖರೀದಿಸಲು ಪ್ರೇರಿಸುತ್ತವೆ. ಇದನ್ನು ಚೆನ್ನಾಗಿ ಅರಿತ ಕಂಪೆನಿಗಳು ಟಿವಿ ಜಾಹೀರಾತಿನ ಮೂಲಕ ಇಡೀ ಎಳೆಯರ ಸಮೂಹವನ್ನೇ ದಿಕ್ಕು ತಪ್ಪಿಸುತ್ತಿವೆ.

ಉದಯಪುರದ ನಾನಾ ಶಾಲೆಗಳಲ್ಲಿ ಓದುತ್ತಿರುವ ಮೂವತ್ತು ಜನ 12 ರಿಂದ 15 ವರ್ಷದ ಬಾಲಕ, ಬಾಲಕಿಯರನ್ನು ಅಧ್ಯಯನಕ್ಕೆ ಗುರಿ ಮಾಡಲಾಯಿತು. ಇವರು ಖರೀದಿಸುವ ವಸ್ತುಗಳು ಎಂಥವು? ಇಂಥ ಖರೀದಿಗೆ ಪ್ರೇರಣೆ, ಕಾರಣಗಳೇನು? ಎಂಬುದೇ ಅಧ್ಯಯನದ ವಸ್ತು. ಮಕ್ಕಳಲ್ಲಿ ಹದಿನೈದು ಜನ ಬಾಲಕರು, ಉಳಿದವರು ಬಾಲಕಿಯರು ಇವರ ಮೇಲೆ ಟಿವಿ ಜಾಹೀರಾತುಗಳಿಂದ ಆಗುತ್ತಿರುವ ಪ್ರಭಾವ. ಆದರಿಂದಲೇ ಖರೀದಿಗೆ ಪ್ರೇರಣೆ ಆಗುತ್ತಿದೆಯೇ ಎಂಬುದನ್ನೂ ಪರಿಶೀಲಿಸಲಾಯಿತು.

ಇವರೆಲ್ಲ ಒಕ್ಕೊರಲಿಂದ ಹೇಳಿದ ಪ್ರಮುಖ ಅಂಶವೆಂದರೆ - ಅವರೆಲ್ಲರೂ ಟಿವಿ ಜಾಹೀರಾತಲ್ಲಿ ತೋರಿಸುವುದೆಲ್ಲ ಸತ್ಯ ಎಂದೇ, ನಂಬಿದ್ದರು. ಅದಕ್ಕೆ ಮುಖ್ಯ ಕಾರಣ ಎಂದರೆ, ಟಿವಿಯಲ್ಲಿ ತೋರಿಸುವ ಎಲ್ಲ ಉತ್ಪನ್ನಗಳ ಉತ್ಕೃಷ್ಟತೆಯನ್ನು ಸಿನಿಮಾ ತಾರೆಯರು ಅಥವಾ ಕ್ರೀಡಾಪಟುಗಳು ಸಾರಿ ಹೇಳಿದ್ದು. ತಾವು ಆರಾಧನಾ ಭಾವದಿಂದ ನೋಡುವ ಇಂಥ ವ್ಯಕ್ತಿಗಳು ಹೇಳುವ ಸಂಗತಿಗಳ ಸತ್ಯಾಸತ್ಯತೆ ಏನೆಂದು ವಿಶ್ಲೇಷಿಸಲು ಸಾಧ್ಯವಿರದಂಥ ಎಳೆಯ, ಮುಗ್ಧ ಮನಸ್ಸುಗಳು ಈ ಎಲ್ಲ ಮಕ್ಕಳದು. ಭಾರತದ ಉಳಿದ ಈ ವಯಸ್ಸಿನ ಮಕ್ಕಳ ಸ್ಥಿತಿ ಕೂಡ ಇದಕ್ಕಿಂತ ಭಿನ್ನವೇನಲ್ಲ ಅಲ್ಲವೇ?

ಟಿವಿಯಲ್ಲಿ ಜನಪ್ರಿಯವಾಗಿರುವ ಜಾಹೀರಾತುಗಳು, ಅವುಗಳ ವಾಸ್ತವ ಸಂಗತಿಗಳೇನು ಎಂಬುದನ್ನು ಪರಿಶೀಲಿಸಿದರೆ ಇನ್ನಷ್ಟು ಬೆಚ್ಚಿ ಬೀಳಿಸುವ ಅಂಶಗಳು ಹೊರಬೀಳುತ್ತವೆ.



**ಕೆಲಾಗ್ಸ್ ಫ್ಲೇಕ್:** ಅಧ್ಯಯನಕ್ಕೆ ಗುರಿಯಾದ ಮಕ್ಕಳಲ್ಲಿ ಶೇಕಡಾ 48 ಜನ ಕೆಲಾಗ್ಸ್ ಫ್ಲೇಕ್‌ನಿಂದ ತಮ್ಮ ಪೌಷ್ಟಿಕತೆ ಸಾಧಿಸುತ್ತದೆ ಎಂದು ನಂಬಿದವರು. ಈ ಉತ್ಪನ್ನದಲ್ಲಿರುವ ಇತರ ಮೂರು ಮುಖ್ಯ ಪದಾರ್ಥಗಳೇನು ಎಂಬುದು ಶೇಕಡಾ 78 ಜನಕ್ಕೆ ತಿಳಿದಿರಲಿಲ್ಲ.

ಈ ಚಾಕೋ ಉತ್ಪನ್ನದಲ್ಲಿ ಐದು ಗ್ರಾಂಗಿಂತ ಹೆಚ್ಚು ನಾರಿನ ಅಂಶ ಮತ್ತು ಮೂರು ಗ್ರಾಂ ಅಥವಾ ಅದಕ್ಕಿಂತ ಕಡಿಮೆ ಸಕ್ಕರೆಯ ಅಂಶ ಇರಬೇಕು. ಆದರೆ ನಮ್ಮಲ್ಲಿ ದೊರೆಯುವ ಕೆಲಾಗ್ಸ್ ಚಾಕೋದಲ್ಲಿ ಕೇವಲ ಒಂದು ಗ್ರಾಂನಷ್ಟು ಮಾತ್ರ ನಾರಿನಂಶ ಇರುತ್ತದೆ. ಶೇಕಡಾ 42 ಕ್ಕೂ ಹೆಚ್ಚಿನಂಶ ಸಕ್ಕರೆ ಇರುತ್ತದೆ.

ಈ ಉತ್ಪನ್ನದ ಮೇಲೆ ಅಮೇರಿಕನ್ ಹಾರ್ಟ್ ಅಸೋಸಿಯೇಷನ್‌ನ ಲೋಗೋ ಬೇರೆ ಇರುತ್ತದೆ. ಇದಕ್ಕಾಗಿ ಕಂಪನಿ ಸಂಘಕ್ಕೆ ಎರಡೂವರೆ ಸಾವಿರ ಡಾಲರ್ ತೆತ್ತಿರುತ್ತದೆ. ಅಲ್ಲದೆ ಪ್ರತಿವರ್ಷ 650 ಡಾಲರ್ ಹಣ ತೆರುತ್ತದೆ. ನಾವು ಇದರ ಮೇಲೆ ಹಾರ್ಟ್ ಅಸೋಸಿಯೇಷನ್‌ನ ಮುದ್ರೆ ಇದೆ ಎಂದು ಕಣ್ಣು ಮುಚ್ಚಿ ನಂಬುತ್ತೇವೆ. ಒಳಗೇ ನಡೆದ ಹಣದ ವ್ಯವಹಾರ, ಪ್ರಭಾವ ಗಮನಕ್ಕೆ ಬರುವುದೇ ಇಲ್ಲ.

ಮಕ್ಕಳಂತೂ ಇಂಥದ್ದನ್ನೆಲ್ಲ ವಿವೇಚಿಸುವ ಶಕ್ತಿ ಪಡೆದೇ ಇರುವುದಿಲ್ಲ. ಹೀಗಾಗಿಯೇ ಕೆಲಾಗ್ಸ್ ತನ್ನ ಮಾರುಕಟ್ಟೆಯನ್ನು ಭಾರತದಲ್ಲಿ ವಿಸ್ತರಿಸಿಕೊಂಡಿದೆ.

**ವಿಡಿಯೋಕಾನ್** : ಕ್ಷಣಾರ್ಧದಲ್ಲಿ ಕೊಳೆಯಾದ ಬಟ್ಟೆ ಒಗೆದು ಝಗ ಝಗಿಸುವ ಹಾಗೆ ಮಾಡಬಲ್ಲ ಟಿವಿ ಜಾಹೀರಾತು ಮಕ್ಕಳ ಮೇಲೆ ಎಷ್ಟೊಂದು ಪ್ರಭಾವಕಾರಿ ಎಂದರೆ, ಬಟ್ಟೆಗಳನ್ನು ಒಗೆದು ಒಣಗಿಸಲು ಯಾವುದೇ ವಾಷಿಂಗ್ ಮೆಷೀನಿಗಾದರೂ ಹಲವಾರು ನಿಮಿಷಗಳೇ ಬೇಕಾಗುತ್ತವೆ ಎಂಬ ವಾಸ್ತವವೇ ಮಕ್ಕಳ ಗಮನಕ್ಕೆ ಬರುವುದಿಲ್ಲ. ಹಾಗೆಂದೇ ಅಧ್ಯಯನಕ್ಕೆ ಒಳಗಾದ ಶೇಕಡಾ 40 ಮಕ್ಕಳು ಒಪ್ಪಿಕೊಂಡಿವೆ.

**ಧಾರಾ**: ಧಾರಾ ತೈಲದ ಜಾಹೀರಾತಿನಲ್ಲಿ ಕಂಡು ಬರುವ ಮನೆ ಬಿಟ್ಟು ಓಡಿ ಬಂದ ಮಗುವಿನ ಉದಾಹರಣೆಯೇ ನೋಡಿ. ಇದು ಎಳೆಯ ಮಕ್ಕಳ ಮನಸ್ಸಿನ ಮೇಲೆ ಮಾರಕ ಪರಿಣಾಮ ಬೀರಬಹುದು. ಹಾಗೆ ನೋಡಿದರೆ ಇಂಥ ಜಾಹೀರಾತು ಬಳಸುವುದು ಖಂಡಿತ ಸರಿಯಲ್ಲ. ತಂದೆ ತಾಯಿಗಳ ಗಮನ ಸೆಳೆಯಲೆಂದು ಜಾಹೀರಾತಿನಲ್ಲಿ ಬರುವ ಮಗು ಹಾಗೆ ಮಾಡುತ್ತದೆಂದು ಬಹಳಷ್ಟು ಜನ ಹೇಳಿದರೆ, ಕೆಲವರು ಉತ್ಪನ್ನದ ಬೇಡಿಕೆ ಹೆಚ್ಚಿಸಲು ಇಂಥದೊಂದು ಜಾಹೀರಾತು ಪ್ರದರ್ಶಿಸಲಾಗುತ್ತಿದೆ ಎಂದೂ ಇನ್ನು ಕೆಲವು ಮಕ್ಕಳು ಹೇಳಿದರು.

**ಬೋರ್ನ್‌ವಿಟಾ** : ಅಂಕ ಗಳಿಸುವುದಕ್ಕೂ ಬೋರ್ನ್‌ವಿಟಾ ಕುಡಿಯುವುದಕ್ಕೂ ಏನಾದರೂ ಸಂಬಂಧವಿದೆಯೇ? ಇದೆ ಎನ್ನುತ್ತವೆ ಮಕ್ಕಳು. ಅಧ್ಯಯನಕ್ಕೆ ಒಳಗಾದ ಶೇಕಡಾ 55 ಮಕ್ಕಳ ಅಭಿಪ್ರಾಯ ನೋಡಿ 'ಶಾಲೆಯಲ್ಲಿ ಶೇಕಡಾ 90 ಅಂಕ ಗಳಿಸಲು ಬೋರ್ನ್‌ವಿಟಾ ಕುಡಿಯುವುದು ಅಗತ್ಯ' ಎನ್ನುತ್ತವೆ ಈ ಮಕ್ಕಳು. ಕೇವಲ ಶೇಕಡಾ 17ರಷ್ಟು ಮಕ್ಕಳು ಮಾತ್ರ ಉತ್ಪನ್ನದ ಬೇಡಿಕೆ ಹೆಚ್ಚಿಸಲೆಂದೇ ಕೆಲವು ಉತ್ಪ್ರೇಕ್ಷಿತ ವಿಷಯ ಜಾಹೀರಾತಿನಲ್ಲಿ ಬಿಂಬಿಸಲಾಗಿದೆ ಎನ್ನುತ್ತವೆ.

ಮಕ್ಕಳು ಬೆಳೆಯಲು, ಗಟ್ಟಿಯಾಗಲು ಬೇಕಾದ ವಿಟಮಿನ್ ಹಾಗೂ ಶಕ್ತಿ ಎಲ್ಲವೂ ಬೋರ್ನ್‌ವಿಟಾದಲ್ಲಿದೆ ಎಂದು ಜಾಹೀರಾತು ಹೇಳುತ್ತವೆ. ಈ ವಿಟಮಿನ್‌ಗಳು ಹಾಗೂ ಶಕ್ತಿವರ್ಧಕಗಳು ಹೇಗೆ ಮಕ್ಕಳ ಬೆಳವಣಿಗೆಗೆ, ಶಕ್ತಿವರ್ಧನೆಗೆ ಸಹಾಯಕ ಎಂಬ ವಿವರ ಇಲ್ಲ. ಆದರೂ ಬಹು ಪಾಲು ಮಕ್ಕಳು ಜಾಹೀರಾತನ್ನು ನಂಬಿಕೊಂಡೇ ತಾಯಿ ಕೊಡುವ ಬೋರ್ನ್‌ವಿಟಾದತ್ತ ಕೈ ಚಾಚುತ್ತವೆ.

ಇದೇ ರೀತಿ ರಫಲ್ಸ್, ಲೈಫ್‌ಬಾಯ್ ಗೋಲ್ಡ್ ಮುಂತಾದ ಉತ್ಪನ್ನಗಳ ಬಗ್ಗೆಯೂ ಇಂಥದ್ದೇ ಮೌಢ್ಯ ಕಂಡು ಬಂತು. ಲೈಫ್ ಬಾಯ್ ಗೋಲ್ಡ್ ಬಳಸುವ ಜಾಹೀರಾತಿನ ಹುಡುಗಿ, ಗುಂಪಿನಲ್ಲಿನ ಇತರ ಹುಡುಗಿಯರಿಗಿಂತ ಬೆಳ್ಳಗಿದ್ದಾಳೆ. ಅವಳು ಯಾವುದೋ ಸೋಪಿಂದ ಮುಖ ತೊಳೆದರೂ, ಚರ್ಮ ಹೊಳೆಯುತ್ತದೆ. ಇದು ಯೋಚಿಸಿದಾಗ ದೊರೆಯುವ ಸಮಜಾಯಿಷಿ. ಆದರೆ ಉತ್ಪಾದಕರು ಹೇಗೆ ನೇರವಾಗಿಯೇ ಸತ್ಯ ಮರೆಮಾಚಿ ಹುಡುಗ, ಹುಡುಗಿಯರ ಕಣ್ಣಿಗೆ ಮಂಕು ಬೂದಿ ಎರಚುತ್ತಾರೆ ಎನ್ನುವುದಕ್ಕೆ ಉದಾಹರಣೆ ಮಾತ್ರ.

ಸಣ್ಣ ಮಕ್ಕಳಿಗೆ ತಾರ್ಕಿಕ ಯೋಚನೆ ಸಾಧ್ಯವಿಲ್ಲ. ಟಿವಿಯಲ್ಲಿ ತೋರಿಸುವುದೆಲ್ಲ ಸತ್ಯ ಎಂದು ನಂಬುತ್ತವೆ. ಇಂಥ ಜಾಹೀರಾತುಗಳ ಮೇಲೆ ನಿಯಂತ್ರಣ ಹೇರುವ ವ್ಯವಸ್ಥೆಯೂ ಇಲ್ಲಿಲ್ಲ. ಇಂಥ ಸ್ಥಿತಿಯಲ್ಲಿ ತಾಯಿ, ತಂದೆಗಳೇ ಸರಿಯಾದ ತಿಳುವಳಿಕೆ ಮಕ್ಕಳಲ್ಲಿ ಮೂಡಿಸುವುದು ಅನಿವಾರ್ಯ ಆಗುತ್ತಿದೆ.

ಇದೇ ಅಧ್ಯಯನದ ವೇಳೆ ಹಲವಾರು ಇತರ ಅಂಶಗಳೂ ಪತ್ತೆಯಾಗಿವೆ. ಮಕ್ಕಳು ಹೆಚ್ಚು ಸಮಯ ಈಗೀಗ ಟಿವಿಗಳಿಗೆ ಅಂಟಿ ಕಳೆಯುತ್ತಾರೆ. ಹೀಗೆ ಟಿವಿ ನೋಡುವಾಗ ಕಾರ್ಯಕ್ರಮ ನೋಡುವುದಕ್ಕಿಂತ ವಾಣಿಜ್ಯ ಜಾಹೀರಾತು ನೋಡುವುದೇ ಹೆಚ್ಚು. ಕಡಿಮೆ ವಯಸ್ಸಿನ ಮಕ್ಕಳಲ್ಲಿ ಬೆಳೆದ ಮಕ್ಕಳಿಗಿಂತ ಈ ಪ್ರವೃತ್ತಿ ಹೆಚ್ಚು. ಹೀಗೆ ಜಾಹೀರಾತು ಕಣ್ಣಿಟ್ಟು ನೋಡುವ ಮಕ್ಕಳು, ಅಲ್ಲಿ ಬಿಂಬಿಸುವ ಚಾಕೋಲೇಟ್, ಶಾಂಪೂ ಮುಂತಾದವನ್ನು ಪಡೆಯಲು ಮುಂದಾಗುತ್ತಾರೆ. ಹಾಗೆ ತಂದೆ ತಾಯಿ ಮನೆಗೆಂದು ಟಿವಿ, ಫ್ರಿಜ್ ಮುಂತಾದ ವಸ್ತುಗಳನ್ನು ಕೊಳ್ಳುವಾಗ ಹಟ ಹಿಡಿದು ಜಾಹೀರಾತಲ್ಲಿ ಕಂಡು ಮೆಚ್ಚಿಕೊಂಡ ವಸ್ತುಗಳನ್ನೇ ಖರೀದಿಸಲು ಒತ್ತಾಯ ಹೇರುತ್ತಾರೆ.

ಇಂಥ ಮಕ್ಕಳಲ್ಲಿ ಶೇಕಡಾ 48 ರಷ್ಟು ಜಾಹೀರಾತಲ್ಲಿ ತೋರಿಸುವುದೆಲ್ಲ ನಿಜ ಎಂದು ನಂಬುತ್ತವೆ. ಶೇಕಡಾ 77ರಷ್ಟು ಜನ ಜಾಹೀರಾತಲ್ಲಿ ತೋರಿಸಿದ ವಸ್ತುಗಳನ್ನೇ ಕೊಳ್ಳುವಂತೆ ಹಿರಿಯರನ್ನು ಒತ್ತಾಯಿಸಿ, ಒಲಿಸಿಕೊಂಡಿದ್ದಾರೆ. ಇದಕ್ಕಿಂತ ವಿಚಿತ್ರ ಏನು ಗೊತ್ತಾ? ಇಂಥ ಉತ್ಪನ್ನ ಯಾವಾಗ, ಹೇಗೆ ಬಳಸಬೇಕು ಎಂಬ ವಿಚಾರ ಅವರು ಕಲಿತುಕೊಂಡಿರುವುದು ಟಿವಿ ಜಾಹೀರಾತಿನಿಂದಲೇ.

ಇದನ್ನು ಅರಿತೇ ಭಾವನಾತ್ಮಕವಾಗಿಯೂ ಮಕ್ಕಳನ್ನು ಪ್ರಚೋದಿಸಿ ಗೆದ್ದುಕೊಳ್ಳಲು 'ಆಟ ಮತ್ತು ಖುಷಿ', ಕುಟುಂಬ ಮತ್ತು ವಾತ್ಸಲ್ಯ, ಆರೋಗ್ಯ ಪೂರ್ಣತೆ, ಸುರಕ್ಷಿತ' ಎಂಬಂಥ ಪದಗಳ ಮೇಲೆ ಈ ಜಾಹೀರಾತುಗಳು ಆಟವಾಡುತ್ತವೆ.

ಟಿವಿ ಜಾಹೀರಾತುಗಳಿಂದಾಗಿಯೇ ಇಂದಿನ ಮಕ್ಕಳು ಒತ್ತಾಯ ಪೂರ್ವಕ ಬೇಡಿಕೆ ಮಂಡಿಸುವುದು ಹೆಚ್ಚಾಗುತ್ತಿದೆ ಎಂದು ತಂದೆ ತಾಯಿಗಳೂ ಹೇಳುತ್ತಾರೆ. ಹೀಗಾಗಿಯೇ ಆ ಕುಟುಂಬಕ್ಕೆ ನಿಲುಕದ ಜೀವನ ಮಟ್ಟ, ವೈಭೋಗ ಮಕ್ಕಳು ಬಯಸುತ್ತವಲ್ಲದೇ ಅನಗತ್ಯ ವಸ್ತುಗಳನ್ನು ಕೊಳ್ಳಲೂ ಮಕ್ಕಳು ಹಟ ಹಿಡಿಯುವ ಅಪಾಯಕಾರಿ ಪ್ರವೃತ್ತಿಯೂ ಈಗೀಗ ಹೆಚ್ಚಾಗುತ್ತಿದೆ.

**ಪರಿಹಾರ**

ಇಂಥದೊಂದು ಪರಿಪಾಠ ಈಗಲೇ ತಡೆಯದೇ ಇದ್ದರೆ ಮುಂದೆ ಕೈಮೀರಿ ಹೋಗುತ್ತದೆ. ಈ ಪರಿಸ್ಥಿತಿಯಲ್ಲಿ ಹಲವಾರು ಕ್ರಮಕ್ಕೆ ತಂದೆ ತಾಯಿ ಮುಂದಾಗಬೇಕು. ಅಂಥ ಕ್ರಮಗಳ ಬಗ್ಗೆ ಅಮೇರಿಕಾದ 'ಸೆಂಟರ್ ಫಾರ್ ಸ್ಟಡಿ ಆಫ್ ರೆಸ್ಪಾನ್ಸೀವ್ ಲಾ' ಒಂದು ಪುಸ್ತಕ ಹೊರ ತಂದಿದೆ.

ಮಕ್ಕಳಿಗೆ ಟಿವಿ ನೋಡಲು ಬಿಡಲೇಬೇಡಿ. ಹಾಗೊಮ್ಮೆ ಮಕ್ಕಳು ಟಿವಿ ನೋಡಲೇಬೇಕು ಅಂತಾದಾಗ, ಜಾಹೀರಾತು ವಿಶ್ಲೇಷಿಸಿ ತಿಳಿಯುವ ಬುದ್ಧಿಶಕ್ತಿ ಬೆಳೆಸಿ ಎಂದು ಪುಸ್ತಕದಲ್ಲಿ ಸೂಚಿಸಲಾಗಿದೆ.

ಜಾಹೀರಾತಲ್ಲಿ ಸೂಚಿಸುವುದೆಲ್ಲ ಸತ್ಯವೇ? ಕೇವಲ ತನ್ನ ಉತ್ಪನ್ನದ ಜನಪ್ರಿಯತೆಗಾಗಿಯೇ ಇಂಥ ತಂತ್ರ ಅನುಸರಿಸಲಾಗಿದೆಯೇ? ಅಲ್ಲಿ ತೋರಿಸಲಾಗುವ ಉತ್ಪನ್ನ ಖರೀದಿಸದೇ ಇದ್ದರೆ ನಾವು ಮೂರ್ಖರಾಗುತ್ತೇವೆಯೆ? ಜಾಹೀರಾತಲ್ಲಿ ತೋರುವಷ್ಟು ಸೊಗಸಾಗಿಯೇ ಆ ಉತ್ಪನ್ನ ಅಥವಾ ಬೊಂಬೆ ನಿಜಕ್ಕೂ ಕಾರ್ಯನಿರ್ವಹಿಸುತ್ತದೆಯೇ? ಎಂಬೆಲ್ಲ ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡರೆ, ಟಿವಿ ಜಾಹೀರಾತಿನಿಂದಾಗುವ ಪಿಡುಗು, ಮಕ್ಕಳ ಮನಸ್ಸಿನ ಮೇಲಾಗುವ ದುಷ್ಟ ಪ್ರಭಾವ ಕಡಿಮೆ ಮಾಡುವುದು ಸಾಧ್ಯವಾಗಬಹುದು.

■ ವಿನುತಾ

(ವಿವಿಧ ಮೂಲಗಳಿಂದ)

# ಕಣ್ಮರೆಯಾದ ಕತೆಗಾರ 'ಪ್ರಭು'

ುರೆಯುವುದು ಬಹಳವಿತ್ತು. ಬದುಕಲು ಕಾರಣವಿತ್ತು. ಬಹುಶಃ ಯಮದೂತ ಬಂದು ಕರೆದಾಗ ಲ್ಪ ತಡಿಯಪ್ಪಾ, ಲಸವಿದೆ' ಎಂದು ಹೇಳಲೂ ಸಂಕೋಚವಾಗಿ ರಿ-ನಡಿ' ಎಂದು ನಡೆದೇ ಬಿಟ್ಟರು, ಅಚಾನಕ್ಕಾಗಿ.



'ಸಮುದ್ರದ ಕಿನಾರೆಗೆ ಬಂದು ನಿಂತ ಮಗುವೊಂದರ ಸಂಭ್ರಮ ಕಂಡಿದ್ದೀರಾ? ಸಮುದ್ರದ ವಿಶಾಲ ಒಡಲಿನಿಂದ ಕ್ರಮೇಣ ಉಬ್ಬುತ್ತಾ ದಂಡೆಗೆ ಬಡಿಯಲು ಬರುವ ಅಲೆಯನ್ನು ಕಂಡು ಮಗು ಬೆಚ್ಚುತ್ತದೆ. ಹಿಂದೆ ಸರಿಯುತ್ತದೆ. ಅಲೆ ಕ್ರಮೇಣ ಹಿಂದೆ ಸರಿಯುವುದನ್ನು ಕಂಡು, ಕೊಂಚ ಗಲಿಬಿಲಿಯಿಂದ, ತುಸು ಧೈರ್ಯದಿಂದ ಮುಂದೆ ಹೆಜ್ಜೆಯಿಡುತ್ತದೆ. ಅದೇ ಹೊತ್ತಿನಲ್ಲಿ ಕಾಲ ಕೆಳಗಿನ ಉಸುಕು ಸರಿಯುವುದನ್ನು ಕಂಡು ಅಧೀರವಾಗುತ್ತದೆ. ಆದರೆ ಆ ಗಾಬರಿ ಮಾಸುವಂತೆ ದಂಡೆಗೆ ಬಂದು ಬಿದ್ದ, ಕಪ್ಪೆಚಿಪ್ಪು ನಕ್ಷತ್ರ ಮೀನು ಕಂಡು ಅದನ್ನು ಬಾಚಿಕೊಳ್ಳಲು ಬಾಗುತ್ತದೆ. ಬಾಚಿದ ಅಂತಹ ಸಂಪತ್ತು ಚೆಡ್ಡಿ ಜೇಬಿಗೆ ಸೇರಿಸುತ್ತಿದ್ದಾಗ, ಗೆಳೆಯನೋ, ಚಿಕ್ಕಪ್ಪನೋ ಚೇಷ್ಟೆಗೆ, 'ನಂಗೊಂದು ಕೊಡೋ ಕಪ್ಪೆ ಚಿಪ್ಪು' ಎಂದರೆ, ಬೊಗಸೆಯನ್ನು ಕೇಳಿದವರ ಅಂಗೈಗೆ ಬರಿದುಮಾಡಿ ಕಿಲಕ್ಕನೆ ನಕ್ಕು, ನಿಷ್ಕಲ್ಮಶವಾಗಿ ಮತ್ತೆ ಶಂಖ, ಕಪ್ಪೆಚಿಪ್ಪು ಆಯ್ದುಕೊಳ್ಳಲು ಬಾಗುತ್ತದೆ. ಅದೇ ಮುಹೂರ್ತದಲ್ಲಿ ಮತ್ತೆ ಅಪ್ಪಳಿಸಿ ಬಂದ ಅಲೆ-ಮಗುವಿನ ಮೈಗೆಲ್ಲಾ ಉಪ್ಪು ನೀರಿನ ಅಭಿಷೇಕ ಮಾಡಿ ಚೆಡ್ಡಿ ತೊಯ್ಯಿಸಿ, ಮರಳ ಮಜ್ಜನ ಮಾಡಿಸಿ ಮರಳಿ ಸಾಗರಕ್ಕೆ ಸೇರುತ್ತದೆ. ಮಗು ಬೆಚ್ಚುತ್ತದೆ. ಆಸರೆಗೆ ದಂಡೆಯತ್ತ ಕಣ್ಣುಹಾಯಿಸಿ ಅಂಕಲ್ ಆಶ್ರಯಕ್ಕೆ ಕೈ ಚಾಚುತ್ತದೆ'. ಹೀಗಿದ್ದರು ಫ್ಯಾಂಟಸಿ ಕತೆಗಾರ ಪ್ರಭು. ಹಾಗೆಂದೇ ಆಪ್ತವಲಯದಲ್ಲಿ ಅವರು ಹೆಸರಾಗಿದ್ದರು. ಮಂದಗೆರೆ ಸೀತಾರಾಮಯ್ಯ ಕೇಶವ ಪ್ರಭು ( 15-7-38 ರಿಂದ 25-1-2000) ಕನ್ನಡ ಸಾಹಿತ್ಯದ ನವ್ಯೋತ್ತರ ಕಾಲ ಕಂಡ ಅಪರೂಪದ ಸಾಹಿತಿ.

ಕಾವ್ಯರಚನೆಯೊಂದನ್ನು ಹೊರತುಪಡಿಸಿ ಉಳಿದ ಪ್ರಕಾರಗಳಲ್ಲಿ ವಿಶಿಷ್ಟ ಕೃತಿ ರಚನೆಯ ನಂತರವೂ ಅವಜ್ಞೆಗೆ ಒಳಗಾದ ಲೇಖಕ. ಸಾಹಿತ್ಯವಲಯದಲ್ಲಿ ಯಾವುದೇ ಗುಂಪುಗಾರಿಕೆ ನಡೆಸದೇ, ಯಾವ ಪಂಥಕ್ಕೆ ಜೋತು ಬೀಳದೇ, ಯಾರಿಗೂ ಅನಗತ್ಯವಾಗಿ ಅಧಿಕಾರಲಾಲಸೆಯಿಂದ ಹತ್ತಿರಾಗದೇ, ಪೂರ್ವಗ್ರಹ ಪೀಡಿತನಾಗಿ ದೂರಾಗದೇ ಚಂದನದ ಬದುಕು ಸವೆಸಿದ ಕವಿಹೃದಯಿ.

ಪ್ರಭು ಬರವಣಿಗೆ-ಜನಾನುರಾಗಿಯಾಗುವ ಮಸಾಲೆ ಗುಣ ಹೊಂದಿರಲಿಲ್ಲ. ತಮಗಿಷ್ಟವಾದ ಪಾಶ್ಚಿಮಾತ್ಯ ಕತೆಗಳನ್ನು ಕನ್ನಡದ ಜಾಯಮಾನಕ್ಕೆ ಬಗ್ಗಿಸಿ ಬರೆಯುವಲ್ಲಿ ಅವರ ಸಿದ್ದಿ ದೊಡ್ಡದು. 'ಆಕಾಶದಿಂದತ್ತ ಪಾತಾಳದಿಂದತ್ತ' ನೀಳ್ಗತೆ ಇದಕ್ಕೆ ಉತ್ತಮ ಉದಾಹರಣೆ. ವಡ್ಡಾರಾಧನೆಯಲ್ಲಿ ಕಂಡು ಬರುವ ಹಾಗೆ ಕತೆಯೊಳಗಣ ಕತೆ ತಂತ್ರವನ್ನು ಫ್ಯಾಂಟಸಿ ಸೃಷ್ಟಿಗೆ ಯಶಸ್ವಿಯಾಗಿ ಬಳಸಿದ್ದಾರೆ. 'ಅವತಾರ' ಬಾನುಲಿ ರೂಪಕದಲ್ಲಿಯೂ ಇಂತಹುದೇ ತಂತ್ರದಿಂದ ಡಾರ್ವಿನ್ನನ ವಿಕಾಸವಾದವನ್ನು ಭಾರತೀಯ ತತ್ವ ಮೀಮಾಂಸೆಯ ಬೆಳಕಿನಲ್ಲಿ ಕಂಡ ಪ್ರಯತ್ನ. ಆದರೆ ಕೌಟುಂಬಿಕ ಮಾಸಿಕಗಳನ್ನು ಓದುವ ಕತೆಗಳ ವಾಚಕರಿಗೆ ಪ್ರಭು ಅರ್ಥವಾಗದ ಕತೆಗಾರರಾಗಿದ್ದರು. ಫ್ಯಾಂಟಸಿ ಕತೆಗಳಲ್ಲಿ ಅವರು ಸೃಷ್ಟಿಸಿದ ಪ್ರತಿಮೆಗಳನ್ನು ವಾಸ್ತವಲೋಕಕ್ಕೆ ಎಳೆದು ತಂದು ವಾಚ್ಯಮಾಡುವ ರಾಜಿಗೆ ಅವರು ತಯಾರಿರಲಿಲ್ಲ. ಹೀಗಾಗಿ 'ಗುಂಡುಸೂಜಿ', 'ಸ್ಪರ್ಧೆ' ಎರಡು ತೆಂಗಿನ ಮರದ ಉದ್ದದ ಮನುಷ್ಯ 'ತೂಕ ಮತ್ತು ಅಳತೆ' ಮುಂತಾದ ಸಂವಹನ ಮತ್ತು ಅರ್ಥವಂತಿಕೆ ಕುರಿತ ಅವರ ಕತೆಗಳು 'ಆಂಥಾಲಜಿಯಲ್ಲಿ' ಸ್ಥಾನ ಕಂಡರೂ ಜನಪ್ರಿಯತೆಯ ಭಾಗ್ಯ ಕಾಣಲಿಲ್ಲ. ಇದು ಪ್ರಭು ಅವರನ್ನು ಎಂದೂ ಕೊರಗುವಂತೆ ಮಾಡಲಿಲ್ಲ. ಸಮುದ್ರದಂಡೆಯಲ್ಲಿ ಶಂಖ-ಚಿಪ್ಪು ಆರಿಸುವ ನಿರ್ಮಲ ಹಸುಳೆಯಂತೆ ತನ್ನ ಪಾಡಿಗೆ ತಾನು ನಾಟಕ-ಕತೆ-ನೀಳ್ಗತೆ ಬರೆಯುತ್ತಾ ಸಾಗಿದರು ಪ್ರಭು. ಅವರು ಧಾರವಾಡದಲ್ಲಿ ವಾಸವಾಗಿದ್ದಾಗ ಅವರ ಮನೆ ಸೇರಿ ಮುದ್ದಿನ ಬೆಕ್ಕು ಆಗಿ ಅವರ ಮೇಲೆ ಪ್ರಭುತ್ವ ಸ್ಥಾಪಿಸಿದ ಬೀದಿಬೆಕ್ಕು 'ಚಿಲ್ಲಿ' ಆಗಿ ಒಂದು ಕತೆಯೇ ಆಗಿಬಿಟ್ಟಿತ್ತು. ಮೈಸೂರಿನಲ್ಲಿ ಇತ್ತೀಚೆಗೆ ಅವರ ಮನೆ ಸೇರಿದ ಒಂದು ಹೆಣ್ಣು ನಾಯಿ ಮತ್ತು ಅದರ ಮೂರು ಮರಿಗಳು 'ರಾಜಭವನದ' ಸೌಕರ್ಯ ಪಡೆದವು. 'ಇವೆಲ್ಲಾ ನನ್ನನ್ನು ದತ್ತು ಸ್ವೀಕರಿಸಿವೆ' ಎಂದು ಅವಕ್ಕೆ ಬಿಸ್ಕತ್ ಉಣಿಸುತ್ತಿದ್ದರು ಪ್ರಭು. ಆಕಾಶವಾಣಿಯಲ್ಲಿ ಸೇವೆಯಲ್ಲಿದ್ದಷ್ಟು ದಿನ - ಅವರ ಸಹೋದ್ಯೋಗಿಗಳಿಗೆ ಸಂಕಟದ ಗಳಿಗೆಗಳಲ್ಲಿ ಕಣ್ಣೀರು ಒಸರಿಕೊಳ್ಳುವ, ಬಾಧೆ ತೀರಿಸುವ ಹೆಗಲಾಗಿದ್ದರು. ಪ್ರಭು ಭಾಷಣ ವಿಭಾಗದ ಲೇಖನಗಳನ್ನು 'ಎಡಿಟ್' ಮಾಡುತ್ತಾರೆಂದರೆ ಬಾನುಲಿಗೆ ಬರುವ ಸಾಹಿತಿಗಳು ತಕರಾರು ಮಾಡುತ್ತಿರಲಿಲ್ಲ. ವಿಮರ್ಶಕರಾಗಿ ಪ್ರಜಾವಾಣಿಗೆ, ಸಾಹಿತ್ಯ ಅಕಾಡಮಿಗೆ ಲೇಖನ ಬರೆದಿದ್ದ ಪ್ರಭು, ಅನಗತ್ಯ ಕತ್ತರಿ ಆಡಿಸುವ ಚಟದವರಲ್ಲ. ತಿದ್ದುವಾಗಲೂ, ನೇವರಿಕೆಯ ಹಿತವಿತ್ತೇ ಹೊರತು, ಚುಚ್ಚುವ ಚೂಪಿಲ್ಲ. ಆ ವ್ಯಕ್ತಿತ್ವ ಅವರದಲ್ಲ. ಝೆನ್ ಕತೆಗಳನ್ನು 'ಮಲ್ಲಿಗೆ'ಗೆ ಅನುವಾದಿಸಿಕೊಟ್ಟಿದ್ದ ಕೇಶವ ಪ್ರಭು ಓದಿದ್ದು ಬಹಳ. ಬರೆದದ್ದು ಕಡಿಮೆ.

ಅರ್ಥಶಾಸ್ತ್ರದಲ್ಲಿ ಸ್ನಾತಕರು ಅವರು. ಯುಜಿನ್ ಅಯನೆಸ್ಕೋನಂತಹ ಯೂರೋಪಿಯನ್ ನಾಟಕಕಾರ - ಜೇಮ್ಸ್ ತರ್ಬರ್‌ನಂತಹ ಅಮೇರಿಕನ್ ಹಾಸ್ಯಲೇಖಕ-ಮಾರ್ಕ್ವೆಜ್‌ನಂತಹ ಕತೆಗಾರ-ಐಸಾಕ್ ಅಸಿಮೋವ್‌ನಂತಹ ವಿಜ್ಞಾನ ಲೇಖಕ-ಇವರನ್ನೆಲ್ಲಾ ಸಮಾನ ಶ್ರದ್ಧೆ ಮತ್ತು ಆಸಕ್ತಿಯಿಂದ ಓದಿದ್ದರು. ಹೀಗಾಗಿ ಪ್ರಭು, ತನ್ನ ನಿರೂಪಣೆಯಲ್ಲಿ ತರುತ್ತಿದ್ದ ಫ್ಯಾಂಟಸಿ ರೂಪಕಗಳಲ್ಲಿ ಮಹೋಪಮೆಯ ಹರವು-ವಿಸ್ತಾರ-ಆಳ ಮೂಡಿರುತ್ತಿತ್ತು.

'ಬಕ' ಈ ಮಾತಿಗೆ ಒಂದು ಉದಾಹರಣೆ. ಇಡೀ ನಾಟಕದ ಧ್ವನಿ, ಸಮಕಾಲೀನ ಸಮಾಜ ತುಮುಲಕ್ಕೆ, ನಿರಂಕುಶ ಆಡಳಿತಕ್ಕೆ ಉಪಟಳ ಕೊಡುವ ಆಡಳಿತಶಾಹಿಯ ಸ್ವಾರ್ಥ ಪ್ರೇರಿತ ದುರ್ವತನೆಗೆ ಕನ್ನಡಿ ಹಿಡಿದ ಕೃತಿ. ವಾಸ್ತವವಾಗಿ ದೇಶದಲ್ಲಿ ತುರ್ತು ಪರಿಸ್ಥಿತಿ ಹೇರುವ ಮೊದಲೇ ಅದನ್ನು ಅವರು ರಚಿಸಿದರಾದರೂ, ತುರ್ತುಪರಿಸ್ಥಿತಿ ನಂತರ ವ್ಯಾಪಕವಾಗಿ ರಂಗ ಪ್ರದರ್ಶನ ಕಂಡು ಲೇಖಕನಿಗೆ ಪ್ರಸಿದ್ಧಿ ತಂದು ಕೊಟ್ಟಿತು.

ಕಾನೂನು ಮತ್ತು ಖಡ್ಗಗಳ ತಾಕಲಾಟದ ಸಮರ್ಥ ಚಿತ್ರಣವಿರುವ 'ಗುಲಾಮನ ಸ್ವಾತಂತ್ರ್ಯ ಯಾತ್ರೆ' (ಮೂಲ ಅರಬ್ ನಾಟಕ-ತೌಫಿಕ್ ಅಲಿ) ಇತ್ತೀಚೆಗೆ ತಾನೇ ಜಯತೀರ್ಥ ಜೋಶಿ ಅವರ ನಿರ್ದೇಶನದಲ್ಲಿ ಸವದತ್ತಿಯಲ್ಲಿ ಪ್ರದರ್ಶನಗೊಂಡಿತು. ನಿರ್ದೇಶಕ ವೆಂಕಟಸುಬ್ಬಯ್ಯ ಪ್ರಭು ಅವರ ಹಲವು ನಾಟಕಗಳನ್ನು ರಂಗದ ಮೇಲೆ ತಂದಿದ್ದಾರೆ. ಆಕಾಶವಾಣಿಯಲ್ಲಿ 1981ರಲ್ಲಿ ಧಾರವಾಡ ಕೇಂದ್ರಕ್ಕೆ ನಾಟಕ-ಸಂಗೀತರೂಪಕ-ನಾವಿನ್ಯಪೂರ್ಣ ರೂಪಕ ವಿಭಾಗಗಳಲ್ಲಿ ಒಂದೇ ವರ್ಷ ಮೂರು ಪ್ರಶಸ್ತಿಯ ಹ್ಯಾಟ್ರಿಕ್ ದೊರೆತಾಗ, ನೇಪಥ್ಯದಲ್ಲಿ ಇದ್ದ ಪ್ರೇರಣೆ-ಸಲಕರಣೆ ಪ್ರಭು ಅವರದಾಗಿತ್ತು.

ಸ್ನೇಹಮಯಿ ಪ್ರಭು ಸಂಕೋಚದ ವ್ಯಕ್ತಿಯಾಗಿದ್ದರು. ಸರಸ ಸಂಭಾಷಣೆ, ಹಾಸ್ಯಪ್ರವೃತ್ತಿಯ ಈತ 'ಪೀಪಿ' ಕಾವ್ಯನಾಮದಿಂದ 'ಅಪರಂಜಿ' ಪತ್ರಿಕೆಗೆ ನಿಯಮಿತವಾಗಿ ಬರೆಯುತ್ತಿದ್ದರು. ಈಗಷ್ಟೇ ಪತ್ತೆದಾರಿ ಕನ್ನಡ ಕತೆಗಳ ಸಂಕಲನದ ಪೂರ್ವಭಾವಿ ಕೆಲಸ ಮಾಡುತ್ತಿದ್ದರು. ಬರೆಯುವುದು ಬಹಳವಿತ್ತು. ಬದುಕಲು ಕಾರಣವಿತ್ತು. ಬಹುಶಃ ಯಮದೂತ ಬಂದು ಕರೆದಾಗ 'ಸ್ವಲ್ಪ ತಡಿಯಪ್ಪಾ, ಕೆಲಸವಿದೆ' ಎಂದು ಹೇಳಲೂ ಸಂಕೋಚವಾಗಿ 'ಸರಿ-ನಡಿ' ಎಂದು ನಡೆದೇ ಬಿಟ್ಟರು, ಅಚಾನಕ್ಕಾಗಿ.

■ ಕೆ.ಆರ್.ಪ್ರಹಲ್ಲಾದ.

# ಕಳ್ಳರು ದರೋಡೆಕೋರರು ಹಾಗೂ ಕೊಲೆಗಾರರಿಂದ ರಕ್ಷಣೆ




ಮನೆ, ಅಂಗಡಿ, ಗೋದಾಮು, ಕಾರ್, ವ್ಯಾನ್, ಜೀಪ್ ಮುಂತಾದ ವಾಹನಗಳು ಹಾಗೂ ಬ್ಯಾಂಕ್ ಮತ್ತು ಪೆಟ್ರೋಲ್‌ಬಂಕ್ ಮುಂತಾದವುಗಳಲ್ಲಿ ಅನಧಿಕೃತ ಪ್ರವೇಶಗಳನ್ನು ತಡೆಯಲು ಮತ್ತು ಬಾಗಿಲು, ಕಿಟಕಿ ಮುಂತಾದುವುಗಳನ್ನು ಒಡೆದು ಒಳನುಗ್ಗಲು ಪ್ರಯತ್ನ ಪಟ್ಟರೆ ತಕ್ಷಣವೇ ನಮ್ಮ ಸ್ವಯಂಚಾಲಿತ ರಿಲೈ ಸೆಕ್ಯುರಿಟಿ ಸಿಸ್ಟಮ್ಸ್ ಎಂಬ ಸುಲಭವಾಗಿ ಅಳವಡಿಸಬಲ್ಲ ಸಾಧನವು ಎಚ್ಚರಿಕೆಯ ಸೈರನ್ ಶಬ್ದದಿಂದ ಸುತ್ತಮುತ್ತಲಿನವರನ್ನು ಎಚ್ಚರಗೊಳಿಸಿ, ನಿಮ್ಮ ಪ್ರಾಣ, ಆಸ್ತಿ ಮುಂತಾದವುಗಳನ್ನು ಕಾಪಾಡಲು ಸಹಾಯ ಮಾಡುತ್ತದೆ.

ಇದಕ್ಕೆ ಹೊರಗಿನ ವಿದ್ಯುಚ್ಛಕ್ತಿಯ ಅವಶ್ಯಕತೆ ಇಲ್ಲ. ಹೊರಗಿನ ದುಷ್ಟ ಶಕ್ತಿಗಳಿಂದ ಕೆಡಿಸಲು ಸಾಧ್ಯವಿಲ್ಲ. ಇಷ್ಟಾದರೂ ಸಾಮಾನ್ಯರ ಕೈಗೆಟುಕುವ ಬೆಲೆ.




ರಿಲೈ

ಸೆಕ್ಯುರಿಟಿ ಸಿಸ್ಟಮ್ಸ್
ಅಳವಡಿಸಿ ಮತ್ತು ನಿಶ್ಚಿಂತೆಯಿಂದಿರಿ

**ಅಧಿಕೃತ ಹಂಚಿಕೆದಾರರು**

## ಕೆ.ಪಿ.ಎನ್. ಮಾರ್ಕೆಟಿಂಗ್

ನಂ. 33, 1ನೇ ಕ್ರಾಸ್, ಎಸ್.ಆರ್. ನಗರ,
ಪಲ್ಲವಿ ಚಿತ್ರಮಂದಿರದ ಬಳಿ,
ಸಂಪಂಗಿರಾಮನಗರ, ಬೆಂಗಳೂರು - 560 027
ದೂರವಾಣಿ : 2233551

**ತಾಲ್ಲೂಕು ಮಟ್ಟದಲ್ಲಿ ಮಾರಾಟಗಾರರು ಬೇಕಾಗಿದ್ದಾರೆ**

# ಹೊಸ ಪುಸ್ತಕ

## 'ಅಂಕಿತ ಪುಸ್ತಕ'ದ ನೂತನ ಪ್ರಕಟಣೆಗಳು



### ತೆಂಬರೆ

ಲೇ: ವೀರಪ್ಪ ಮೊಯಿಲಿ
ಪುಟ: 208, ಬೆಲೆ: 96/-



### ಒಂದು ಊರಿನ ಕತೆಗಳು

ಸಂ: ಬರಗೂರು ರಾಮಚಂದ್ರಪ್ಪ
ಪುಟ: 244, ಬೆಲೆ: 60/-



### ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ

ಲೇ: ಶರಣಬಸವೇಶ್ವರ ಅಂಗಡಿ,
ಎಂ. ಎಚ್. ಕೃಷ್ಣಯ್ಯ
ಪುಟ: 200, ಬೆಲೆ: 90/-



### ಮುದ್ದುರಾಜರುಗಳ ಪ್ರಸಂಗ ಎಂಬ ಪ್ರಹಸನವು

ಲೇ: ಡಿ.ಎ.ಶಂಕರ್
ಪುಟ:56, ಬೆಲೆ: 40/-



### ಚೌಕೌ ಚೌಕಿ

ಲೇ: ಟಿ.ಆರ್.ಅನಂತರಾಮು
ಪುಟ: 264, ಬೆಲೆ:90/-



### ಮದುವೆಯ ಮೊದಲ ವರ್ಷ

ಸಂ:ಪದ್ಮಾ ಕೆ.ಎಸ್. ಉಮಾಪತಿ
ಪುಟ: 88, ಬೆಲೆ: 60/-



### ಹೊಸಗನ್ನಡ ಸಾಹಿತ್ಯ ಚರಿತ್ರೆ

ಲೇ: ಪ್ರೊ. ಎಲ್.ಎಸ್. ಶೇಷಗಿರಿರಾವ್
ಪುಟ: 352, ಬೆಲೆ:90/-

ಈ ಮೇಲಿನ ಎಲ್ಲ ಪುಸ್ತಕಗಳ ಪ್ರಕಾಶಕರು

ಅಂಕಿತ ಪುಸ್ತಕ, 53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್,
ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ
ಬೆಂಗಳೂರು - 560 004.

# ಮಕ್ಕಳು ದಣಿಯುತ್ತಿವೆಯೇ?



**ಮಕ್ಕಳು ಒಳ್ಳೆಯವರಾಗಬೇಕು. ಅವರ ಬದುಕು ಚೆನ್ನಾಗಿರಬೇಕು. ಇದು ಎಲ್ಲ ತಂದೆ ತಾಯಂದಿರ ಆಸೆ. ತನ್ನ ಶಾಲೆಯ, ಊರಿನ ಅಷ್ಟೇಕೆ ರಾಜ್ಯದ ಎಲ್ಲರಿಗಿಂತ ಮಗು ಜಾಣ ಎನಿಸಿಕೊಳ್ಳಬೇಕು. ಇಂಥ ಆಕಾಂಕ್ಷೆ ಇವತ್ತು ತೀವ್ರವಾಗುತ್ತಿದೆ. ಹಾಗಾಗಿಯೇ ಮಕ್ಕಳ ಮೇಲೆ ಒತ್ತಡ ಹೆಚ್ಚುತ್ತಿದೆ. ಇದಕ್ಕಿಂತ ಹೆಚ್ಚಾಗಿ, ನಾವು ಏನು ಆಗಬೇಕು ಅಂದುಕೊಂಡು ಆಗಲಿಲ್ಲವೋ ಅದನ್ನು ಮಕ್ಕಳಾದರೂ ಸಾಧಿಸಲಿ ಎಂಬ ಒಳಗಿನ ಆಸೆಯೂ ಇವತ್ತು ಮಕ್ಕಳನ್ನು ಧೃತಿಗೆಡಿಸುವಂಥ ಕಷ್ಟಗಳಿಗೆ ತಳ್ಳುತ್ತಿದೆ.**

ನಮಗೆ ಒಬ್ಬಳೇ ಮಗಳು. ನನ್ನ ಹೆಂಡತಿ ದುಡಿಯುವ ಮಹಿಳೆ. ಒಂದೂವರೆ ವರ್ಷದಿಂದಲೇ ಮಗಳನ್ನು ಬೇಬಿಕೇರ್ ಸೆಂಟರ್‌ಗೆ ಬಿಡುವುದು ಅನಿವಾರ್ಯವಾಗಿತ್ತು. ಮಗುವನ್ನು ಸರಿಯಾಗಿ ನೋಡಿಕೊಳ್ಳುವುದು ಆಗುತ್ತಿಲ್ಲ ಎಂಬ ವ್ಯಥೆ ನನಗೆ. ನಮ್ಮ ಜೊತೆ ಇರುವಾಗಲಾದರೂ ಆರಾಮಾಗಿ ಇರಲಿ ಎಂದು ಆಸೆ. ಮಗುವಾಗಿ ಅವಳು ಆಡಿಕೊಳ್ಳಲು ನನ್ನವಳು ಬಿಡುತ್ತಾ ಇರಲಿಲ್ಲ. ತಾನು ಸಂಜೆಯ ಅಡುಗೆ ಮಾಡುತ್ತಾ ಮಗುವಿಗೆ ಅಕ್ಷರ, ಅಂಕಿ, ತಿಥಿ, ವಾರ ಎಲ್ಲ ಬಾಯಿಪಾಠ ಮಾಡಿಸುತ್ತಾ ಇದ್ದಳು. ಅದು ಆಡಾಡುತ್ತಾ ಕಲಿಯುವುದು ಒಂದು ರೀತಿ ಇವಳು ಬೆತ್ತ ಹಿಡಿದ ಟೀಚರ್‌ನ ಹಾಗೆ, ಕಣ್ಣು ಬಿಡುತ್ತಾ ಮಗು ಮೂಲೆಯಲ್ಲಿ ಕೈಕಟ್ಟಿ ನಿಂತು, ಹೇಳಿಕೊಟ್ಟದ್ದು ಕಲಿಯಬೇಕು. 'ಕಲಿಯುತ್ತೇ ಬಿಡೇ, ಏನು ಮಹಾ ವಯಸ್ಸು!' ಎಂದು ಅಂದರೆ 'ನಿಮಗೇನು ಗೊತ್ತಾಗುತ್ತೆ ಸುಮ್ನೆ ಇರಿ. ನಾಳೆ ನರ್ಸರಿ ಸೇರೋ ಹೊತ್ತಿಗೆ ಇಂಟರ್‌ವ್ಯೂ ಮಾಡ್ತಾರೆ. ಅಲ್ಲಿ ಇವಳು ಬೆಬ್ಬೆಬ್ಬೆ ಅನ್ನಲಿ...'' ಎಂದು ಗುಡುಗುತ್ತಾ ಇದ್ದಳು.

ಅಲ್ಲಿಂದಲೇ ಮಗಳ ರೆಜಿಮೆಂಟೇಷನ್ ಶುರುವಾಯಿತು. ಅವಳಿಗೆ ಸ್ವಲ್ಪ ಅಲರ್ಜಿ ಸಮಸ್ಯೆ. ಉಸಿರಾಟದ ತೊಂದರೆ ಬಲಿಯದಂತೆ ಯೋಗಾಭ್ಯಾಸದ ತರಗತಿಗೆ ಆರು ವರ್ಷದವಳಿರುವಾಗ ಸೇರಿಕೊಂಡಳು. ಅಲ್ಲಿ ಕಲಿತ ಯೋಗಾಸನ ಅವಳು ಕಡ್ಡಾಯವಾಗಿ ಒಂದು ಗಂಟೆ ಮಾಡಬೇಕಿತ್ತು.

ಶಾಲೆಯಿಂದ ಬೇಗ ಬರುತ್ತಿದ್ದ ಅವಳು, ಅವರಿವರ ಜೊತೆ ಸೇರಿ ಕೆಡುತ್ತಾಳೆ ಎಂದು ಮೂರು ದಿನ ಡ್ಯಾನ್ಸ್ ಕ್ಲಾಸಿಗೂ, ಇನ್ನು ಮೂರು ದಿನ ಸಂಗೀತಕ್ಕೂ ಹೋಗುತ್ತಾ ಇದ್ದಳು. ಮಗುವಾದ್ದರಿಂದ ಸಹಜ ಉತ್ಸಾಹ, ಅವಳು ಖುಷಿ ಪಡುವಾಗ ನಾನೇಕೆ ಅಡ್ಡಿ ಆಗಬೇಕು ಅಂದುಕೊಂಡೆ. ಕೆಲವೇ ದಿನಕ್ಕೆ ನಾನು ಅಂದುಕೊಂಡದ್ದು ಹುಸಿಯಾಯಿತು.

ಬೆಳಿಗ್ಗೆ ಒಂದು ತಾಸು ಯೋಗಾಸನ. ಕೂಲಿಗಳ ಹಾಗೆ ಪುಸ್ತಕ ಹೊತ್ತು ಶಾಲೆಗೆ. ಅಲ್ಲಿ ಒಂದು ತಾಸು ಪಿ.ಟಿ. ಸಂಜೆ ಕ್ಲಾಸು ಬಿಡುತ್ತಿದ್ದ ಹಾಗೆ ಸಂಗೀತ ಇಲ್ಲವೇ ಡಾನ್ಸು. ನಾನು ಮನೆಗೆ ಬರುವಷ್ಟರಲ್ಲಿ ಮಗುವಿನ ದಣಿದ ಮುಖ ಕರುಳು ಸುಡುತ್ತಿತ್ತು. ಅವಳ ಹೋಂವರ್ಕ್ ಮುಗಿಸಲೂ ಆಸಕ್ತಿ ಇರುತ್ತಿರಲಿಲ್ಲ. ಆದಕ್ಕೆ ಮನೆಯಾಕೆ ನೀಡುತ್ತಿದ್ದ ಕಾರಣ ಬೇರೆಯೇ. 'ಹಾಳು ಮೂಳು ತಿಂತಾಳೆ. ಸರಿಯಾಗಿ ಊಟ ಮಾಡೋದಿಲ್ಲ' ಅದನ್ನು ಸರಿದೂಗಿಸಲು ಎನರ್ಜಿ ಡ್ರಿಂಕ್‌ಗಳನ್ನು ಬಲವಂತವಾಗಿ ಕುಡಿಸುತ್ತಾ ಇದ್ದಳು.

ಕೆಲವೇ ದಿನಕ್ಕೆ ಡ್ಯಾನ್ಸ್ ಕ್ಲಾಸಿಂದ ಬಂದ ಮೇಲೆ 'ಕಾಲು ನೋವು' ಎಂದು ಮಗಳು ದೂರುತ್ತಾ ಇದ್ದಳು. 'ಇವಳು ಶುದ್ಧ ಸೋಂಬೇರಿ. ಅದಕ್ಕೇ ಸುಮ್ಮನೆ ಕಳ್ಳಾಟ ಮಾಡ್ತಾಳೆ' ಹೆಂಡತಿಯ ದಿಢೀರ್ ವಿವರಣೆ.

ಮಗಳು ಮೈಚಾಚಿ ಮಲಗಿಕೊಂಡು ಹೋಂವರ್ಕ್ ಮಾಡುತ್ತಾ ಹಾಗೇ ಸುಸ್ತಾಗಿ ಮಲಗಿಬಿಡುತ್ತಾ ಇದ್ದಳು. ರಾತ್ರಿಯ ಊಟಕ್ಕೂ ಅವಳ ತಕರಾರು. ನಾನೇ ಅವಳನ್ನು ಎತ್ತಿ ತಂದು ಮಲಗಿಸಬೇಕು. ಇಂಥ ಸ್ಥಿತಿ. ಈ ನಡುವೆ ಸಹಜವಾಗಿಯೇ ಕ್ಲಾಸಿನಲ್ಲಿ ಮಾರ್ಕು ಕಡಿಮೆ ಆಗಿ ಹೆಂಡತಿಯ ಹಾರಾಟ ಹೆಚ್ಚಿತು.

ಈ ಹಂತದಲ್ಲಿ ನಾನು ಗಂಭೀರವಾಗಿ ಯೋಚಿಸಿ, ಕಾರ್ಯಪ್ರವೃತ್ತ ಆಗುವುದು ಅನಿವಾರ್ಯ ಆಯಿತು. ನಾಕಾರು ಕಡೆ ವಿಚಾರಿಸಿದೆ. ಆಗ ಅರಿವಿಗೆ

ಬಂದದ್ದು ಇಷ್ಟು. ಹೆಂಡತಿ ಸರಸಿಗೆ ತುಂಬಾ ದೊಡ್ಡ ಡ್ಯಾನ್ಸರ್ ಅಥವಾ ಸಿಂಗರ್ ಆಗಬೇಕೆಂದು ಇತ್ತು. ಸಂಪ್ರದಾಯದ ಅವರ ಮನೆಯಲ್ಲಿ ಅದಕ್ಕೆ ಅವಕಾಶ, ಹಣ ಎರಡೂ ಇರಲಿಲ್ಲ. ಈಗ ಮಗಳ ಮೂಲಕ ಅದನ್ನು ಸಾಧಿಸಿ ತೃಪ್ತಿಪಡುವ ಮನಸ್ಸು ಸರಸಿಯದು. ಮಗಳು ಬೆಳೆದು ಹೆಸರು ಪಡೆಯಲಿ ಎಂಬುದು ತಂದೆ ತಾಯಿಗಳ ಸಹಜ ಆಸೆ. ಆದರೆ ಮಗು ಅದಕ್ಕೆ ಬಲಿ ಆಗುವುದಾದರೆ!

ಆರರಿಂದ ಹತ್ತು ವರ್ಷದ ಮಗು ಹಲವು ಚಟುವಟಿಕೆಯಲ್ಲಿ ತೊಡಗುತ್ತದೆ. ಶಾಲೆಯ ಓದು ಅಲ್ಲದೇ, ಇತರ ನಾನಾ ಚಟುವಟಿಕೆಯಲ್ಲಿ ಅದು ತೊಡಗಲು ಅವಕಾಶ ಇರಬೇಕು. ಪಠ್ಯೇತರ ಚಟುವಟಿಕೆಯಲ್ಲಿ ಸಕ್ರಿಯವಾಗಿ ಮಗು ತೊಡಗುವುದು ಒಳ್ಳೆಯದು. ಇಲ್ಲವಾದಲ್ಲಿ ಅದು ಜನರ ಜೊತೆ ಬೆರೆಯಲಾರದು. ಒಂಟಿತನ ಕಾಡುತ್ತದೆ. ಹದಿ ಹರೆಯಕ್ಕೆ ಬಂದಾಗಲಂತೂ ಅದು ಕೀಳರಿಮೆಗೆ ಕಾರಣವಾಗುತ್ತದೆ. ಸಮಸ್ಯೆಗಳು ಎದುರಾದಾಗ ಅಳುಕು, ಅಂಜಿಕೆಗಳು ಕಾಡುತ್ತವೆ. ಅದೆಲ್ಲ ನಿಜ.

ಮಗು ತನ್ನ ಐದನೆ ವಯಸ್ಸಿನಿಂದ ತನ್ನ ಜೊತೆಯವರ ಜೊತೆ ಸೇರಿ ಆಡಬೇಕು. ಅವು ಹಾಗೆ ಎಷ್ಟು ಕುಣಿದು ಕುಪ್ಪಳಿಸಿದರೂ ದಣಿಯುವುದಿಲ್ಲ. ಹಾಗೇ ಅಂಥ ಮಗು ಖಾಸಗಿಯಾದ, ಯಾವುದಾದರೊಂದು ರಂಗದಲ್ಲಿ ಆಸಕ್ತಿ ತಾಳುವಂತೆ ಮಾಡುವುದು ಒಳ್ಳೆಯದು. ಅದು ಕ್ರೀಡೆ ಇರಬಹುದು. ಕಲೆ ಇರಬಹುದು ಅಥವಾ ಯಾವುದಾದರೊಂದು ಹವ್ಯಾಸ ಇರಬಹುದು. ಅಂಥ ಆಸಕ್ತಿಯ ರಂಗ ಮಗುವೇ ಆಯ್ಕೆ ಮಾಡಿಕೊಂಡಿದ್ದಾಗಿರಬೇಕು. ನಾವು ಹೇರಿದ್ದು ಆಗಬಾರದು.

ಇದೆಲ್ಲ ಹೆಂಡತಿಗೆ ವಿವರಿಸಿ ಹೇಳುವುದು ಕಷ್ಟ. ಆಕೆ ತನ್ನದೇ ವಿಚಾರಕ್ಕೆ ಅಂಟಿದವಳು. ಸಂದರ್ಭ ಸಿಕ್ಕಾಗ ವಿಷಯ ವಿವರಿಸಿ ಹೇಳಿದ ಮೇಲೆ 'ಎಷ್ಟಾದರೂ ಅವಳು ನಿಮ್ಮ ಮಗಳು ತಾನೇ! ನೀವೇ ಏನು ಬೇಕಾದರೂ ಮಾಡ್ಕೊಳ್ಳಿ, ನಾನು ಏನು ಮಾಡಿದರೂ ಈ ಮನೇಲಿ ತಪ್ಪೇ!' ಎಂದು ದುಸುಮುಸು ಮಾಡಿದಳು.

ಅದೇ ಸಮಯಕ್ಕೆ ಬೇಸಿಗೆ. ಮಗಳಿಗೂ ಶಾಲೆಗೆ ರಜೆ. ತುಂಬಾ ದಿನ ನಾವು ಎಲ್ಲಿಯೂ ಹೋಗಿರಲಿಲ್ಲ. ನಾಲ್ಕು ದಿನ ಊರಿಗೆ ಹೋಗಲು ನಿಶ್ಚಯಿಸಿದೆವು.

ನಮ್ಮ ಊರಿರುವುದು ನದಿ ದಂಡೆಯಲ್ಲಿ. ಅಲ್ಲಿ ಬೆಳಗ್ಗೆಯೇ ನಾವೆಲ್ಲ ನದೀ ಸ್ನಾನಕ್ಕೆ ಹೋಗುತ್ತಾ ಇದ್ದೆವು. ಗಂಟೆಗಟ್ಟಲೆ ಈಸು ಬಿದ್ದು, ಮೈಮರೆತು ನಲಿಯುತ್ತಾ ಇದ್ದೆವು. ಮಗಳಿಗೆ ಅದು ಖುಷಿ ನೀಡಿರಬೇಕು. ತಾನೂ ಈಸು ಕಲಿಯಲು ಹಟ ಮಾಡಿದಳು. ಹೆಂಡತಿಗೆ ಹೆದರಿಕೆ. ಅಲ್ಲದೇ ಗಂಡು ಬೀರಿಯ ಹಾಗೆ ಮಗಳು ನದಿಯಲ್ಲಿ ಈಸು ಬೀಳುವುದು ಅವಳಿಗೆ ಒಪ್ಪದ ಸಂಗತಿ. ಜೊತೆಗೆ, ಮಗು ನೀರಿಗೆ ಬಿದ್ದಾಗ ಅಪಾಯ ಆದರೆ ಎಂಬ ಆತಂಕ.

ನಾನೇ ಖುದ್ದು ನಿಂತು, ಅಷ್ಟೇನೂ ಆಳವಲ್ಲದ ನೀರಲ್ಲಿ ಮಗುವನ್ನು ಹಿಡಿದುಕೊಂಡು, ಇದ್ದಷ್ಟು ದಿನವೂ ಈಸು ಕಲಿಸಿದೆ. ಈಗವಳು ನೀರಿಗಿಳಿದರೆ ಮೀನಾಗುತ್ತಾಳೆ. ಬಡಾವಣೆಯ ಸ್ವಿಮಿಂಗ್‌ಪೂಲಿಗೆ ಖಾಯಂ ಭೇಟಿ. ತನ್ನ ಜೊತೆಯವರಿಗೆ ಈಸು ಕಲಿಸುವುದರಲ್ಲಿ ಮುಂದು. ಅಲ್ಲಿನ ಕೋಚ್ 'ನಿಮ್ಮ ಹುಡುಗಿ ನನ್ನ ಕೆಲಸ ಕಿತ್ತುಕೊಂಡು ಬಿಡ್ತಾಳೆ ಸರ್' ಎಂದು ತಮಾಷೆಯಾಗಿ ಹೇಳುತ್ತಾನೆ.

ಅವಳ ಆರೋಗ್ಯ, ಚಟುವಟಿಕೆ, ಉತ್ಸಾಹ ಎಲ್ಲ ಈಗ ಸುಧಾರಿಸಿದೆ. ಬಿಡುವಿನ ವೇಳೆಯಲ್ಲಿ ಅವಳು ತನಗೆ ತುಂಬಾ ಇಷ್ಟ ಎನಿಸುವ ಹೂದಾನಿಗಳನ್ನು ಸಿಂಗರಿಸುವ ಕೆಲಸದಲ್ಲಿ ತೊಡಗುತ್ತಾಳೆ. ಅದನ್ನೂ ಅವಳು ರೂಢಿಸಿಕೊಂಡಿದ್ದು ಊರಿಗೆ ಹೋದಾಗ, ಅಲ್ಲಿನ ಕಾಡು ಹೂ ಕಿತ್ತು ತಂದು ಜೋಡಿಸುವ ಆಟ, ಈಗ ಹವ್ಯಾಸವಾಗಿ ಬೆಳೆದಿದೆ. ಹೂವಿರಲಿ, ತರಕಾರಿಯನ್ನು ಕೂಡ ಬಳಸಿ ಅವಳು ಹೂದಾನಿಗಳನ್ನು ಜೋಡಿಸಿ ಇಡುವುದು ಅದ್ಭುತ ಕಲೆಯಾಗಿ ನನಗೆ ಕಾಣುತ್ತದೆ. ಮುಂದೆ ಅವಳೇ ಇಚ್ಛೆ ಪಟ್ಟು ಕಲಿಯುವುದಾದರೆ, ಅದೇ ವಿಷಯ ಕಲಿಸಲೂ ಅಡ್ಡಿ ಇಲ್ಲ. ಅದಕ್ಕೆ ನನ್ನ ಹೆಂಡತಿಯ ಒಪ್ಪಿಗೆಯೂ ಇದೆ.

ನಾವು ಹೇರಿದ ಶಾಲೆಯ ನಂತರದ ಚಟುವಟಿಕೆಯಿಂದ ಕಂಗೆಟ್ಟಿದ್ದ ಮಗು, ಈಗ ನಾವು ಕೆಲಸ ಮುಗಿಸಿ ಮನೆಗೆ ಹಿಂದಿರುಗುವ ಹೊತ್ತಿಗೆ ಸಂತೋಷ, ಉತ್ಸಾಹದಿಂದ ಪುಟಿಯುತ್ತಾ ನಮ್ಮನ್ನು ಸ್ವಾಗತಿಸುತ್ತಿದೆ. ಮನೆಯೊಳಗೆ ಕಾಲಿಡುತ್ತಿದ್ದ ಹಾಗೆ ಆಕೆ ಜೋಡಿಸಿಟ್ಟ ಹೂದಾನಿಗಳಲ್ಲಿ ಹೊಸ ಬಗೆಯ ವಿನ್ಯಾಸ ಅರಳಿಕೊಂಡು ನಿಂತಿರುತ್ತದೆ. ಇದಕ್ಕಿಂತ ಇನ್ನೇನು ಬೇಕು?

■ ಬಾಲಾಜಿ.

# ಇರುವುದೆಲ್ಲ ಬಿಟ್ಟು...

**ಪಕ್ಕದವರ ಹೊಲ ಯಾವತ್ತೂ ಹಸಿರಾಗಿ ಕಾಣುತ್ತದಂತೆ. ತಾನಾಗಿ ಕಟ್ಟಿಕೊಂಡ ಬೇಲಿಯಾಚೆ ಇಣುಕಿ ಕುದಿಯುವುದು ಮನುಷ್ಯ ಸ್ವಭಾವ. ಸಾಮಾನ್ಯ ಮನುಷ್ಯರು ಹೀಗೆ ಮಾಡಿದರೆ ಚಿಂತೆ ಇಲ್ಲ. ಲಾರಿಗಟ್ಟಲೆ ದುಡ್ಡು, ಸಮುದ್ರಗಟ್ಟಲೆ ಸುಖ ಎಂದು ಭಾವಿಸುವ 'ಉಳ್ಳವರು' ಕೂಡ ಇದೆಲ್ಲ ಬಿಟ್ಟು ಸಣ್ಣದೊಂದು ಕೈಗೂಡದ ಆಸೆಗಾಗಿ ತುಡಿಯುತ್ತಾರೆ. ನಟಿ ಆರತಿ ತನ್ನ ಸಂದರ್ಶನ ಒಂದರಲ್ಲಿ ''ನಾನು ಇವತ್ತು ಏನೆಲ್ಲ ಗಳಿಸಿರಬಹುದು. ಆದರೆ ಬೀದೀಲಿ ಆರಾಮಾಗಿ ಕಳ್ಳೆಕಾಯಿ ತಿನ್ನುತ್ತಾ ಹೋಗುವ ಸ್ವಾತಂತ್ರ್ಯ ಕಳೆದುಕೊಂಡಿದ್ದೇನೆ'' ಅಂದಿದ್ದರು. ಇಂಥ ವಿಚಿತ್ರಗಳ ಕುರಿತೇ ಇಲ್ಲಿದೆ ಅಪರೂಪದ ಮಾಹಿತಿ.**

ಅದ್ಯಾವ ಅನುಭವಾದ ಗಳಿಗೆಯಲ್ಲಿ ಗೋಪಾಲಕೃಷ್ಣ ಅಡಿಗರು 'ಇರುವುದೆಲ್ಲವ ಬಿಟ್ಟು ಇರದುದಕೆ ತುಡಿಯುವುದೇ ಜೀವನ' ಎಂದು ಬರೆದರೋ!

ಕೆಲವು ಕಲಾವಿದರು, ವ್ಯಾಪಾರಿಗಳ ಏಳು ಬೀಳು ನೋಡಿದಾಗೆಲ್ಲ ಅಡಿಗರ 'ಯಾವ ಮೋಹನ ಮುರಳಿ....?' ಕವನದ ಮೇಲಿನ ಸಾಲುಗಳು ನೆನಪಾಗಿ ಬಿಡುತ್ತವೆ.

ಬೇಕಿದ್ದಾಗ ಬಾರದೇ, ಇನ್ಯಾವಾಗಲೋ ಅಪಾರ ಹಣ ಬಂದಾಗ ಲತಾ ಮಂಗೇಶ್ಕರ್ ವಜ್ರದ ಕಾಲುಂಗರ ಮಾಡಿಸಿಕೊಂಡಿದ್ದರು. ಬೇಕಿದ್ದಾಗ ಬಾರದ ಈ ಹಣ, ನೋವು, ದಾರುಣ ಬಡತನದ ಯಾತನೆ ಎಲ್ಲ ಅನುಭವಿಸಿ ಇನ್ನು ಏನಾದರೇನು ಬಿಟ್ಟರೇನು ಎನಿಸಿದ್ದ ಕಾಲಕ್ಕೆ ಬಂದ ಕಾರಣ ಇದನ್ನು ಚಪ್ಪಲಿಯ ಜಾಗದಲ್ಲಿಟ್ಟು ತಾತ್ಸಾರ ತೋರಿದ್ದು ಸರಿಯಲ್ಲವೇ! ಎಂದು ಲತಾ ಆಗ ಕಾರಣ ನೀಡಿದ್ದರು.

ಒಂದು ಕಾಲಕ್ಕೆ ಲತಾಳ ತಂದೆ ದೀನಾನಾಥ ಮಂಗೇಶ್ಕರ್ ದೊಡ್ಡ ಬಾಳು ಬಾಳಿದವರು. ತಮ್ಮ ಕುಟುಂಬ ಇರಲಿ, ಬೇರೆ ಯಾರು ಬಂದು ಕೈ ಚಾಚಿದರೂ ಇಲ್ಲ ಎಂದವರಲ್ಲ. ನಿತ್ಯ ಅವರ ಮನೆಯಲ್ಲಿ ಐವತ್ತರಿಂದ ನೂರು ಜನ ಬಿಟ್ಟಿ ಊಟ ಮಾಡುತ್ತಾ ಇದ್ದರು. ಇದು ಸಾಧ್ಯವಾದದ್ದು ಅವರ ನಾಟಕದ ಕಂಪೆನಿಯಿಂದ. ಭರ್ಜರಿ ಹಾಡು, ನೃತ್ಯ, ಸೆಟ್‌ಗಳ ನಾಟಕಗಳಿಂದಾಗಿ ದೀನಾನಾಥರಿಗೆ ಹಣವಲ್ಲದೇ ಸಾಕಷ್ಟು ಕೀರ್ತಿಯೂ ಬಂದಿತ್ತು.

ಇದೆಲ್ಲ ಏನು ಮಹಾ? ಮಾಡಿದರೆ ಒಂದು ಸಿನಿಮಾ ಮಾಡಿ ದುಡ್ಡು ದೋಚಬೇಕು ಎಂಬ ಕಾಮನೆಯೋ? ಅಥವಾ ತಾನು ಏನು ಮಾಡಿದರೂ ಸರಿಯೇ ಎಂಬ ದರ್ಪವೋ! ಮಂಗೇಶ್ಕರ್ ಸಿನಿಮಾ ನಿರ್ಮಾಣಕ್ಕೆ ಕೈ ಹಾಕಿದರು. ಅದು ಭರ್ಜರಿಯಾಗೇ ಕೈ ಕೊಟ್ಟಿತು. ಸಿನಿಮಾ ನೆಲಕಚ್ಚಿತು. ದುಡ್ಡು ಬರುವುದು ಇರಲಿ, ಇದ್ದದ್ದೂ ಕೊಚ್ಚಿ ಹೋಗುವಂಥ ಪರಿಸ್ಥಿತಿ. ಅಂಥ ಸಂದರ್ಭದಲ್ಲೂ ಅವರು ಸಾಲ ಮಾಡಿ ಇನ್ನೊಂದು ಭರ್ಜರಿ ಸಿನಿಮಾ ಮಾಡಿ ನಷ್ಟ ಸರಿದೂಗಿಸಿಕೊಳ್ಳುವ ಸಾಹಸಕ್ಕೆ ಕೈ ಹಾಕಿದರು. ಎರಡು ಲಕ್ಷ ಕಳೆದುಕೊಂಡ ಪಟರೊಬ್ಬ ಅದನ್ನು ತೀರಿಸಲೆಂದೇ ನರಿ ಬುದ್ಧಿಯ ಬುಕ್ಕಿಯ ಮಾತು ಕೇಳಿ ಮತ್ತೆರಡು ಲಕ್ಷ ಸಾಲದ ಮಾಡಿ ಕುದುರೆ ಬಾಲಕ್ಕೆ ಕಟ್ಟಿದ ಹಾಗೆ ಇದು. ಹಿಂದಿನ ಸಾಲ ಮೊತ್ತಕ್ಕೆ, ಅಷ್ಟೇ ಮೊತ್ತದ ಇನ್ನೊಂದು ಸಾಲವೂ ಜಮೆಯಾಯಿತು ಅಷ್ಟೇ!


ಲತಾ ಮಂಗೇಶ್ಕರ್

ಮಂಗೇಶ್ಕರ್ ಕುಟುಂಬ ಎಲ್ಲ ಕಳೆದುಕೊಂಡಿತು. ಊಟದ ಮಾತು ಇರಲಿ, ತಲೆಯ ಮೇಲಿನ ಸೂರೂ ಸಾಲಗಾರರ ಪಾಲಾಗಿ ಬೀದಿಗೆ ಬೀಳಬೇಕಾಯಿತು. ಊಟಕ್ಕಾಗಿ ಕೈ ಚಾಚಬೇಕಾಯಿತು. ಮುಂದೊಂದು ದಿನ ಲತಾ, ಆಶಾ, ಉಷಾ ಅವರುಗಳು ಸಿನಿಮಾ ಒಂದರಲ್ಲಿ ಬೀದಿ ಭಿಕ್ಷುಕಿಯರ ಹಾಗೆ ಹಾಡಿಕೊಂಡು ಬೇಡುವ ದೃಶ್ಯ ಕಂಡ ಅವರ ತಾಯಿ ''ಜೀವನದಲ್ಲಂತೂ ಇದೇ, ಸಿನಿಮಾದಲ್ಲಿ ಇಂಥದ್ದೇ ಆಗಬೇಕೇ?'' ಎಂದು ಬಿಕ್ಕಿಬಿಕ್ಕಿ ಅತ್ತರಂತೆ.

ಲತಾ ಅವರ ಜೀವನದಲ್ಲಿ ಜರ್ಝರಿತಗೊಳ್ಳುವ ಎಷ್ಟೋ ಘಟನೆ ನಡೆದಿವೆ. ಆರಂಭದ ದಿನಗಳಲ್ಲಿ ಅವರೇ ಇಡೀ ಕುಟುಂಬದ ಊಟದ ಕೂಪನ್. ಗಂಟೆ, ದಿನಗಳ ಪರಿವೆ ಇಲ್ಲದೇ ಕುಟುಂಬದ ತುತ್ತಿನ ಚೀಲ ತುಂಬಲು ದುಡಿಯುತ್ತಿದ್ದ ಲತಾ, ಅದೊಂದು ದಿನ ಸಂಭಾವನೆಯಾಗಿ ಇಡೀ ನೂರು ರೂಪಾಯಿ ಸಿಕ್ಕಿದಾಗ, ಓಡಿ ಹೋಗಿ ಆಗಿನ ಕಾಲದಲ್ಲೇ ಅತ್ಯಂತ ದುಬಾರಿ ಎನಿಸಿದ್ದ ಫಿಲಿಪ್ಸ್ ಟ್ರಾನ್ಸಿಸ್ಟರ್ ಕೊಂಡಿದ್ದರು. ಮನೆಗೆ ಹೋಗಿ ಇದ್ದ ಹರಕು ಚಾಪೆ ಹಾಸಿಕೊಂಡು, ಆರಾಮಾಗಿ ಮಲಗಿಕೊಂಡು ನೆಚ್ಚಿನ ಗಾಯಕ ಕೆ.ಎಲ್ ಸೈಗಾಲರ ಹಾಡು ಕೇಳಬೇಕು. ಅದು ಅವರ ಭಾರೀ ಆಸೆ. ಹಾಗೆ ಮಲಗಿ ಟ್ರಾನ್ಸಿಸ್ಟರ್ ತಿರುಗಿಸಿದಾಗ ಬಂದ ಪ್ರಕಟಣೆ ಏನು ಗೊತ್ತೆ?


ಎ.ಆರ್. ರೆಹಮಾನ್

''ಈಗ ತಾನೇ ನಿಧನರಾಗಿರುವ ಮಹಾನ್ ಗಾಯಕ ಕೆ.ಎಲ್.ಸೈಗಾಲರಿಗೆ ಶ್ರದ್ಧಾಂಜಲಿಯಾಗಿ ಅವರದೇ ಕೆಲವು ಹಾಡುಗಳು ಬಿತ್ತರಗೊಳ್ಳಲಿವೆ....'' ಲತಾ ಆಗಲೇ ದುಡು ದುಡು ಅಂಗಡಿಗೆ ಹೋಗಿ ಟ್ರಾನ್ಸಿಸ್ಟರ್ ವಾಸಪ್ ಕೊಟ್ಟು ಬಿಟ್ಟರು. ಇಂಥ ಘಟನೆಗಳು ಅವರ ಬದುಕಲ್ಲಿ ಅವೆಷ್ಟೋ!

ದೀನಾನಾಥರು ನಾಟಕ ವೃತ್ತಿಯಲ್ಲೇ ಮುಂದುವರಿದಿದ್ದರೆ! ಇಂಥದೊಂದು ಯೋಚನೆ ಆಗಾಗ ನನಗೆ ಬರುತ್ತದೆ. ಚೆನ್ನಾಗಿಯೇ ಅವರು ಇರಬಹುದಿತ್ತು ಅನ್ನಿಸಿದ ಮರುಗಳಿಗೆ, ನಾಟಕ ವೃತ್ತಿಯಲ್ಲಿಯೇ ಅವರು ಹಾಳಾಗಬಹುದಿತ್ತು ಎಂದೂ ಅನ್ನಿಸುತ್ತದೆ. ಅವರು ನಾಟಕ ಮಾಡುವುದು ಬಿಟ್ಟು ಸಿನಿಮಾ ಹುಚ್ಚಿಗೆ ಕೈ ಹಾಕಿದ್ದು ನೋಡಿದಾಗ ಅಡಿಗರ 'ಇರುವುದೆಲ್ಲವ ಬಿಟ್ಟು...' ಕವನದ ಸಾಲು ನೆನಪಾಗುತ್ತದೆ.

ಇದನ್ನು ಕುರಿತು ಧ್ಯಾನಿಸುವಾಗ ನನಗೆ ನೆನಪಾಗುವುದು ಈಗ ಖ್ಯಾತಿಯ ಉತ್ತುಂಗದಲ್ಲಿರುವ, ಅಷ್ಟೆ ಪ್ರತಿಭಾವಂತರಾದ ಎ.ಆರ್.ರೆಹಮಾನ್ ಅವರ ತಂದೆ ಶೇಖರ್ ಜೀವನದ ಘಟನೆಗಳು.

ತಮಿಳುನಾಡಿನವರಾದ ಈ ಶೇಖರ್ ಕಷ್ಟಪಟ್ಟು ಆರ್ಕೆಸ್ಟ್ರಾ ತಂಡ ಕಟ್ಟಿದವರು. ಆಗಾಗ್ಗೆ ಸಿನಿಮಾಗಳಿಗೆ ಹಿನ್ನೆಲೆ ಸಂಗೀತ ಒದಗಿಸಿದವರು. ಅವರು ಹಣ ಗಳಿಸುತ್ತಾ ಇದ್ದುದು ಆಮದು ಮಾಡಿಕೊಂಡ ವಿದೇಶೀ ವಾದ್ಯಗಳನ್ನು ಹೆಸರಾಂತ ಸಂಗೀತ ನಿರ್ದೇಶಕರಿಗೆ ಬಾಡಿಗೆ ನೀಡುತ್ತಾ ಇದ್ದುದರಿಂದ. ಹಣ ಗಳಿಸುವುದು ತೀರಾ ಇಷ್ಟು ಸಲೀಸು ಅಂತ ಯಾವಾಗ ಶೇಖರ್‌ಗೆ ಅನ್ನಿಸಿತೋ, ಎಲ್ಲ ಕಳೆದುಕೊಂಡರು. ಅಂಥ ದುರ್ಭರ ಸ್ಥಿತಿಯಲ್ಲಿ ಅವರನ್ನು ಕೈ ಹಿಡಿದು ಮೇಲೆತ್ತಿದವರು ಮುಸ್ಲಿಂ ಬಾಂಧವರು. ಅದರಿಂದಾಗಿಯೇ ಇಡೀ ಕುಟುಂಬ ಮುಸ್ಲಿಂ ಧರ್ಮಕ್ಕೆ ಪರಿವರ್ತಿತವಾಯಿತು. ದಿಲೀಪನಾಗಿದ್ದ ಅವರ ಮಗ ಅಲ್ಲಾ ರಖಾ ರೆಹಮಾನ್ ಆಗಿಬಿಟ್ಟ. ರೆಹಮಾನ್‌ಗೆ ಮುಸ್ಲಿಂ ಧರ್ಮದ ಬಗ್ಗೆ ಅಪಾರ ಗೌರವ. ನಿತ್ಯವೂ ತಪ್ಪದೇ ದಿನದಲ್ಲಿ ಐದು ಬಾರಿ ನಮಾಜು ಮಾಡುತ್ತಾರೆ. ಅಪ್ಪಿ ತಪ್ಪಿಯೂ ಸಿನಿಮಾ ಮಾಡುವ ಹುಚ್ಚಿಲ್ಲ ಎಂದು ಖಡಾಖಂಡಿತವಾಗಿ ಹೇಳುತ್ತಾರೆ.

ಅಕಸ್ಮಾತ್ ಮಾಡಿದರೂ ತಪ್ಪೇನಿಲ್ಲ ಬಿಡಿ. ಸಾಲು ಸಾಲಾಗಿ ಐದು ಸಿನಿಮಾ ಸೋತರೂ ಹಾಸಿ, ಹೊದೆಯುವಷ್ಟು ಹಣವೇನೋ ಇದೆ. ಅವರಪ್ಪ ನಷ್ಟ ಭರಿಸಲು ಒದ್ದಾಡಿದ್ದು ನೋಡಿದ್ದ ರೆಹಮಾನ್, ಸಿನಿಮಾ ಸಂಗೀತದ ಗೋಜೇ ಬೇಡವೆಂದು ಜಾಹೀರಾತುಗಳಿಗೆ ಹಿನ್ನೆಲೆ ಸಂಗೀತ ಒದಗಿಸಿ ಹಣ ಸಂಪಾದಿಸಲು ಪ್ರಯತ್ನಪಟ್ಟರು. ಆಮೇಲೆ ಸಿನಿಮಾ ಸಂಗೀತ ರಂಗಕ್ಕೂ ಕಾಲಿರಿಸಿದ ರೆಹಮಾನ್ ಹಣ, ಹೆಸರು ಎರಡೂ ಗಳಿಸಿದರು. ಮನೆಯಲ್ಲಿಯೇ ಅತ್ಯಾಧುನಿಕ ರೆಕಾರ್ಡಿಂಗ್ ಸ್ಟುಡಿಯೋ ಮಾಡಿದರು. ರೆಕಾರ್ಡಿಂಗ್, ಮಿಕ್ಸಿಂಗ್ ಇತ್ಯಾದಿ ಸೌಲಭ್ಯ ಇರುವ ಈ ಸ್ಟುಡಿಯೋಗಾಗಿ ಅವರು ಸುರಿದಿದ್ದು ಒಂದೂವರೆ ಕೋಟಿ ರೂಪಾಯಿ. ಅದೇಕೊ ಸದ್ಯಕ್ಕಂತೂ ಎಲ್ಲ ಬಿಟ್ಟು ಇಲ್ಲದುದರೆಡೆಗೆ ಜೀವ ತುಡಿಯುತ್ತಿಲ್ಲ. ಸಿನಿಮಾ ಮಾಡುವ ಸಾಹಸಕ್ಕೆ ಕೈ ಹಾಕಿಲ್ಲ. ಹಾಗೇ ಲತಾ ಮಂಗೇಶ್ಕರ್‌ಗೂ ಅಷ್ಟೆಲ್ಲ ಹಣ ಬಂದರೂ ಸಿನಿಮಾ ಮಾಡಬೇಕೆಂಬ ಆಸೆ ಮೂಡಲೇ ಇಲ್ಲ. ಬಂದರೂ ಅಪ್ಪನ ನೆನಪಿಂದಲೇ ಕನಸು ಮುದುಡಿ ಹೋಗುತ್ತಾ ಇತ್ತೇನೋ!

ಇನ್ನೊಂದು ಇಂಥದ್ದೇ ಕತೆ ಸಾಧು ಕೋಕಿಲಾ ಅವರದು. ಕನ್ನಡ-ತಮಿಳು ಚಿತ್ರಗಳ ಕೆಟ್ಟ ಸಂಗೀತ ನಿರ್ದೇಶಕ ಈತ. ಆದರೂ ಅದೃಷ್ಟ ಚೆನ್ನಾಗಿತ್ತು. ಕರ್ಕಶ ಸಂಗೀತ ನೀಡಿ ದುಡ್ಡು ಬಾಚಿದರು. ಕರ್ನಾಟಕದಲ್ಲಿ ಮೊಟ್ಟ ಮೊದಲ ಡಿಜಿಟಲ್ ರೆಕಾರ್ಡಿಂಗ್ ಸ್ಟುಡಿಯೋ ಸ್ಥಾಪಿಸಿದವರೇ ಸಾಧುಕೋಕಿಲ. ಆದರೆ ಅದ್ಯಾವ ಮೋಹನ ಮುರಳಿ ಕರೆಯಿತೋ! ಸಿನಿಮಾ ಮಾಡುವುದಿರಲಿ, ಪ್ರಧಾನ ಪಾತ್ರದಲ್ಲಿ ಇಬ್ಬಿಬ್ಬರು ಕಳಪೆ ನಾಯಕಿಯರೊಡನೆಯೂ ನಟಿಸುವ ಆಸೆ ಉಕ್ಕಿತು. ತಮ್ಮ ಸಂಗೀತ ಅಷ್ಟೇ ಜನ ಕೇಳಿದರೆ ಸಾಲದು. ತಮ್ಮ ಮುಸುಡಿಯನ್ನೂ ರಜತ ಪರದೆಯಲ್ಲಿ, ಪೋಸ್ಟರುಗಳಲ್ಲಿ ಜನ ನೋಡಿ ಆನಂದಿಸಲಿ ಎಂಬ ಹಿರಿಯಾಸೆ ಅಂಕುರಿಸಿತು. ಸಿನಿಮಾ ಕೈಕೊಟ್ಟಿತು. ರಿಕವರಿ ಮಾಡಿಕೊಳ್ಳಲು ಇನ್ನೊಂದು ಸಿನಿಮಾ ಮಾಡಿದರು. ಅದೂ ಸೋತಿತು. ಸ್ಟುಡಿಯೋ ಮಾರಿದರು ಅದೇನು ದುರಾದೃಷ್ಟವೋ! ಮೊನ್ನೆ ಅಬ್ಬಾಯಿ ನಾಯ್ಡು ಸ್ಟುಡಿಯೋದಲ್ಲಿ 'ಟಿಕೆಟ್ ಟಿಕೆಟ್' ಸಿನಿಮಾ ಚಿತ್ರೀಕರಣದ ಸೆಟ್‌ನಲ್ಲಿ ಬಾಂಬ್ ಸ್ಫೋಟವಾಗಿ ಇವರ ಕಾರ್ ಧ್ವಂಸವಾಯಿತು. ಅವರ ಕಾರು ಅಲ್ಲಿದ್ದುದರಿಂದಲೇ ಇನ್ನೂ ಹದಿನಾರು ಜನ ಸಾವಿನಿಂದ ಬಚಾವಾದರು. ಬಾಂಬ್ ಸ್ಫೋಟದ ತೀವ್ರ ಪರಿಣಾಮ ಇವರ ಕಾರಿನ ಮೇಲೆ ಆಯಿತು. ಇದರಿಂದಾಗಿ ಹತ್ತಿರದಲ್ಲಿದ್ದ ಹದಿನಾರು ಜನ ಬಚಾವಾದರು. ಈಗ ಸಾಧುಕೋಕಿಲ ಜೀವನ ನಿರ್ವಹಣೆ ಮಾಡಬೇಕಾದರೆ ಮೊದಲಿನಂತೆ ಸಂಗೀತ ನಿರ್ದೇಶನಕ್ಕೆ ಹೊರಳಬೇಕು. ಆಫರ್‌ಗಳು ಬರುತ್ತವೋ? ಗ್ಯಾರಂಟಿ ಇಲ್ಲ.

ಇತ್ತೀಚೆಗೆ ಮತ್ತೊಂದು ಇಂಥದ್ದೇ ಸುದ್ದಿ ಕೇಳಿದಾಗ ಮತ್ತೆ ಅಡಿಗರ ಪದ್ಯದ ಸಾಲು ನೆನಪಾದವು. ಅದು ಸಂಗೀತ ನಿರ್ದೇಶಕ ಶಂಕರ್-ಗಣೇಶ್ ಕುರಿತಾದ ವರದಿ. ಶಂಕರ್-ಗಣೇಶ್ ಜೋಡಿಯಲ್ಲಿ ಶಂಕರ್ ಹಲವು ರೀತಿಯಲ್ಲಿ ಅದೃಷ್ಟವಂತ. ಇನ್ನು ಹಲವು ವಿಷಯದಲ್ಲಿ ಪ್ರತಿಭಾವಂತ ಕೂಡ. ಸರಾಗವಾಗಿ ಕೊಳಲು, ಗಿಟಾರ್, ಕೀಬೋರ್ಡ್ ನುಡಿಸಬಲ್ಲ ನಿಪುಣ. ಈತನ ಜೀವನ ಆರಂಭ ಆದದ್ದು ಕಾರ್ ಡ್ರೈವರ್ ಆಗಿ. ಪಾಶಮಲರ್, ಪಡಿಕಾರರ ಮೇರೈ ಮುಂತಾದ 'ಪ' ಅಕ್ಷರದಿಂದ ಆರಂಭವಾಗುವ ಯಶಸ್ವೀ ಸಿನಿಮಾಗಳ ನಿರ್ಮಾಪಕ ಚೆಟ್ಟಿಯಾರ್ ಒಬ್ಬರ ಮನೆಯಲ್ಲಿ ಕಾರ್ ಡ್ರೈವರ್ ಆಗಿ, ಜೀವನದಲ್ಲಿ ಸೊಂಪಾಗಿದ್ದ. ಸಂಗೀತ ವಾದ್ಯಗಳನ್ನು ನುಡಿಸುವ ಹಾಗೇ ಹೆಣ್ಣುಗಳನ್ನು ಪಟಾಯಿಸುವ ಕಲೆಯಲ್ಲೂ ಈತ ನಿಷ್ಣಾತ. ಕಣ್ಣ ನೋಟದಿಂದಲೇ ಎಂಥ ಹೆಣ್ಣನ್ನಾದರೂ ಸೆಳೆಯಬಲ್ಲ ವಿರಳ ಕಲೆ ಈತನಿಗೆ ಸಿದ್ಧಿಸಿತ್ತು. ಅದನ್ನು ತನಗೆ ಅನ್ನವಿಟ್ಟು ಸಾಕಿದ ಧಣಿಯ ಮಗಳ ಮೇಲೆ ಪ್ರಯೋಗಿಸಿದ. ಆಕೆ ತಂದೆಯ ಶ್ರೀಮಂತಿಕೆಗೆ ವಾರಸುದಾರಳಾದ ಏಕೈಕ ಪುತ್ರಿ. ಅಪ್ಪನ ಶ್ರೀಮಂತಿಕೆ, ತುಂಬಾ ಪ್ರೀತಿಸುವ ತಾಯಿಯನ್ನೂ ಬಿಟ್ಟು ಆಕೆ ಶಂಕರ್ ಬೆನ್ನು ಹತ್ತಿ ಓಡಿಹೋದಳು. ಆಕೆಯ ತಂದೆಯ ಪ್ರೀತಿ ದೊಡ್ಡದು. ಮನಸ್ಸಿಗೆ ಆದ ಯಾತನೆಯನ್ನೂ ಮರೆತು ಅಳಿಯ-ಮಗಳನ್ನು ಕರೆಸಿಕೊಂಡು ಇದ್ದ ಮನೆಯನ್ನೆಲ್ಲ ಬಿಟ್ಟು ಕೊಟ್ಟರು. ಆದರೂ ಒಳಗಿನ ಯಾತನೆ, ಅಪಮಾನಗಳ ಕೊರಗಿನಿಂದಲೇ ಆ ಚೆಟ್ಟಿಯಾರ್ ಕೆಲವೇ ದಿನಗಳಲ್ಲಿ ಸತ್ತೇ ಹೋದರು.

ಹಂಸಲೇಖಾ



ಶಂಕರ್‌ಗೆ ಬಯಸದೇ ಬಂದ ಭಾಗ್ಯವಿತ್ತು. ಅಷ್ಟೆಲ್ಲ ತ್ಯಾಗ ಮಾಡಿ ಜೊತೆಗೆ ಬಂದ ಹೆಂಡತಿ. ಮಾವನ ಅಪಾರ ಆಸ್ತಿ. ಮಾವನ ವಶೀಲಿಯಿಂದಲೇ ಈತ ಸಂಗೀತ ನಿರ್ದೇಶಕರೂ ಆದರು. ಇವರ ಜೊತೆಗೆ ಅತ್ಯಂತ ಪ್ರತಿಭಾವಂತ ಗಣೇಶ್ ಅವರನ್ನು ಕೂಡಿಸಿದ್ದು ಸ್ವತಃ ಮಾವನೇ. ಆದರೆ ಶಂಕರ್‌ಗೆ ತನ್ನ ವೃತ್ತಿ, ಗಳಿಕೆ ಎಲ್ಲವು

ಕ್ಕಿಂತ ತನ್ನ ಲೈಂಗಿಕ ಪ್ರತಿಭೆ ಪ್ರದರ್ಶಿಸುವುದರಲ್ಲೇ ಹೆಚ್ಚಿನ ಆಸಕ್ತಿ. ಎರಡು ಮಕ್ಕಳಾದರೂ ಈತನ ದಾಹ ಇಂಗಲೇ ಇಲ್ಲ. ಇದೆಲ್ಲ ಸಹಿಸಿಕೊಂಡಿದ್ದ ಹೆಂಡತಿ ತೀರಾ ಸಿಟ್ಟಿಗೆದ್ದಿದ್ದು, ಶಂಕರ್ ತನ್ನ ಅತ್ತೆಯನ್ನೇ ಬ್ಲ್ಯಾಕ್‌ಮೇಲ್ ಮಾಡಿ ಹಿಂಸಿಸಲು ಆರಂಭಿಸಿದಾಗ. ಇಂಥ ಮನುಷ್ಯನನ್ನು ಮುಗಿಸಿಬಿಡಬೇಕು. ಜೊತೆಗೇ ತಾನು ಸತ್ತರೂ ಚಿಂತೆ ಇಲ್ಲ ಎಂಬಂಥ ನಿರ್ಧಾರಕ್ಕೆ ಬಂದಳು. ಅಪಾರ ಬುದ್ಧಿ, ಹಣ ಖರ್ಚು ಮಾಡಿ ಟೇಪ್ ರೆಕಾರ್ಡರ್‌ನಲ್ಲಿ ಬಾಂಬ್ ಇರಿಸಿದಳು. ಅದನ್ನು ಗಂಡ ಶಂಕರ್ ಆನ್ ಮಾಡಿದರೆ ಆತ ಸಾಯುತ್ತಾನೆ. ಹಾಗೇ ಜೊತೆಗಿರುವ ತಾನೂ ಸಾಯುವುದು ನಿಶ್ಚಯ. ಆದರೂ ಪರವಾಗಿಲ್ಲ ಎಂದುಕೊಂಡಳು. ಇಂಥದ್ದೊಂದು ಕ್ಯಾಸೆಟ್ ಕೇಳಲು ಆಸೆ. ಅದನ್ನು ಹಾಕು ಎಂದು ದುಂಬಾಲುಬಿದ್ದಳು. ಈಗ ನಿದ್ದೆ ಮಾಡೋಣ, ಬೆಳಿಗ್ಗೆ ಕೇಳಿದರೆ ಆಯಿತು ಎಂದು ಶಂಕರ್ ಹೇಳಿದರೂ ಪಟ್ಟು ಬಿಡದೆ ಆತನಿಂದ ಟೇಪ್ ರೆಕಾರ್ಡ್‌ರ್ ಆನ್ ಮಾಡಿಸಿದಳು. ಶಂಕರ್ ಪತ್ನಿ ಸಾಯಲೂ ತಯಾರಿದ್ದಳು. ದುರಾದೃಷ್ಟವೆಂದರೆ ಬಾಂಬ್ ಸಿಡಿದು ಶಂಕರ್ ಕೈ ಮಾತ್ರ ಹೋಯಿತು. ಎರಡೂ ಕೈ ಕಳೆದುಕೊಂಡ ಶಂಕರ್ ಈಗ ಹೆಸರಾಂತ ಜೈಪುರದ ರಬ್ಬರ್ ಕೈಗಳನ್ನು ಜೋಡಿಸಿಕೊಂಡು ಕಾಲ ಹಾಕುತ್ತಿದ್ದಾನೆ. ಹೆಂಡತಿ ತಾಯಿಯ ಜೊತೆ. ಮಕ್ಕಳು ಬೋರ್ಡಿಂಗ್ ಶಾಲೆಯಲ್ಲಿ. ಎದೆ ಮೇಲೆ ಎದ್ದು ಕಾಣುವ ತುಳಸಿ, ರುದ್ರಾಕ್ಷಿ ಮಾಲೆಗಳನ್ನು ಹಾಕಿಕೊಂಡ ಶಂಕರ್ ಮಾವನ ಮನೆಯಲ್ಲಿ ಯಾವುದಾದರೂ 'ಆರ್ಕೆಸ್ಟ್ರಾ'ಗೆ ಆಹ್ವಾನ ಬರುತ್ತವೆಯೇ? ಎಂದು ಕಾಯುತ್ತಾ ಕುಳಿತಿರುತ್ತಾನೆ.



ಸಾಧು ಕೋಕಿಲ

ಇಂಥ ಮೋಹದ ಮಾಯೆ ಪ್ರತಿಭಾವಂತರನ್ನೂ ಬಿಟ್ಟಿಲ್ಲ. ನಮ್ಮ ಪ್ರತಿಭಾವಂತ ಸಂಗೀತ ನಿರ್ದೇಶಕ ಹಂಸಲೇಖಾ ಕೂಡ ಈ ಮಾತಿಗೆ ಹೊರತಲ್ಲ. ದುಂಬಾಲು ಬೀಳುತ್ತಿದ್ದ ನಿರ್ಮಾಪಕರಿಗೆ ಸಂಗೀತದ ಜೊತೆಯೇ ಚಿತ್ರಕಥೆ-ಸಂಭಾಷಣೆ -ಹಾಡು ಎಲ್ಲ ಬರೆದು ಪ್ಯಾಕೆಟ್‌ತೀಲ್‌ನಿಂದ ಒಂದೊಂದು ಚಿತ್ರಕ್ಕೆ ಒಂದರಿಂದ ಐದುಲಕ್ಷದಷ್ಟು ಸಂಪಾದಿಸುತ್ತಿದ್ದ ಚಂದದ ಕಾಲವಿತ್ತು. ಹಣ, ಕೀರ್ತಿ ಎಲ್ಲ ಸಲೀಸಾಗಿ ಬಂದು ಸುಸ್ತಾಗುವಷ್ಟು ಜೋರಾಗಿರಬೇಕು. ತಮ್ಮ ಮಗನನ್ನೇ ಹೀರೋ ಮಾಡುವ ಪ್ರಯತ್ನಕ್ಕೆ ಕೈ ಹಾಕಿದರು. ತಂದೆ, ತಾಯಿಯಂತೆ ಮಗನೂ ಸಂಗೀತದಲ್ಲಿ ಪ್ರತಿಭಾವಂತ. ಲಂಡನ್ನಿನ ಟ್ರಿನಿಟಿ ಕಾಲೇಜ್ ಆಫ್ ಮ್ಯೂಸಿಕ್ ನಡೆಸುವ ಪರೀಕ್ಷೆಯಲ್ಲಿ ಪಿಯಾನೋ ವಾದನ ವಿಭಾಗದಲ್ಲಿ ಪ್ರಥಮ ರ್‍ಯಾಂಕ್ ಪಡೆದಾತ. ಆದರೆ ತಮ್ಮ ಮುದ್ದಿನ ಮಗ ಕೇವಲ ಕೀಲು ಬಡಿಯುವುದು ಹಂಸಲೇಖಾಗೆ ಇಷ್ಟವಿರಲಿಲ್ಲ. ರವಿಚಂದ್ರನ್‌ನಷ್ಟೆ ಮುದ್ದಾದ ಮಗನನ್ನು ಹೀರೋ ಮಾಡಲು 'ಸುಗ್ಗಿ' ಸಿನಿಮಾ ತೆಗೆಯಲು ಹೋದರು. ಮಿಕ್ಕ ಸಿನಿಮಾಗಳಿಗೆ ಸಂಗೀತ ನೀಡುವದೂ ನಿಲ್ಲಿಸಿದರು. ನಿರ್ದೇಶಕರು ಕೈಕೊಟ್ಟಾಗ ತಾವೇ ನಿರ್ದೇಶನ ಮಾಡಿದರು. ಇದರಿಂದಾಗಿ ಒಂದೂವರೆ ಕೋಟಿ ಕೈಬಿಟ್ಟದೆ. ಆಧರೆ ಹಂಸಲೇಖಾ ಬೇಗ ಚೇತರಿಸಿಕೊಂಡರು. ಯಾವ ಆಹ್ವಾನವನ್ನೂ ಬಿಡದೆ ತಿಂಗಳಿಗೆ ಒಂದು ಎರಡರಂತೆ ಸಂಗೀತ ನಿರ್ದೇಶನ ಮಾಡಿಕೊಟ್ಟು ರಿಕವರಿ ಆಗುತ್ತಿದ್ದಾರಂತೆ. ಇವರ ಹಾಗೇ ಬೇಗ ಅರಿತುಕೊಂಡು ರಿಕವರಿ ಆದವರಲ್ಲಿ ಕುನ್ನಕುಡಿ ವೈದ್ಯನಾಥನ್ ಕೂಡ ಸೇರುತ್ತಾರೆ.

■ ರಾಜು

## ನೀವೂ ಬರೆಯಬಹುದು

ಜೀವನ ಸಮೃದ್ಧಗೊಳಿಸುವ, ಮುಂದಿನ ಹಾದಿಗೆ ಬೆಳಕಾಗುವ ಜೀವನಾನುಭವಗಳಿದ್ದರೆ ಬರೆದು ಕಳುಹಿಸಿ. ನಮ್ಮ ಓದುಗರೊಡನೆ ನಿಮ್ಮ ಜೀವನೋತ್ಸಾಹಕ್ಕೆ ಕಾರಣವಾದ ಸಂಗತಿಗಳನ್ನು ಹಂಚಿಕೊಳ್ಳಿ.

ನೀವು ಬರೆಯಲೆಂದೇ

- ಹೀಗೇ ಈ ಬದುಕು
- ಸ್ಥಳ ಪರಿಚಯ
- ಜೀವನಾನುಭವ

ಮುಂತಾದ ಅಂಕಣಗಳಿವೆ.

ಜೊತೆಗೆ ಸಣ್ಣ ಸಣ್ಣ ಪ್ರಸಂಗ, ನೀವು ಓದಿದ ಕುತೂಹಲಕಾರಿ ಸಂಗತಿಗಳನ್ನು ಬರೆದು ಕಳಿಸಿ. ಬರಹ ಸ್ಪಷ್ಟ ಹಾಗೂ ಕ್ಲುಪ್ತವಾಗಿರಲಿ.

ನಿಮ್ಮ ಲೇಖನ, ಚಿಂತನೆಗಳನ್ನು ಕಳುಹಿಸಬೇಕಾದ ವಿಳಾಸ:

ಸಂಪಾದಕರು, 'ಬಿಸಿಲ ಬದುಕು' ಮಾಸಪತ್ರಿಕೆ, 552,
15ನೇ ಮೇನ್, 3ನೇ ಸ್ಟೇಜ್, 4ನೇ ಬ್ಲಾಕ್, ವಾಟರ್ ಟ್ಯಾಂಕ್
ರೋಡ್, ಬಸವೇಶ್ವರನಗರ, ಬೆಂಗಳೂರು - 560 079


# FORM IV

Statement about ownership and other particulars about newspaper "**BISILA BADUKU**" as required to be published under Section 19-D(b) of the Press and registration of Books Act, read with Rule 8 of the registration of Newspapers (Central) Rules, 1956.

1. **Place of Publication :** Bangalore
2. **Periodicity of Publication :** Monthly
3. **Printer :** Chandrakanta Vaddu, Citizen of India, 552, 15th Main, 3rd Stage, 4th Block, Water Tank Road, Basaveshwaranagar, Bangalore-560 079.
4. **Publisher :** Chandrakanta Vaddu, Citizen of India, 552, 15th Main, 3rd Stage, 4th Block, Water Tank Road, Basaveshwaranagar, Bangalore-560 079.
5. **Editor :** Chandrakanta Vaddu, Citizen of India, 552, 15th Main, 3rd Stage, 4th Block, Water Tank Road, Basaveshwaranagar, Bangalore-560 079.
6. **Printing :** Ankura Prakashana, 552, 15th Main, 3rd Stage, 4th Block, Water Tank Road, Basaveshwaranagar, Bangalore-560 079.

I Chandrakanta Vaddu, hereby declare that the particulars given above are true to the best of my knowledge and belief.

Date : 18.02.2000

Sd/-
**(Chandrakanta Vaddu)**
Publisher

# ಹೀಗೆ ಈ ಬದುಕು....



## ನೀರಿಳಿಸಿದ ಈರುಳ್ಳಿ

ನಾವು ಪೈಮರಿಶಾಲೆಯ ಮಕ್ಕಳು. ಅಣ್ಣಾವರಿಗೆ (ನಮ್ಮ ತಂದೆ) ದೂರದ ಬಳ್ಳಾರಿಗೆ ವರ್ಗವಾಯಿತು. ಅದು ಶಿಕ್ಷೆಯ ರೂಪದ ವರ್ಗ. ಇಲಾಖೆಯಲ್ಲಿ ಸಂಬಳ ಬಟವಾಡೆಗೆಂದು ನಗದು ರೂಪದಲ್ಲಿದ್ದ ಹಣ ಕಳುವಾದ ಆಪಾದನೆ ನಮ್ಮ ಅಣ್ಣಾವರ ಮೇಲೆ ಬಿತ್ತು. ಒಂದು ಸುಳ್ಳು - 'ನಾನೇ ಖುದ್ದಾಗಿ ಬೀಗ ಹಾಕಿದ್ದೆ' ಎಂದು ಹೇಳಿದ್ದರೆ ಅಣ್ಣಾವರ ಮೇಲೆ ಆ ಆಪಾದನೆ ಬರುತ್ತಿರಲಿಲ್ಲವಂತೆ. ತಿಜೋರಿಗೆ ಸ್ವತಃ ಬೀಗ ಹಾಕದಿದ್ದುದು ಒಂದು ಅಪರಾಧವಾಗಿ, ಅದನ್ನು ಇದ್ದಂತೆ ನುಡಿದಿದ್ದುದರಿಂದ, ಅವರು ಒಂದಿಷ್ಟು ಸಾವಿರ ಹಣವನ್ನು ಇಲಾಖೆಗೆ ಕಟ್ಟುವಂತಾಗಿತ್ತು.

ನಮಗಿನ್ನೂ ಬೇಸಗೆ ರಜೆಯಿತ್ತು. ನಮ್ಮ ತಂದೆಯ ಬಗ್ಗೆ ಇಲಾಖೆಯ ಜನ ಏನೇನು ಮಾತನಾಡಿಕೊಳ್ಳುತ್ತಿದ್ದರೋ ಗೊತ್ತಿಲ್ಲ. ಲಂಚಹೊಡೆದವರು ಬಚಾವಾಗುತ್ತಿದ್ದರು. ಸತ್ಯ ಹೇಳುವ ಪ್ರಾಮಾಣಿಕರಿಗೆ ಶಿಕ್ಷೆಯಾಗುತ್ತಿತ್ತು. ನಮಗೂ ಅದರ ಅರಿವಿಲ್ಲ. ಕಛೇರಿಯ ಆವರಣದಲ್ಲೇ ಇದ್ದ ವಸತಿಗಳಲ್ಲಿ ನಮ್ಮ ವಾಸ. ಬಾಲ್ಯಕಾಲ ಕಟ್ಟಿಕೊಡುವ ಅನುಭವ ಪ್ರಪಂಚ ವಿಚಿತ್ರವಾಗಿತ್ತು.

ಒಂದು ದಿನ ಒಬ್ಬ ಈರುಳ್ಳಿ ಬೆಳೆಗಾರ ಎರಡು ಮೂಟೆ ಈರುಳ್ಳಿಯ ಜೊತೆ ಬಂದ. ಮಕ್ಕಳಾದ ನಮಗೆ ಕೌತುಕ, ಆಸೆ ಕೂಡ. ಅದೆಷ್ಟೊಂದು ಈರುಳ್ಳಿ ಒಟ್ಟಿಗೆ ನೋಡುವುದೇ ಒಂದು ಖುಷಿ. ಅಷ್ಟನ್ನೂ ಒಳಮನೆಯಲ್ಲಿ ರಾಶಿ ಹಾಕಿಸುವ ಚಪಲ. ಅಷ್ಟರಲ್ಲಿ ಅಣ್ಣಾವರು ಬಂದರು. 'ಇದ್ಯಾಕಪ್ಪ' ಎಂದರು.

ಈರುಳ್ಳಿ ಬೆಳೆಗಾರ-'ಅದೇ ಸರ್, ಕಳೆದ ತಿಂಗಳು ತಾವು ಪಂಪ್ ಹಾಕಿಸಿಕೊಟ್ಟರಲ್ಲ.'

ಕಳೆದ ತಿಂಗಳು ಎಕ್ಸಿಕ್ಯೂಟಿವ್ ಎಂಜಿನಿಯರ್ ರಜೆಯ ಮೇಲಿದ್ದರು. ಅಣ್ಣಾವರೇ ಅನೇಕ ತಿಂಗಳುಗಳಿಂದ ನೆನೆಗುದಿಗೆ ಬಿದ್ದಿದ್ದ ಎಲೆಕ್ಟ್ರಿಕ್ ಕನೆಕ್ಷನ್‌ಗಳನ್ನು ಆದ್ಯತೆಯ ಮೇರೆಗೆ ಕಲ್ಪಿಸಿಕೊಟ್ಟಿದ್ದರು. ಲಂಚ ಕೊಡದ್ದರಿಂದ ಅವನಿಗೆ ಪಂಪ್ ಕನೆಕ್ಷನ್ ಬೇಗ ಸಿಕ್ಕಿರಲಿಲ್ಲ. ಈಗ ಸಿಕ್ಕ ಖುಷಿಗೆ ತಾನು ಬೆಳೆದ ಈರುಳ್ಳಿಯನ್ನು ಚೀಲಕ್ಕೆ ತುಂಬಿಕೊಂಡು ತಂದಿದ್ದ. ಲಂಚವೆಂತಲ್ಲ; ಖುಷಿಗೆ ಗೌರವ ಸಲ್ಲಿಸುವುದಕ್ಕೆ. ಅಣ್ಣಾವರಿಗೆ ಸಿಟ್ಟು ಏರಿತು. ಅಷ್ಟು ರೌದ್ರಾವತಾರವನ್ನು ನಾವು ಕಂಡಿರಲೇ ಇಲ್ಲ. ಬೆಪ್ಪು ಬೆರಗಾಗಿ ನಿಂತೆವು. ಈರುಳ್ಳಿ ರಾಶಿ ಹಾಕಿಸುವ ಇಷ್ಟ ಸತ್ತು ಹೋಯಿತು. ಈರುಳ್ಳಿ ಬೆಳೆಗಾರ ಕಣ್ಣೀರಿಳಿಸುತ್ತ ಎಷ್ಟೆಷ್ಟೇ ಸಮಜಾಯಿಷಿ ಕೊಟ್ಟರೂ ಅಣ್ಣಾವರು ಒಪ್ಪಲಿಲ್ಲ. ಅವನು ಬೆಳೆದು ತಂದ ಬೆಳೆಯನ್ನು ಅವನೇ ವಾಪಸು ಹೊತ್ತುಕೊಂಡು ಹೋದ. ಕಛೇರಿಯ ಸಿಬ್ಬಂದಿ ಆವರಣದ ವಸತಿಯ ಜನ ನೋಡುತ್ತಿದ್ದರು. ನಮಗೂ ನಾಚಿಕೆ. ಈಗ ನೆನೆದರೆ ಹೆಮ್ಮೆಯಾಗುತ್ತಿದೆ.

**- ಆರ್ ನಿರ್ಮಲ, ಮೈಸೂರು.**

## ಧಾರವಾಡದ ಹುಡುಗಿ

ಉನ್ನತ ವ್ಯಾಸಂಗಕ್ಕೆಂದು ಧಾರವಾಡಕ್ಕೆ ಬಂದು ಬಾಡಿಗೆ ಮನೆಯೊಂದರ ಮಾಳಿಗೆಯ ಮೇಲೆ ಮಲಗಿದ್ದಾಗ ಯಾಕೋ ನಿದ್ರೆ ಸರಿಯಾಗಿ ಬರಲಿಲ್ಲ.

ಬೆಳಗ್ಗೆ ಬೇಗ ಎದ್ದು ಬ್ರಷ್‌ಗೆ ಪೇಸ್ಟ್ ಹಾಕಿ ಮನೆ ಮುಂದೆ ನಿಂತು ಹಲ್ಲುಜ್ಜುವಾಗ ಮನೆಯ ಮಾಲಿಕರ ಮಗಳು ವಿಜಯಲಕ್ಷ್ಮಿ ನನ್ನನ್ನೊಮ್ಮೆ ಕಂಡು ಮುಗುಳ್ನಕ್ಕಳು. ಅಷ್ಟೊಂದು ಸುಂದರವಾದ ಜಿಂಕೆಯನ್ನು ಅದೇ ಮೊದಲು ಕಂಡದ್ದು. ಮೊದಲ ದಿನದ ಮುಗುಳ್ನಗೆಯಿಂದ ಮುಂದುವರಿದ ನಮ್ಮ ಪ್ರೇಮದ ವಿಚಾರ ನೆರೆಹೊರೆಯಲ್ಲಿದ್ದವರೆಲ್ಲರ ಬಾಯಲ್ಲೂ ಕೇಳಿ ಬರತೊಡಗಿತು.

ಆಕೆ ಬಿ.ಎ. ಓದುತ್ತಿದ್ದರೆ ನಾನು ಎಂ.ಎ. ಓದುತ್ತಿದ್ದೆ. ಅಭ್ಯಾಸದ ಕಡೆಗೆ ಸರಿಯಾಗಿ ಗಮನವನ್ನೇ ಹರಿಸದ ನಾನು ಅವಳಿಂದ ದೂರವಾಗಬೇಕೆಂದು ನಿರ್ಧರಿಸಿದಾಗ, ಆ ಹುಡುಗಿಯಿಂದ ಬಂದ ಕಾಗದವೊಂದು ನನ್ನ ಕಣ್ಣು ತೆರೆಸಿತು.

ಬಹಳ ದಿನಗಳ ಬಳಿಕ ಕಾಗದ ಬರೆಯುತ್ತಿದ್ದೇನೆಂದು ಬೇಸರ ಪಡಬೇಡಿ. ದಿನದ ಪ್ರತಿಕ್ಷಣ ನಿಮ್ಮ ನೆನಪಲ್ಲೆ ಕಾಲ ಕಳೆಯುತ್ತಿದ್ದೇನೆ. ಜೀವನ ಕೇವಲ ಸುಖವೂ ಅಲ್ಲ. ದುಃಖವೂ ಅಲ್ಲ ಎಂಬುದನ್ನು ನಿಮ್ಮಿಂದ ಕಲಿತಿದ್ದೇನೆ. ಜೀವನದ ಅಂತ್ಯದಲ್ಲಿ ಉಳಿಯುವುದು ಹಿರಿತನವಲ್ಲ, ಉಳಿಯುವುದೊಂದೇ ಅದೇ ನಿಷ್ಕಲ್ಮಶ ಪ್ರೇಮ. ಪ್ರಿಯಾ, ನಿಮ್ಮಿಂದ ದೂರವಾಗಿ ಬದುಕುವ ಸ್ಥಿತಿಯಲ್ಲಿ ನಾನಿಲ್ಲ. ನನ್ನನ್ನು ಕೈ ಹಿಡಿದು ಕಾಪಾಡುವ ಭಾರ ನಿಮ್ಮದು, ಎಂದು ಆಕೆ ಬರೆದ ಕಾಗದ ನಮ್ಮಿಬ್ಬರನ್ನು ಒಂದುಗೂಡಿಸಿತು. ನಾವೀಗ ಎರಡು ಮುದ್ದಾದ ಮಕ್ಕಳ ತಂದೆ-ತಾಯಿಗಳು.

**- ಹನುಮಂತರಾವ್ ಭಜಂತ್ರಿ**, ತುಳಸಿಗಿರಿ.

## ಪ್ರವಾಸಾನುಭವ

ಕಾಲೇಜು ದಿನಗಳಲ್ಲಿ ಪ್ರವಾಸಕ್ಕೆಂದು ಹೋದಾಗ ನಡೆದ ಘಟನೆ. ಇತಿಹಾಸ ಪ್ರಸಿದ್ಧ 'ಹಂಪಿ' ಕ್ಷೇತ್ರಕ್ಕೆ ಭೇಟಿ ನೀಡಿದ್ದೆವು. ಕಾಲೇಜು ಹುಡುಗರಾದ್ದರಿಂದ ಕೀಟಲೆ ಸ್ವಭಾವ ಜಾಸ್ತಿ. ಜೊತೆಗೆ ಹುಡುಗಿಯರೂ ಇದ್ದುದರಿಂದ ಕೀಟಲೆ ಇನ್ನಷ್ಟು ಜಾಸ್ತಿ ಇತ್ತು ಎನ್ನಬಹುದು. ಹಂಪಿಯ ಅವಶೇಷಗಳನ್ನು ನೋಡುತ್ತಾ, ಮರುಕ ಪಟ್ಟವರು ಕೆಲವರಾದರೆ, ಇದ್ದ ಕೆಲವು ಸ್ಮಾರಕಗಳನ್ನು ಮತ್ತಷ್ಟು ವಿರೂಪಗೊಳಿಸುವವರು ಹಲವರು. ಹಂಪಿಯ ಐತಿಹಾಸಿಕ ಬಂಡೆಗಲ್ಲುಗಳ ಮೇಲೆ ಪ್ರವಾಸಕ್ಕೆ ಬಂದ ಹಲವಾರು ಜನ ಯುವ ಪ್ರೇಮಿಗಳು ತಮ್ಮ ತಮ್ಮ ಹೆಸರನ್ನು ಬರೆದು (ಕೆತ್ತಿ) ತಮ್ಮ ಪ್ರೇಮ ಅಮರವೆಂದು ಸಾಬೀತುಗೊಳಿಸಲು ಪ್ರಯತ್ನಿಸಿದ್ದರು. ಅಂಥ ಪ್ರೇಮಿಗಳ ಹೆಸರನ್ನು ಎಲ್ಲರೂ ಓದುತ್ತ ಸಾಗುತ್ತಿರುವಾಗ ಒಂದು ಕಡೆ 'ಮಾಲಿನಿ-ವಿಜಯ್' ಎಂಬ ಹೆಸರುಗಳು ಕಣ್ಣಿಗೆ ಬಿದ್ದದ್ದೇ ಕೆಲಕ್ಷಣ ಎಲ್ಲರೂ ಸ್ತಬ್ಧರಾದರು. ಕಾರಣವೇನೆಂದರೆ ನಮ್ಮ ಗುಂಪಿನಲ್ಲಿ ಮಾಲಿನಿ ಮತ್ತು ವಿಜಯ್ ಎಂಬ ಹೆಸರಿನ ಇಬ್ಬರೂ ಇದ್ದರು. ಎಲ್ಲರೂ ಜೋರಾಗಿ 'ಮಾಲಿನಿ-ವಿಜಯ್' ಎಂದು ಮೇಲಿಂದ ಮೇಲೆ ಕೂಗಲು ಶುರುಮಾಡಿದರು. ನಾವೆಲ್ಲ ಕೂಗುತ್ತಿದ್ದಂತೆ ಮಾಲಿನಿ-ವಿಜಯ್ ಏನು ಮಾಡಲು ತೋಚದೇ, ಮುಜುಗರದಿಂದಾಗಿ ತಲೆ ತಗ್ಗಿಸಿದರು. ನಮ್ಮ ಜೊತೆಗೆ ಬಂದಿದ್ದ ನಮ್ಮ ಉಪನ್ಯಾಸಕರೊಬ್ಬರು ಕೋಪದಿಂದ ಗದರಿಸಿದಾಗ ಎಲ್ಲರೂ ಕೂಗುವುದನ್ನು ನಿಲ್ಲಿಸಿದರು. ಆದರೆ ಮುಜುಗರದಿಂದ ತಲೆ ತಗ್ಗಿಸಿದ್ದ ಮಾಲಿನಿ ಮತ್ತು ವಿಜಯ್ ಎಲ್ಲರ ಮುಂದೆ ತಲೆ ಎತ್ತಲು ಸಂಕೋಚವಾಗಿ ಗುಂಪಿಂದ ದೂರವೇ ಉಳಿದರು. ನಾವೆಲ್ಲ ಎಷ್ಟು ಕರೆದರೂ ಬಾರದೇ ಇದ್ದಾಗ, ನಾನೇ ಹೋಗಿ ಅವರಿಬ್ಬರನ್ನು ಸಮಾಧಾನಗೊಳಿಸಿ 'ಇದೆಲ್ಲ ಬರೀ ತಮಾಷೆ ಕೋಪ ಮಾಡ್ಕೋಬೇಡಿ' ಎಂದಾಗ ಅವರಿಬ್ಬರ ಮುಖದಲ್ಲಿ ತಿಳಿನಗೆ ಮೂಡಿತ್ತು.




ಈಗ ಅವರಿಬ್ಬರೂ ಬೇರೆ ಬೇರೆ ಮದುವೆಯಾಗಿದ್ದಾರೆ. ಈಗಲೂ 'ಹಂಪಿ'ಯ ಘಟನೆಯನ್ನು ನೆನೆಪಿಸಿಕೊಂಡಾಗ ಒಂದು ರೀತಿಯ ರೋಮಾಂಚನವಾಗುತ್ತದೆ ಎಂದು ಆಗಾಗ ಭೇಟಿಯಾದಾಗ ಹೇಳುತ್ತಿರುತ್ತಾರೆ. ಈ ಬದುಕು ಎಷ್ಟು ವಿಚಿತ್ರ!

- ಎಚ್ಚಾರ್ ವಸ್ತ್ರದ್, ಕುಕನೂರು.

# ವಿಚಿತ್ರ ಜಗತ್ತು

**ಹಾವು ಸಾಕಿದ ಹುಡುಗಿ :** ವಿಶ್ವ ಸುಂದರಿ ಸುಷ್ಮಿತಾ ಸೇನ್ ಈಗ ಮತ್ತೊಂದು ಕಾರಣಕ್ಕೆ ಸುದ್ದಿಯಲ್ಲಿದ್ದಾಳೆ. ಯಾರ್‍ಯಾರು ಏನೇನೋ ಪ್ರಾಣಿಗಳನ್ನು ಸಾಕುತ್ತಿರುವಾಗ, ಈಕೆ ಮುದ್ದಿನ ಹೆಬ್ಬಾವು ಸಾಕಿಕೊಂಡಿದ್ದಾಳೆ. ಪ್ರೀತಿಯಿಂದ ಅದನ್ನು 'ಅನಕೊಂಡ' ಎಂದು ಕರೆಯುತ್ತಾಳೆ. ಇನ್ನೂ ಪ್ರೀತಿ ತುಂಬಿದಾಗ 'ಆನಾ' ಎಂದು ಮುದ್ದಿಸುತ್ತಾಳೆ. ಈ ಹಾವಿಗೆ ಕೋಳಿಮರಿ ನುಂಗುವುದು ಬಹಳ ಇಷ್ಟವಂತೆ. ಸಿನಿಮಾ ಶೂಟಿಂಗ್‌ಗೆ ಎಂದು ಆಕೆ ಹೊರ ಹೋದಾಗ ಮುದ್ದಿನ ಹಾವು ತೂಗಾಡಿಕೊಳ್ಳಲೆಂದೇ ಒಬ್ಬನನ್ನು ನೇಮಿಸಿದ್ದಾಳೆ.

**ಬೊಕ್ಕತಲೆ ಮತ್ತು ಸೆಕ್ಸಿ ಗುಣ :** ಬೊಕ್ಕ ತಲೆಯವರು ತೀರಾ ಸೆಕ್ಸಿ ಎಂಬ ನಂಬಿಕೆ ಇತ್ತು. ಬ್ಯಾಂಕಾಕಿನ ಸರ್ವೇ ಒಂದು ಇದನ್ನು ಸುಳ್ಳು ಮಾಡಿದೆ. 540 ಜನ ಮಹಿಳೆಯರನ್ನು ಅಧ್ಯಯನಕ್ಕೆ ಗುರಿ ಮಾಡಲಾಗಿತ್ತು. ಅರ್ಧಕ್ಕಿಂತ ಹೆಚ್ಚು ಜನ ಬೊಕ್ಕ ತಲೆಯವರಿಗಿಂತ ತಮಗೆ ಸಮೃದ್ಧ ಕೇಶಿಗಳೇ ಇಷ್ಟ ಎಂದು ಉಲಿದರಂತೆ. ಕೂದಲ ಹಾಗೇ ಈ ಬೊಕ್ಕ ತಲೆಯವರು ಲಲನೆಯರಿಗೂ ಬೇಡವಾದರಲ್ಲ ಎಂಬುದೇ ವಿಷಾದಕರ.

**ಗಟ್ಟಿಗುಂಡಿಗೆಯವರು :** ಈಚೆಗೆ ನಟ, ನಿರ್ಮಾಪಕ ರಾಕೇಶ್ ರೋಷನ್ ಗುಂಡೇಟಿಂದ ಗಾಯಗೊಂಡು ಆಸ್ಪತ್ರೆ ಸೇರಿದ. ಆಸ್ಪತ್ರೆಯ ರೋಗಿಗಳಿಗೆ ಇದೂ ಖುಷಿಗೆ ಕಾರಣವಾಗಬೇಕೆ? ಪಾಪ! ತಪ್ಪು ತಿಳಿಯಬೇಡಿ. ರೋಷನ್ ನೋಡಲು ಬೇರೆ ತಾರೆಯರು ಬರುತ್ತಾರೆ. ಅವರನ್ನು ನೋಡುವ ಸುಯೋಗ ತಮಗೆ ಎಂದು ಅವರು ಹಿಗ್ಗಿದ್ದರು.

ತಾರೆಯರ ದಂಡು ಬರುವುದು ತಿಳಿಯುತ್ತಿದ್ದಂತೆ ಈಗಲೋ, ಆಗಲೋ ಎನ್ನುವಂತೆ ಪರದಾಡುತ್ತಿದ್ದ ರೋಗಿಗಳೂ ಹಾಸಿಗೆ ಬಿಟ್ಟು, ತಮ್ಮ ಡ್ರಿಪ್ ಟ್ಯೂಬ್, ಬ್ಯಾಂಡೇಜು, ಪಟ್ಟಿಗಳ ಸಮೇತ ರೋಷನ್ ಸೇರಿದ್ದ ವಾರ್ಡಿನ ಬಳಿ ಜಮಾಯಿಸಿದ್ದರು. ದಿಲೀಪ್ ಕುಮಾರ್, ಶಾರುಖ್, ಅಮೀರ್ ಮುಂತಾದವರು ಬಂದಾಗಲಂತೂ ಶಕ್ತಿಯೇ ಇಲ್ಲವೆಂದು ಭಾವಿಸಿದ್ದ ರೋಗಿಗಳು ಎಬ್ಬಿಸಿದ ಗದ್ದಲ ಆಶ್ಚರ್ಯಕರ ವಾಗಿತ್ತು. ಆದರೆ ಪೊಲೀಸರು ಮಾತ್ರ ರೋಗಿಗಳ ಮೇಲೆ ಕರುಣೆ ತೋರಿ ಲಾಠಿ ಬೀಸದೇ ಉಪಕರಿಸಿದರಂತೆ.

**ಹಸ್ತಾಕ್ಷರದ ಬೆಲೆ :** ಕೆಲವು ಪ್ರಖ್ಯಾತರ ಹಸ್ತಾಕ್ಷರಕ್ಕೆ ಭಾರೀ ಬೆಲೆ. ದುಡ್ಡಿಲ್ಲದೇ ಚೆಕ್ ನೀಡಿದ ಮಹಾನುಭಾವರು, ಚೆಕ್ ಮೇಲೆ ಹಸ್ತಾಕ್ಷರ ಹಾಕಿದ ತಪ್ಪಿಗೆ ಈಗ ಭಾರೀ ಬೆಲೆ ತೆರಬೇಕಾದ ಕಾಲ ಬಂದಿದೆ. ಹಾಗೇ ಡಾಕ್ಟರೊಬ್ಬ ಈಗ 'ಹಸ್ತಾಕ್ಷರ' ಫಜೀತಿಗೆ ಸಿಕ್ಕಿಬಿದ್ದಿದ್ದಾನೆ. ತರುಣಿಯೊಬ್ಬಳಿಗೆ ಸಿಸೇರಿಯನ್ ಶಸ್ತ್ರಚಿಕಿತ್ಸೆ ನಡೆಸಿದ ಈತ ಸುಂದರವಾಗಿ ಹೊಲಿಗೆ ಹಾಕಿ ಮುಕ್ತಾಯಗೊಳಿಸಿದ. ಅಷ್ಟೇ ಅಲ್ಲ, ಆಕೆಯ ಹೊಟ್ಟೆಯ ಮೇಲೆ ತನ್ನ ಹಸ್ತಾಕ್ಷರ ಕೂಡ



ಬ್ಯಾಂಗ್‌ಕಾಕ್‌ನ ಕಲಾವಿದನೊಬ್ಬ ಪ್ರತಿಭಟನೆ ಸೂಚಿಸಲು ತನ್ನನ್ನೇ ಬಂಧಿಸಿಕೊಂಡ ಚಿತ್ರ





ಇನ್ನು ಹಸಿವಾದರೆ ಚಿಂತಿಸಬೇಕಿಲ್ಲ. ತೊಟ್ಟ ಉಡುಪನ್ನೇ ತಿನ್ನಬಹುದು. ಅಂಥ ಚಿಪ್ಸ್‌ನಿಂದ ಮಾಡಿದ ಉಡುಪು ತೊಟ್ಟ ಬೆಡಗಿ.

ಮೂಡುವಂತೆ ಹೊಲಿಗೆ ಹಾಕಿದ. ತನ್ನ ಸೌಂದರ್ಯಕ್ಕೆ ಕುಂದು ಬಂದಿದೆ ಎಂದು ಆಕೆ ನ್ಯಾಯಾಲಯಕ್ಕೆ ಮೊರೆ ಹೋದಳು. ಹಸ್ತಾಕ್ಷರ ಹೊಟ್ಟೆಯ ಮೇಲೆ ಮೂಡಿಸಿದ ವೈದ್ಯ ಈಗ ಆಕೆಗೆ 17.5 ಲಕ್ಷ ಡಾಲರ್ ಪರಿಹಾರ ಕೊಡಬೇಕಾಗಿದೆ.

**ಮಚ್ಚೆಯ ಬಾಲಕಿ :** ಮಚ್ಚೆಗಳು ಹೆಣ್ಣಿನ ಸೌಂದರ್ಯ ಹೆಚ್ಚಿಸುತ್ತವಂತೆ. ಅದರಲ್ಲೂ ತುಂಬಿದ ಗಲ್ಲದ ಮುದ್ದು ಹುಡುಗಿಯ ಕೆನ್ನೆ ಮೇಲೊಂದು ಮಚ್ಚೆ ಇದ್ದರೆ ಅದು ದೃಷ್ಟಿ ಬೊಟ್ಟು. ಅದಿಲ್ಲದೇ ಇದ್ದರೂ ಮನೆಯವರೇ ಅಂಥ ದೃಷ್ಟಿಬೊಟ್ಟು ಇಡುತ್ತಾರೆ. ಸ್ಪೇನಿನಲ್ಲೊಬ್ಬ ಹದಿನಾಲ್ಕು ವರ್ಷದ ಹುಡುಗಿಯ ಮೈಯಿಡೀ ಮಚ್ಚೆ. ಅಷ್ಟೇ ಅಲ್ಲ ಅದರ ಮೇಲೆ ಕೂದಲು ಬೆಳೆದು ಅಸಹ್ಯವಾಗಿ ಕಾಣಿಸತೊಡಗಿದಳು. ಇದನ್ನು ನಿವಾರಿಸಿ ಪ್ಲಾಸ್ಟಿಕ್ ಸರ್ಜರಿ ಮಾಡಲು ಹಸುವಿನ ಹಾಗೂ ಶಾರ್ಕ್ ಮೀನಿಂದ ತೆಗೆದ ಚರ್ಮ ಕಸಿ ಮಾಡಿ ಕುತ್ತಿಗೆಯಿಂದ ಕಾಲವರೆಗೂ ವಿಸ್ತರಿಸಿದ್ದ ಮಚ್ಚೆಯನ್ನು ನಿವಾರಿಸಿದ್ದಾರೆ.

**ಅಪಹರಣವೇ ವರದಾನ :** ಈಚೆಗೆ ಅಫಘಾನ್ ವಿಮಾನ ಒಂದು ಅಪಹರಣಗೊಂಡು ಬ್ರಿಟನ್‌ನಲ್ಲಿ ಬಂದಿಳಿಯಿತು. ಮೊನ್ನೆ ತಾನೆ ಅಲ್ಲಿಯ ಕಾಂದಹಾರ್‌ನಲ್ಲಿ ಭಾರತೀಯ ವಿಮಾನ ಅಪಹರಣಕ್ಕೀಡಾಗಿ ವಾರಪೂರ್ತಿ ಜನ ಆತಂಕದಲ್ಲಿ ಕಳೆದಿದ್ದು ಇನ್ನೂ ಹಸಿರಾಗೇ ಇದೆ. ಅಫಘಾನ್ ವಿಮಾನ ಅಪಹರಣ ಆದಾಗ ಆತಂಕಕ್ಕಿಂತ ಹೆಚ್ಚು ಗದ್ದಲವೇ ಇದ್ದಿತು. ಈಗ ಅಪಹರಣದ ನಾಟಕ ಮುಗಿದಿದೆ. ವಿಚಿತ್ರವೆಂದರೆ 142 ಜನ ವಿಮಾನ ಪ್ರಯಾಣಿಕರಲ್ಲಿ 37 ಜನ ಮಾತ್ರ ಸ್ವದೇಶಕ್ಕೆ ಹಿಂದಿರುಗಲು ಮುಂದಾದರು. ಉಳಿದವರೆಲ್ಲ ತಮಗೆ ಬ್ರಿಟನ್‌ನಲ್ಲಿಯೇ ಆಶ್ರಯಬೇಕೆಂದು ಮನವಿ ಸಲ್ಲಿಸಿದ್ದಾರೆ.

ತಾಲಿಬಾನ್‌ಗಳ ತರಲೆಯಿಂದ ಬೇಸತ್ತ ಈ ಜನಕ್ಕೆ ಬ್ರಿಟನ್ ಸ್ವರ್ಗದ ಹಾಗೆ ಕಂಡಿರಬೇಕು. ವಿಮಾನ ಅಪಹರಣ ಈಗ ಅವರಿಗೆ ವರದಾನವಾಗಿ ಒದಗಿ ಬಂದಿರಬೇಕು.

**ಸೌಂದರ್ಯದ ಅಳತೆಗೋಲು :** ಇತ್ತೀಚೆಗೆ ಜನಪ್ರಿಯ ವೆಬ್‌ಸೈಟ್ ಒಂದು ಆನ್‌ಲೈನ್ ಸರ್ವೆ ನಡೆಸಿತು. ನಮ್ಮಲ್ಲಿನ ಸೆಕ್ಸಿ ಸುಂದರಿಯರು ಯಾರೆಂದು ಪ್ರಶ್ನೆ ಕೇಳಲಾಗಿತ್ತು. ಸಹಜವಾಗಿಯೇ ಐಶ್ವರ್ಯ ರೈ, ಸುಷ್ಮಿತಾ ಸೇನ್ ಹಾಗೂ ಮಾಧುರಿ ದೀಕ್ಷಿತ್ ಅಗ್ರಸ್ಥಾನದಲ್ಲಿ ಇದ್ದರು. ಇನ್ನು ಕೆಲವರು ಉದಾರವಾಗಿ ಸೋನಿಯಾ ಗಾಂಧಿ ಹಾಗೂ ಪ್ರಿಯಾಂಕ ಕೂಡ ಇಂಥ ಸುಂದರಿಯರ ಸಾಲಿಗೆ ಸೇರುತ್ತಾರೆಂದೂ ಅಭಿಪ್ರಾಯ ಪಟ್ಟರು. ಅದು ಅವರವರ ಅಭಿಪ್ರಾಯ ಬಿಡಿ.

ಆದರೆ, ಈ ಜನಮತ ಸಂಗ್ರಹದ ವಿವರ ತಿಳಿಯುತ್ತಿದ್ದಂತೆ ಸಿಟ್ಟಿಗೆದ್ದ ಕಾಂಗ್ರೆಸ್ಸಿಗರು ಗಲಾಟೆ ಮಾಡಿ, ಸುಂದರಿಯರ ಪಟ್ಟಿಯಿಂದ ಸೋನಿಯಾ ಹಾಗೂ ಪ್ರಿಯಾಂಕಾರ ಹೆಸರು ತೆಗೆದು ಹಾಕುವಂತೆ ನೋಡಿಕೊಂಡರು. ■

# ಗಂಗೆಗೆ ಬಿದ್ದ ಬೆಂಕಿ



**ಫ್ಯಾಸಿಸ್ಟ್ ಶಕ್ತಿಗಳೇ ಹಾಗೆ!**

**ತಮ್ಮ ಹುಳುಕನ್ನು ಯಾರೂ ಎತ್ತಿ ತೋರಿಸಬಾರದು. ತಮ್ಮ ವಿರುದ್ಧ ಯಾರೂ ಉಸಿರೆತ್ತಬಾರದು. ಅದರಲ್ಲೂ ಕಲಾವಿದರು, ಸಾಹಿತಿಗಳು ಸುಲಭದ ಗುರಿ. ಅದಕ್ಕಾಗಿ ಹುಸೇನರ ಪೇಂಟಿಂಗ್ ಸುಡುತ್ತಾರೆ. 'ಫೈರ್' ಚಿತ್ರ ಪ್ರದರ್ಶಿಸುತ್ತಿದ್ದ ಥೇಟರಿನ ಪರದೆಗೆ ಬೆಂಕಿ ಇಡುತ್ತಾರೆ. ಚರ್ಚಿನ ನನ್‌ಗಳನ್ನು ಅಪಹರಿಸಿ ಅತ್ಯಾಚಾರ ಮಾಡುತ್ತಾರೆ. ಮಿಷನರಿಗಳನ್ನು ಬೆಂಕಿ ಹಚ್ಚಿ ಸುಟ್ಟು ಬಿಡುತ್ತಾರೆ.**

**ಇದೆಲ್ಲ ನಡೆಸುವುದು ಕೆಲವೇ ಜನ. ಹಿಡಿಯಷ್ಟು ಮಂದಿ. ಅವರ ಬೆನ್ನಿಗೆ ಸರ್ಕಾರ, ಸಂಘಟನೆ ಎಲ್ಲ ಇರುತ್ತವೆ. ಇದು ತಪ್ಪು ಎಂದು ಇಡೀ ಜನ ಸಮೂಹಕ್ಕೆ ಗೊತ್ತು. ಆದರೆ ಅವರ್‍ಯಾರೂ ಅದನ್ನು ಹೇಳಲು ಹೋಗುವುದಿಲ್ಲ. ತೆಪ್ಪಗೆ ಇದ್ದು ಬಿಡುತ್ತಾರೆ. ರಾಕ್ಷಸ ಶಕ್ತಿಗಳು ವಿಜೃಂಭಿಸುತ್ತವೆ.**

'ವಾಟರ್' ವಿವಾದ ಸಣ್ಣದು. ಅದರ ಹಿಂದಿನ ಶಕ್ತಿ, ಸಂಚುಗಳ ಆಯಾಮ ದೊಡ್ಡದು. ಇದನ್ನು ಜನ ಅರ್ಥ ಮಾಡಿಕೊಳ್ಳದೇ ಇದ್ದರೆ ನಿಧಾನ ಇಂಥ ಪೈಶಾಚಿಕ ಶಕ್ತಿಗಳು ಎಲ್ಲೆಡೆ ವ್ಯಾಪಿಸುತ್ತವೆ.

ವಾರಣಾಸಿಯಲ್ಲಿ ಅಂಗಡಿಗಳಿಂದ ತುಂಬಿದ ಪ್ರದೇಶ ಭೇಲ್‌ಪುರ. 'ವಾಟರ್' ಚಿತ್ರೀಕರಣ ಪ್ರತಿಭಟಿಸಿ ವಾರಣಾಸಿ ಬಂದ್‌ಗೆ ಕರೆ ನೀಡಿದಾಗ ಇಲ್ಲಿನ ಎಲ್ಲ ಅಂಗಡಿಗಳೂ ಮುಚ್ಚಿದ್ದವು. 'ಯಾಕೆ? ದೀಪಾ ಮೆಹ್ತಾ ತಪ್ಪು ಮಾಡುತ್ತಿದ್ದಾರೆಯೇ?' ಬಂದ್ ಮಾಡಿದ್ದ ವ್ಯಾಪಾರಿ ಒಬ್ಬನನ್ನು ಕೇಳಿದರೆ 'ಆಕೆ ಚಿತ್ರ ಮಾಡುವುದರಲ್ಲಿ ತಪ್ಪೇನೂ ಇಲ್ಲ' ಅನ್ನುತ್ತಾನೆ. 'ಹಾಗಿದ್ದರೆ ಅಂಗಡಿ ಏಕೆ ಮುಚ್ಚಿದೆ?' ಅಂದರೆ ಆತ ಹೇಳುತ್ತಾನೆ,

'ಅಧಿಕಾರದಲ್ಲಿರುವ ಪಕ್ಷದವರು ಬಂದ್‌ಗೆ ಕರೆ ನೀಡಿದಾಗ ಬಾಗಿಲು ಮುಚ್ಚೋದೇ ಸರಿ. ಇಲ್ಲವಾದರೆ ಅಂಗಡಿ, ಅಂಗಡಿಯ ಸಾಮಾನು ಒಂದೂ ಉಳಿಯುವುದಿಲ್ಲ. ಸುಮ್ಮನೆ ಅಧಿಕಾರದಲ್ಲಿರುವ ಮುಖಂಡರ ವಿರೋಧ ಯಾಕೆ ಕಟ್ಟಿಕೊಳ್ಳಬೇಕು!'

ವಾರಣಾಸಿಯಲ್ಲಿ ಅತ್ಯಂತ ಹಳೆಯವಾದ ಬೆನಾರಸ್ ಹಿಂದೂ ಯೂನಿವರ್ಸಿಟಿ ಇದೆ. ಅಲ್ಲಿನ ಲೆಕ್ಚರರ್, ಪ್ರೊಫೆಸರ್‌ಗಳು ದೀಪಾ ಮೆಹ್ತಾ ಬಳಿ ಹೋಗಿ, ತಾವೆಲ್ಲ ಆಕೆಯ ಬೆಂಬಲಕ್ಕೆ ಇರುವುದಾಗಿ ನುಡಿದರು. ಅಷ್ಟು ಬಿಟ್ಟು ಅವರೇನೂ ಮಾಡಲು ಸಾಧ್ಯವಾಗಲಿಲ್ಲ. ಕೆಲವೇ ಕೆಲವು ಗೂಂಡಾಗಳು ಚಿತ್ರೀಕರಣ ನಡೆಯುತ್ತಿದ್ದ ಜಾಗಕ್ಕೆ ನುಗ್ಗಿ ಸೆಟ್‌ಗೆ ಬೆಂಕಿ ಇಟ್ಟಾಗ ಪೊಲೀಸರ ಹಾಗೇ ದೀಪಾ ಮೆಹ್ತಾ ಬೆಂಬಲಿಸಿದವರೆಲ್ಲರೂ ಮೂಕಪ್ರೇಕ್ಷಕರು. ಈಗ 'ವಾಟರ್' ತಂಡ ವಾರಣಾಸಿಯಿಂದ ಕಾಲ್ತೆಗೆದಿದೆ. ಮೂರು ಬೇರೆ ರಾಜ್ಯಗಳಲ್ಲಿ ಚಿತ್ರೀಕರಣ ನಡೆಸುವಂತೆ ಆಹ್ವಾನ ಬಂದಿದೆ.

ಮಧ್ಯಪ್ರದೇಶದ ನರ್ಮದಾ ದಂಡೆಯಲ್ಲಿ, ಪಶ್ಚಿಮ ಬಂಗಾಳದ ಹೂಗ್ಲೀ ತೀರದಲ್ಲಿ ಚಿತ್ರೀಕರಣ ನಡೆಸಲು ಆಯಾ ರಾಜ್ಯದ ಮುಖ್ಯಮಂತ್ರಿಗಳು ಆಹ್ವಾನಿಸಿದ್ದಾರೆ. ಬಿಹಾರದಲ್ಲಿ ಚಿತ್ರೀಸುವುದಾದರೆ ಎಲ್ಲ ಸಹಕಾರ ನೀಡುವುದಾಗಿ ಆರ್. ಜೆ.ಡಿ. ಅಧ್ಯಕ್ಷ ಲಾಲೂಪ್ರಸಾದ್ ಯಾದವ್ ಹೇಳಿದ್ದಾರೆ. ಮೂರೂ ಕಡೆ ಬಿಜೆಪಿಯೇತರ ಸರ್ಕಾರಗಳಿವೆ. ಮಧ್ಯಪ್ರದೇಶದಲ್ಲಿ ಕಾಂಗ್ರೆಸ್, ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ್ ಮತ್ತು ಬಿಹಾರದಲ್ಲಿ ಆರ್.ಜೆ.ಡಿ ಸರ್ಕಾರಗಳಿವೆ. ಬಿಜೆಪಿ ಮತ್ತು ಸಂಘ ಪರಿವಾರದ ಮೇಲೆ ಮುಯ್ಯಿ ತೀರಿಸಿಕೊಳ್ಳುವ ರಾಜಕೀಯ ಇದರ ಬೆನ್ನಿಗಿದೆ. 'ದೀಪಾ ಮೆಹ್ತಾ ಭಾರತದಲ್ಲೇ ಚಿತ್ರೀಕರಣ



ನಿರ್ಮಾಪಕ ಡೇವಿಡ್ ಹ್ಯಾಮಿಲ್ಟನ್

ನಿರ್ದೇಶಕಿ ದೀಪಾ ಮೆಹ್ತಾ ↓



ನಡೆಸಲಿ ನಾವು ಕಲ್ಲು ಹೊಡೆಯುತ್ತೇವೆ' ಎಂದು ಭೂಪಾಲದ ಎಂ.ಪಿ. ಮಾಜಿ ಕೇಂದ್ರ ಸಚಿವೆ ಉಮಾ ಭಾರತಿ ಆಗಲೇ ಪ್ರತಿಕ್ರಿಯಿಸಿದ್ದಾರೆ.

'ಈ ಚಿತ್ರದ ಚಿತ್ರೀಕರಣ ನಡೆಯುವುದೇ ಆದಲ್ಲಿ ನನ್ನ ಹೆಣದ ಮೇಲೇ ನಡೆಯಬೇಕು' ಎಂದಿದ್ದಾರೆ ವಿಶ್ವ ಹಿಂದೂ ಪರಿಷತ್ತಿನ ಸಿಂಘಾಲ್. ಯಾಕೆ ಇಂಥ ವಿವಾದ?

'ವಾಟರ್' ಚಿತ್ರಕ್ಕೆ ಆಧಾರ ಒಂದು ಕಾದಂಬರಿ. 1930ರಲ್ಲಿ ವಾರಾಣಸಿಯ ವಿಧವೆಯರ ಬದುಕಿನ ಚಿತ್ರ ಅದು. ಎಂಟರಿಂದ ಎಂಬತ್ತು ವರ್ಷದ ವಿಧವೆಯರು ಎಲ್ಲ, ತುತ್ತು ಅನ್ನಕ್ಕೆ, ಪುಣ್ಯದ ಸಾವಿಗೆ ಹಾತೊರೆಯುತ್ತಾ ಬದುಕುವ ಜೀವಿಗಳು. ಮನುಷ್ಯರು ಒಂದೆಡೆ ಸೇರಿ ಬದುಕಲಾರಂಭಿಸಿದಾಗ ನಡೆಯುವ ಅನಾಚಾರ ಇಲ್ಲಿಯೂ ನಡೆಯುತ್ತದೆ. ಧರ್ಮದ ಹೆಸರಲ್ಲಿ ಮಹಿಳೆಯನ್ನು ಪ್ರಾಣಿಗಿಂತ ಕೀಳಾಗಿ ನಡೆಸಿಕೊಳ್ಳುವ, ಅದಕ್ಕೆ ಸಹಜವಾಗಿಯೇ ತಲೆ ಎತ್ತುವ ಪ್ರತಿಭಟನೆ ಇಲ್ಲಿದೆ. ಇದು ಚಿತ್ರಿತವಾದರೆ ಜನಸಾಮಾನ್ಯರಿಗೆ ಮಾತ್ರ ಅಲ್ಲ ವಿದೇಶಗಳಲ್ಲೂ ಹುಳುಕು ಕಾಣುತ್ತದೆ. ಹಿಂದೂ ಧರ್ಮ ಶ್ರೇಷ್ಠ ಎಂದು ಸಾಧಿಸಲು ಹೊರಟಿರುವ ಶಕ್ತಿಗಳಿಗೆ ಇದು ಇಷ್ಟವಿಲ್ಲ. ಅದಕ್ಕಿಂತ ಹೆಚ್ಚಾಗಿ ಇದೇ ನೆಪ ಮಾಡಿಕೊಂಡು ಧರ್ಮವನ್ನು ಕುರುಡಾಗಿ ನಂಬುವ ಮಧ್ಯಮ ವರ್ಗದವರ ಸಿಂಪಥಿ ಗಿಟ್ಟಿಸಿಕೊಳ್ಳುವ ಯತ್ನವೂ ಇಲ್ಲಿದೆ. ಇದಕ್ಕೂ ಹೆಚ್ಚಾಗಿ ಕೇಂದ್ರದಲ್ಲಾಗಲೀ, ಉತ್ತರ ಪ್ರದೇಶದಲ್ಲಾಗಲೀ ಸರಿಯಾಗಿ ಸರ್ಕಾರ ನಡೆಸಲು ಆಗದೇ ಒದ್ದಾಡುತ್ತಿರುವ ಸಂಘದ ಶಕ್ತಿಗಳಿಗೆ ಜನರ ಗಮನ ಅತ್ತ ಹೊರಳದಂತೆ ಮಾಡುವುದೇ ಇಲ್ಲಿನ ಮುಖ್ಯ ಉದ್ದೇಶ.



'ಕಾಶಿಯ ವಿಧವೆಯರನ್ನು ಸೂಳೆಯರಂತೆ ಬಿಂಬಿಸಿಲ್ಲ'

**ಕೂಸು ಹುಟ್ಟುವ ಮುನ್ನವೇ ಗದ್ದಲ :** ಇಲ್ಲಿ ಹಲವು ಸಿನಿಮಾಗಳು ವಿವಾದಕ್ಕೆ ಸಿಕ್ಕಿವೆ. ದೀಪಾ ಮೆಹ್ತಾ ನಿರ್ದೇಶನದ ಮೊದಲ ಚಿತ್ರ 'ಫೈರ್' ಸಾಕಷ್ಟು ಗದ್ದಲ ಎಬ್ಬಿಸಿತ್ತು. ಇಲ್ಲಿ ಬರುವ ಇಬ್ಬರು ಮಹಿಳೆಯರು ಸಲಿಂಗ ಕಾಮಿಗಳಾಗಿ ಚಿತ್ರಿತರಾಗಿದ್ದೇ ಇದಕ್ಕೆ ಕಾರಣ. ಥಿಯೇಟರ್‌ಗಳಲ್ಲಿ ಬಿಡುಗಡೆ ಆದ ನಂತರ ಮರು ಸೆನ್ಸಾರ್‌ಗೂ ಒಳಗಾದ ಚಿತ್ರ ಇದು. ಹಾಗೇ ಅವರ ಎರಡನೇ ಚಿತ್ರ 'ಅರ್ಥ್' ಕೂಡ ವಿವಾದಕ್ಕೆ ಕಾರಣವಾಗಿತ್ತು. ಆದರೆ ಮೂರನೇ ಚಿತ್ರ ಚಿತ್ರೀಕರಣ ಆರಂಭಕ್ಕೆ ಮುನ್ನವೇ ಭಾರೀ ವಿವಾದದ ಬಿರುಗಾಳಿಗೆ ಸಿಕ್ಕಿದೆ.

ನೆಹರೂ ಪ್ರಧಾನಿ ಆಗಿದ್ದಾಗ 'ನೈನ್ ಅವರ್ಸ್ ಟು ರಾಮ' ಚಿತ್ರ ಇಂಥ ವಿವಾದಕ್ಕೆ ಸಿಕ್ಕಿತ್ತು. ಅದರ ಚಿತ್ರೀಕರಣಕ್ಕೆ ಅನುಮತಿ ಸಿಗಲೇ ಇಲ್ಲ. ಇಲ್ಲಿ ಇನ್ನೊಂದು ಅಂಶವಿದೆ. ವಿದೇಶೀಯರು ಭಾರತದಲ್ಲಿ ಸಿನಿಮಾ ಮಾಡುವಾಗ, ಅದರ 'ಸ್ಕ್ರಿಪ್ಟ್' ಒಪ್ಪಿಸಿ ಸರ್ಕಾರದ ಅನುಮತಿ ಪಡೆಯಬೇಕು. 'ವಾಟರ್' ನಿರ್ಮಾಪಕ ಕೆನಡಾದ ಡೇವಿಡ್ ಹ್ಯಾಮಿಲ್ಟನ್ ಅವರು ಕೇಂದ್ರ ಸರ್ಕಾರದ ಅನುಮತಿ ಪಡೆದೇ ಬಂದಿದ್ದಾರೆ. ಆದರೂ ಈ ಗಲಾಟೆ.

ಉತ್ತರ ಪ್ರದೇಶ ಸರ್ಕಾರದ ಮೇಲೆ ಹಿಡಿತ ಇರುವ ಕೆಲವರು ಚಿತ್ರದ ವಿತರಣೆ ಹಕ್ಕು ಕೇಳಲು ಬಂದಿದ್ದರು. ಅವರಿಗೆ ಕೊಡಲು ಸಾಧ್ಯವಿರಲಿಲ್ಲ. 'ಅದು ಹೇಗೆ ಕಾಶಿಯಲ್ಲಿ ಚಿತ್ರೀಕರಣ ನಡೆಸುತ್ತಿರೋ! ನಾವೂ ನೋಡುತ್ತೇವೆ' ಎಂದು ಅವರು ಬೆದರಿಕೆ ಹಾಕಿದರು. ಅವರೇ ಈ ಗದ್ದಲಕ್ಕೆ ಕಾರಣ ಎನ್ನುತ್ತಾರೆ ಡೇವಿಡ್. ಅದನ್ನು ದೀಪಾ ಮೆಹ್ತಾ ಕೂಡ ಒಪ್ಪುತ್ತಾರೆ.

'ಇದು ಫ್ಯಾಸಿಸ್ಟ್ ಶಕ್ತಿಗಳ ಕೈವಾಡವಲ್ಲದೇ ಇನ್ನೇನು ?'

**ಸ್ಕ್ರಿಪ್ಟ್ ವಿವಾದ :** ಇದ್ದಕ್ಕಿದ್ದ ಹಾಗೆ 'ವಾಟರ್' ಚಿತ್ರಕಥೆ ಈಗ ವಿವಾದದ ಕೇಂದ್ರವಾಗಿದೆ. ಚಿತ್ರೀಕರಣಕ್ಕೆ ಅಡ್ಡಿ ಮಾಡುತ್ತಿರುವ ಕಾಶಿ ಸಂಸ್ಕೃತಿ ಸುರಕ್ಷಾ ಸಂಘ ಹಾಗೂ ವಿಶ್ವಸಂವಾದ ಕೇಂದ್ರ ಪಟ್ಟು ಹಿಡಿದಿರುವುದು ಈ ವಿಷಯಕ್ಕೇ. ಇಲ್ಲಿರುವ ಕೆಲವು ಅಭಿಪ್ರಾಯ ಸ್ಥಳೀಯರ ಭಾವನೆಗಳನ್ನು ನೋಯಿಸುತ್ತವೆ ಎನ್ನುತ್ತವೆ ಈ ಸಂಘಟನೆಗಳು. ಮಧುಮತಿ ಎಂಬ ಚಿತ್ರದಲ್ಲಿ ಪಾತ್ರವೊಂದು ಹೇಳುತ್ತದೆ: ನಿಮಗೆ ಚೆನ್ನಾಗಿ ಗೊತ್ತಿರಬೇಕು. ಇಲ್ಲಿ ಸೂಳೆಗೂ ವಿಧವೆಗೂ ವ್ಯತ್ಯಾಸ ಏನೂ ಇಲ್ಲ. ಶಕುಂತಲಾ ಎಂಬ ಇನ್ನೊಂದು ಪಾತ್ರ ಕಾಶಿಯ ಪಂಡಿತ ಮಾನಸರಾಂನನ್ನು ವಿಧವೆಯರು ಅನುಭವಿಸುತ್ತಿರುವ ಕ್ರೌರ್ಯ ಕುರಿತು ಪ್ರಸ್ತಾಪಿಸುತ್ತಾ 'ನೀವು ಹಿಂದೂ ಧರ್ಮಗ್ರಂಥಗಳನ್ನೆಲ್ಲಾ ಓದಿದ್ದೀರಾ? ಅವೆಲ್ಲ ವಿಧವೆಯರನ್ನು ಕ್ರೂರವಾಗಿ ನಡೆಸಿಕೊಳ್ಳಬೇಕು ಎಂದು ಹೇಳುತ್ತಿವೆಯೇ?' ಎಂದಾಗ ಪಂಡಿತ ಹೇಳುತ್ತಾನೆ. 'ಹಿಂದೂ ಧರ್ಮಗ್ರಂಥಗಳಲ್ಲಿ ವಿಧವೆಯರಿಗೆ ಸೂಚಿಸಿರುವುದು ಎರಡೇ ಹಾದಿ. ಅವರು ಲೌಕಿಕವಾದುದೆಲ್ಲ ಬಿಟ್ಟು ಬದುಕಬೇಕು. ಇಲ್ಲವೇ ಗಂಡನ ಜೊತೆ ಚಿತೆ ಏರಬೇಕು....'

ಇಂಥ ಮಾತು ಹಿಂದೂ ಸಂಪ್ರದಾಯಸ್ಥರಿಗೆ ನೋವುಂಟು ಮಾಡಿದೆ. ಕಾಶಿಯಲ್ಲಿ ಬದುಕುವ ವಿಧವೆಯರೆಲ್ಲ ಸೂಳೆಯರು ಎಂಬಂತೆ ಚಿತ್ರಿಸಲಾಗುತ್ತಿದೆ. ಇದಕ್ಕೆ ನಾವು ಅವಕಾಶ ಕೊಡುವುದಿಲ್ಲ ಎನ್ನುತ್ತವೆ ಈ ಸಂಘಟನೆಗಳು.

# 'ಚಿತ್ರಕಥೆ ಓದುತ್ತಾ ಕಣ್ಣಲ್ಲಿ ನೀರು ಬಂತು'



ವೀರಭದ್ರ ಮಹಂತ

ಕಾಶಿಯ ಅಸ್ಸೀ ಘಾಟ್‌ನಲ್ಲಿ ಸಂಕಟಮೋಚನ ಮಂದಿರವಿದೆ. ಅಲ್ಲೇ 'ವಾಟರ್' ಚಿತ್ರೀಕರಣ ನಡೆಯಬೇಕಿತ್ತು. ಮಂದಿರದ ಮಹಂತ ವೀರಭದ್ರ ಮಿಶ್ರಾ. ಕಥೆಯ ಬಗ್ಗೆ ವಿವಾದ ಎದ್ದಾಗ ಮಹಂತರಿಗೆ ನಿರ್ದೇಶಕಿ ದೀಪಾ ಮೆಹ್ತಾ ಚಿತ್ರಕಥೆ ಪೂರ್ತಿಯಾಗಿ ಓದಿ ಹೇಳಿದರು. 128 ಪುಟದ ಚಿತ್ರಕಥೆ ಕೇಳಿರುವ ಆತ ಹೇಳುವುದು ಹೀಗೆ :

''ಆಕೆ ಚಿತ್ರಕಥೆ ಓದಿ ಹೇಳುವಾಗ ಕಾಶಿ ವಿದ್ವತ್ ಪರಿಷದ್‌ನ ವಕ್ತಾರ ಶೇವೋಜಿ ಉಪಾಧ್ಯಾಯ ಜೊತೆಗಿದ್ದರು. ಒಂದೂ ಪದ ಬಿಡದಂತೆ ಆಕೆ ಎಲ್ಲ ಓದಿ ವಿವರಿಸಿದರು.



ವಿಧವೆ ಪಾತ್ರದ ಬಾಲಕಿ

ಅದರಲ್ಲಿ ಆಕ್ಷೇಪಾರ್ಹ ಆದದ್ದು ಏನೂ ಇಲ್ಲ. ನಮ್ಮ ಸಂಸ್ಕೃತಿ, . ವಿಧವೆಯರು, ಗಂಗೆಯನ್ನು ಗೌರವಾನ್ವಿತರಾಗಿಯೇ ನೋಡಲಾಗಿದೆ. ವಾರಾಣಸಿಯ ವಿಧವೆಯರೆಲ್ಲ ಸೂಳೆಯರು ಎಂಬಂಥ ಭಾವನೆ ಅಲ್ಲಿ ಇಲ್ಲವೇ ಇಲ್ಲ.

ಚಿತ್ರಕಥೆ ಕೇಳುತ್ತಾ ಕೇಳುತ್ತಾ ನನ್ನ ಎದೆ ಭಾರವಾಯಿತು. ವಿಧವಾಶ್ರಮಕ್ಕೆ ಎಂಟುವರ್ಷದ ವಿಧವೆಯೊಬ್ಬಳ ಆಗಮನದ ಸನ್ನಿವೇಶವಂತೂ ಹೃದಯ ವಿದ್ರಾವಕ. ಅದನ್ನು ಕೇಳುತ್ತಾ ನನ್ನ ಕಣ್ಣಲ್ಲಿ ನೀರು ತುಂಬಿ ಬಂತು ದಳದಳನೆ ಕೆನ್ನೆಗಿಳಿಯಿತು.''

ಇದು ಕಾಶಿಯ ಕಥೆ. ಅದಕ್ಕೊಂದು ಪರಿಸರ, ಹಿನ್ನೆಲೆ, ಇತಿಹಾಸ ಎಲ್ಲ ಇದೆ. ಇಂಥದೊಂದು ಚಿತ್ರವನ್ನು ಕಾಶಿ ಬಿಟ್ಟು ಇನ್ನೆಲ್ಲೋ ಚಿತ್ರೀಕರಿಸುವುದೆಂದರೆ ಕಥೆಯ ಹೃದಯವನ್ನೇ ಕಿತ್ತು ಹಾಕಿದಂತೆ. ಬೇರೆಡೆ ಚಿತ್ರೀಕರಿಸುವುದು ಅರ್ಥ ಹೀನ ಅನ್ನುತ್ತಾರೆ. ಖ್ಯಾತ ನಿರ್ದೇಶಕ ಮೃಣಾಲ್ ಸೇನ್.



ಸಿಂಘಾಲ್ ಉಮಾ ಭಾರತಿ

## 'ರಕ್ತಪಾತವಾದೀತು.

'ಇದೆಲ್ಲ ಫ್ಯಾಸಿಸ್ಟ್ ಶಕ್ತಿಗಳು ಬಲಿಷ್ಠವಾಗುತ್ತಿರುವ ಸೂಚನೆ' ಎನ್ನುತ್ತಾರೆ ನಾಯಕಿ ನಟಿ ಶಬಾನಾ ಆಜ್ಮಿ.

ಚಿತ್ರೀಕರಣ ಆರಂಭಿಸುವ ಮುಂಚೆಯೇ ಚಿತ್ರ ಒಂದನ್ನು ಬಹಿಷ್ಕರಿಸುವುದು ಅರ್ಥಹೀನ. ನೀವು ದೀಪಾ ಮೆಹ್ತಾ ವಿಚಾರ ಒಪ್ಪದೇ ಇರಬಹುದು. ಆದರೆ ಚಿತ್ರ ಮಾಡುವುದಕ್ಕೆ ಬಿಡುವುದಿಲ್ಲ ಎಂದರೆ ಹೇಗೆ

## ಕಲ್ಲು ಹೊಡೆಯುತ್ತೇವೆ'

ಎನ್ನುತ್ತಾರೆ ಇನ್ನೊಬ್ಬ ಹಿರಿಯ ನಿರ್ದೇಶಕ ಗುಲ್ಜಾರ್.

ಹಿಡಿಯಷ್ಟು ಜನ ಗದ್ದಲ ಮಾಡಿದರು. ಚಿತ್ರೀಕರಣ ನಡೆದರೆ ಕಲ್ಲು ಕಟ್ಟಿಕೊಂಡು ಗಂಗೆಗೆ ಬೀಳುತ್ತೇನೆ ಎಂದ ಮತ್ತೊಬ್ಬ. ಇಂಥ ಪ್ರಹಸನ ನಡೆಯುವಾಗ ಬಹು ಸಂಖ್ಯಾತ ಜನ ತಮಗೂ ಇದಕ್ಕೂ ಯಾವುದೇ ಸಂಬಂಧ ಇಲ್ಲ ಎಂಬಂತೆ ವರ್ತಿಸಿದರು. ಗೂಂಡಾ ಶಕ್ತಿಗಳ ವಿಜೃಂಭಣೆಗೆ ಮೌನ ಪ್ರೇಕ್ಷಕರಾದರು. ಈಗ ಫ್ಯಾಸಿಸ್ಟ್ ಶಕ್ತಿಗಳು ಗೆದ್ದಿವೆ.

ಈ ಗೆಲುವು ಮುಂದಿನ ಈ ಶಕ್ತಿಗಳ ಮಾರಕ ಪ್ರಯೋಗಗಳಿಗೆ ಇಂಬುಕೊಡುತ್ತವೆ. ಅದೇ ಇಲ್ಲಿನ ದುರಂತ.

■ ಮೋಹನ.

# ಹಳ್ಳಿ ಹೈದನಿಗೆ ಡಾಕ್ಟರೇಟ್



ಉತ್ತರ ಕನ್ನಡ ಜಿಲ್ಲೆ ಹಲವು ನಿಗೂಢಗಳ ಬೀಡು. ಇಲ್ಲಿನ ಪ್ರಕೃತಿ, ಪರಿಸರ, ಜೀವನ ವಿಧಾನ, ಅಧ್ಯಯನ ನೂರೆಂಟು ವಿಸ್ಮಯಗಳನ್ನು ತೆರೆದಿಡಬಲ್ಲದು.

ಅಷ್ಟೇನೂ ಓದಿಕೊಂಡಿರದ ಸಿದ್ಧಾಪುರ ತಾಲ್ಲೂಕಿನ ಗೋಪಾಲಕೃಷ್ಣ ಹೆಗಡೆ ಗೊದ್ಲಬೀಳ ಆಯುರ್ವೇದ ಕುರಿತು ಮಾಡಿದ ಅಧ್ಯಯನಕ್ಕೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪಡೆದಿದ್ದಾರೆ.

ಪದವಿ ಪೂರ್ವ ಶಿಕ್ಷಣ ಪಡೆದಿರುವ ಇವರು ತಮ್ಮ ಊರಲ್ಲಿ ಅರೆಕಾಲಿಕ ಪೋಸ್ಟ್‌ಮನ್. ಜೊತೆಗೆ ಆಯುರ್ವೇದ ಔಷಧಿಗಳ ಬಗ್ಗೆ ಆಸಕ್ತಿ. ಆ ಆಸಕ್ತಿಯಿಂದಲೇ ನಾಡಿ ವಿಜ್ಞಾನದ ಸಂಶೋಧನೆ ಕೈಗೊಂಡರು. ಅದರ ಪರಿಣಾಮವಾಗಿ ಬಂತು 'ನಾಡಿ ಗುಪ್ತಗಾಮಿನಿ' ಎಂಬ ಪುಸ್ತಕ. ಅದಕ್ಕೆ ಈಗ ಹಂಪಿ ವಿಶ್ವವಿದ್ಯಾಲಯದ ಡಾಕ್ಟರೇಟ್ ದೊರಕಿರುವುದು. ಮುಂದೆ ಇವರು ಅಡಿಕೆಗೆ ಪರ್ಯಾಯ ಬೆಳೆ ಕುರಿತು ಸಂಶೋಧನೆ ಆರಂಭಿಸಲಿದ್ದಾರೆ. ■

# ಹ್ಯಾಗಿದೆ... ನಮ್ಮ ಶಿಕ್ಷಣ...?



ಪ್ರಾಥಮಿಕ

ನಾವೇನೊ ಮಕ್ಕಳಿಗೆ ಕಲಿಸಬೇಕಂತೀವಿ ಆದರ ಸರ್ಕಾರದವರು ನೂರಾ ಎಂಟು ಕೆಲಸಕ್ಕೆ ಹಚ್ಚತಾರಲ್ಲ ಅದಕ್ಕ ಕಲಿಸಾಕ ಟೈಮ್ ಸಿಗೋದಿಲ್ಲ ನೋಡ್ರಿ.....



ಪ್ರೌಢ

ಅಲ್ರೀ, ಇದರಾಗ ನಮ್ಮದೇನ ತಪ್ಪದ ಪ್ರಾಥಮಿಕ ಶಾಲೆಯಿಂದ ಬಂದ ಮಕ್ಕಳಿಗೆ ರ.ಠ.ಈ.ಕ ಬರುದಿಲ್ಲಾ ಅಂದ್ರ ಅದನ್ನ ನಾವು ಕಲಿಸಾಕ ಆಗುತ್ತೇನು...?



ಕಾಲೇಜ್

ಬೆಳೆದ ನಿಂತ ಮಕ್ಕಳು ನೋಡ್ರೀ ಅವರಿಗೆ ಬುದ್ದಿ ಹೇಳೋದು ಒಂದ, ಕೋಣನ ಮುಂದ ಕಿನ್ನೂರಿ ಬಾರಿಸೋದು ಒಂದ....



ವಿಶ್ವ ವಿದ್ಯಾಲಯ

ಛೇ ಈಗಿನ ವಿದ್ಯಾರ್ಥಿಗಳಿಗೆ ನಾವೇನ ಕಲಿಸೋದೈತಿ ಅವರ ನಮಗ ಕಲಿಸೋ ಹೊತ್ತಿನ್ಯಾಗ....

ಎಸ್.ಎನ್. ಪೋಲೇಶಿ

# ಮನುಷ್ಯನಿಗೇ ಶಾಪವಾದ ಕೀಟನಾಶಕಗಳು







**ತಾಯಿಯ ಮೊಲೆ ಹಾಲು ಸೇರಿದಂತೆ ನಾವು ಬಳಸುವ ಪ್ರತಿ ಆಹಾರ ಪದಾರ್ಥದಲ್ಲಿಯೂ ಇವತ್ತು ಕೀಟನಾಶಕಗಳು ಇರುತ್ತವೆ. ಮನುಷ್ಯ ತನ್ನ ಫಸಲು, ಪರಿಸರ ಚೆನ್ನಾಗಿರಬೇಕೆಂದು ಕಂಡುಕೊಂಡ ಕೀಟನಾಶಕ, ಕಳೆನಾಶಕಗಳೇ ಇಂದು ಆತನಿಗೆ ತಿರುಗುಬಾಣವಾಗುತ್ತಿವೆ. ಇವತ್ತು ಮನುಷ್ಯ ದೇಹದ ಕೊಬ್ಬಿನಂಶದಲ್ಲಿ ನೂರಾರು ಬಗೆಯ ಕೀಟನಾಶಕಗಳ ಕಣಗಳು ಪತ್ತೆಯಾಗಿವೆ. ಇದೊಂದು ಅಪಾಯಕಾರಿ ಬೆಳವಣಿಗೆ. ಇದಕ್ಕೆ ಪರಿಹಾರ ಉಂಟೇ?**

ಇವತ್ತು ಕೀಟನಾಶಕ, ಕಳೆನಾಶಕ ಇಲ್ಲದೆ ಜಗತ್ತು ನಡೆಯುವುದೇ ಇಲ್ಲ ಎಂಬಂಥ ಸ್ಥಿತಿ. ಆಹಾರ ಧಾನ್ಯ, ಹಗರಣ, ತರಕಾರಿಗಳಿಗೆ ಕೀಟನಾಶಕ ಸಿಂಪಡಿಸಲಾಗುತ್ತದೆ. ದನ ತಿನ್ನುವ ಹುಲ್ಲಿನ ಮೇಲೂ ಇವುಗಳ ಸಿಂಪರಣೆ ನಡೆಯುತ್ತದೆ. ಮನೆಯ ಗೋಡೆಗಳ ಮೇಲೆ ಬೂಷ್ಟು ಆಗದಂತೆ ಪೇಂಟ್‌ಗಳಲ್ಲಿ ಇದು ಇದೆ. ನಾವು ಬಳಸುವ ಪೀಠ, ಉಪಕರಣಗಳ ಕಟ್ಟಿಗೆಗೆ ನುಸಿ ಹಿಡಿಯದಂತೆ, ಉಣ್ಣೆ ಮತ್ತಿತರ ಬಟ್ಟೆಗಳು ಮಣ್ಣು ಹಿಡಿದು ಹಾಳಾಗದಂತೆ ಕೀಟನಾಶಕಗಳು ಬಳಕೆ ಆಗುತ್ತಿವೆ.

ಇದಲ್ಲದೆ ಮನೆಯನ್ನು ಸೊಳ್ಳೆ, ತಿಗಣೆ, ಮತ್ತಿತರ ಕೀಟಗಳಿಂದ ಮುಕ್ತವಾಗಿಸಲು ನಾನಾ ರೀತಿಯ ಕೀಟನಾಶಕಗಳ ಬಳಕೆ ಮಾಡುತ್ತಾ ಇದ್ದೇವೆ. ಕಳೆದ ಐವತ್ತು ವರ್ಷಗಳಲ್ಲಿ ಕೀಟನಾಶಕಗಳ ಉದ್ದಿಮೆ ಬೃಹತ್ತಾಗಿ ಬೆಳೆದಿದ್ದು, ಈಗಿನ ಸಿಂಥೆಟಿಕ್ ಕೀಟನಾಶಕಗಳೂ ಉತ್ಪಾದನೆ ಆಗುತ್ತಿವೆ. ಇಂಥ ರಾಸಾಯನಿಕವಾದ ಡಿಡಿಟಿ ಇಡೀ ಜಗತ್ತೆಲ್ಲ ವ್ಯಾಪಿಸಿಕೊಂಡ ಒಂದು ಮಾಲಿನ್ಯಕಾರಕ ಆಗಿಬಿಟ್ಟಿದೆ. ಇದರ ಕಣಗಳು ಅಂಟಾರ್ಟಿಕಾದ ಪೆಂಗ್ವಿನ್ ಪಕ್ಷಿಗಳಲ್ಲೂ ಪತ್ತೆಯಾಗಿದೆ.

ಮಳೆಯಲ್ಲಿ, ಕುಡಿಯುವ ನೀರಲ್ಲಿ, ತಾಯಿಯ ಮೊಲೆ ಹಾಲಲ್ಲಿ ಕೂಡ ಇಂದು ಡಿಡಿಟಿಯ ಕಣಗಳು ಪತ್ತೆಯಾಗಿವೆ. ಮನುಷ್ಯನ ದೇಹದ ಕೊಬ್ಬಿನ ಅಂಶದಲ್ಲಿ ನೂರಾರು ಬಗೆಯ ಕೀಟನಾಶಕಗಳ ಕಣಗಳು ಪತ್ತೆ ಆಗಿವೆ. ತಾಯಿಯ ಭ್ರೂಣದೊಳಗೆ, ಮೊಟ್ಟೆಯೊಳಗೆ ಕೂಡ ಕೀಟನಾಶಕದ ಕಣಗಳು ಪ್ರವೇಶಿಸಿ ಬಿಟ್ಟಿವೆ.

ಇಂಥ ನೂರಾರು ಕೀಟನಾಶಕಗಳು ಮನುಷ್ಯ ಮತ್ತಿತರ ಜೀವಿಗಳ ದೇಹದೊಳಗೆ ಪ್ರವೇಶಿಸಿದರೆ ಏನಾಗುತ್ತದೆ? ಅದರಿಂದಾಗುವ ಪರಿಣಾಮ ಏನೆಂಬುದು ಇನ್ನೂ ಸರಿಯಾಗಿ ಸಂಶೋಧನೆ ಆಗಿಲ್ಲ. ಈಗ ಲಭ್ಯವಿರುವ ಮಾಹಿತಿಯಂತೆ ಇಂಥ ಕೀಟನಾಶಕಗಳು ದೇಹದೊಳಗೆ ಇರುವುದರಿಂದ ಕ್ಯಾನ್ಸರ್‌ನಂಥ ರೋಗಗಳಿಗೆ ಹಾಗೂ ಗರ್ಭಸ್ಥ ಶಿಶು ವಿಕಲಾಂಗವಾಗಿ ಜನಿಸುವ ಸಾಧ್ಯತೆ ಹೆಚ್ಚು.

ಕೀಟನಾಶಕಗಳದು ವಿಚಿತ್ರ ಪ್ರಪಂಚ. ಆರಂಭದಲ್ಲಿ ಈ ರಾಸಾಯನಿಕಗಳು ತುಂಬಾ ಅಗ್ಗ. ದಿನ ಕಳೆದಂತೆ ಕೀಟಗಳು ಇವುಗಳ ಬಗ್ಗೆ ಪ್ರತಿರೋಧ ಬೆಳೆಸಿಕೊಳ್ಳುತ್ತವೆ. ಸೊಳ್ಳೆ ನಿರ್ಮೂಲನಕ್ಕೆ ರಾಮಬಾಣ ಎನಿಸಿದ್ದ ಡಿಡಿಟಿ ಇವತ್ತು ನಿಷ್ಪ್ರಯೋಜಕ ಎನಿಸಿರುವುದು ಇದೇ ಕಾರಣಕ್ಕೆ. ಇಷ್ಟರಲ್ಲಿ ಕೀಟಗಳಿಗೆ ಪ್ರಕೃತಿಯಲ್ಲಿ ಇರುವ ಕೆಲವು ಶತ್ರುಗಳನ್ನೂ ನಾಶ ಮಾಡಿ ಬಿಟ್ಟಿರುತ್ತದೆ. ಆಗ ರೈತರು ಹೆಚ್ಚಿನ ಸಾಂದ್ರತೆಯ ಕೀಟನಾಶಕ ಬಳಸುವುದು ಅನಿವಾರ್ಯ. ಮೊದಲು ತುಂಬಾ ಅಗ್ಗವಾಗಿದ್ದ ಕೀಟನಾಶಕ, ತೀರಾ ಅನಿವಾರ್ಯ ಎಂಬಂಥ ಸ್ಥಿತಿ ಬರುವ ಹೊತ್ತಿಗೆ ತೀರಾ ದುಬಾರಿ ಆಗಿ ಬಿಟ್ಟಿರುತ್ತವೆ.

### ಮೂರು ಮಾರಕ ರಾಸಾಯನಿಕಗಳು

ಕೀಟನಾಶಕದಲ್ಲಿ ಬಳಸಲಾಗುವ ಮೂರು ರಾಸಾಯನಿಕಗಳ ಬಗ್ಗೆ ಈಗ ತೀವ್ರ ಆತಂಕವಿದೆ. ಹಣ್ಣು, ತರಕಾರಿ ಬೆಳೆಯಲ್ಲಿ ಬಳಸುವ ಆರ್ಗನೋ ಪಾಸ್ಫೇಟ್ ಒಂದು. ಇದರಲ್ಲಿರುವ ಮೀಥೈಲ್ ಪಾರಥಿಯಾನ್ ಕೀಟಗಳನ್ನು ಕೊಲ್ಲುವ ಹಾಗೇ ಮನುಷ್ಯನಿಗೂ ಮಾರಕವಾಗಬಲ್ಲದು.

ಇನ್ನೊಂದು ಕೀಟನಾಶಕ ಡಯಲ್‌ಟ್ರಿನ್ ಕ್ಯಾನ್ಸರ್‌ಕಾರಕ. ಎಷ್ಟು ವರ್ಷಗಳಾದರೂ ಜಮೀನಿನ ಮಣ್ಣಲ್ಲಿ ಉಳಿದು, ಗಿಡಗಳೊಳಗೆ ಪ್ರವೇಶಿಸಿ, ಆ ಮೂಲಕ ಪ್ರಾಣಿ ಮತ್ತು ಮನುಷ್ಯನ ದೇಹದೊಳಕ್ಕೂ ಬರುತ್ತವೆ. ಇದೊಂದು ಕ್ಯಾನ್ಸರ್‌ಕಾರಕ. ಮುಂದುವರಿದ ದೇಶಗಳಲ್ಲಿ ಇದರ ಬಳಕೆ ನಿರ್ಬಂಧಿಸಲಾಗಿದೆ. ಆದರೆ ಬಡರಾಷ್ಟ್ರಗಳಲ್ಲಿ ಮಾತ್ರ ಇದರ ಬಳಕೆ ಮುಂದುವರಿದೇ ಇದೆ.

ಇನ್ನೊಂದು ಅಪಾಯಕಾರಿ ಕೀಟನಾಶಕ ಎಂದರೆ ಆಲ್ಡಿಕಾರ್ಬ್. ತೀರಾ ಶಕ್ತಿಯುತವಾದ ಈ ರಾಸಾಯನಿಕ ಆಲೂಗಡ್ಡೆ ಮುಂತಾದ ಬೆಳೆಗಳಲ್ಲಿ ಬಳಕೆ ಆಗುತ್ತದೆ. ಅಂಥ ತರಕಾರಿಗಳ ಮೇಲ್ಮೈಯಲ್ಲಿ ಮಾತ್ರ ಇದು ಉಳಿಯದೇ ತಿರುಳಿನ ಒಳಗೂ ಪ್ರವೇಶಿಸುತ್ತದೆ. ತರಕಾರಿಯನ್ನು ತೊಳೆದರೂ ಪ್ರಯೋಜನ ಇಲ್ಲ.

### ಕೀಟನಾಶಕಗಳು ನಾನಾ ಬಗೆ

ಕೀಟನಾಶಕ ಎಂದೇನೋ ನಾವು ಸಾಮಾನ್ಯವಾಗಿ ಬಳಸುತ್ತೇವೆ. ಇವುಗಳಲ್ಲಿ ನಾನಾ ಬಗೆ. ಕೆಲವು ಕೀಟ ಕೊಲ್ಲಲು, ನಿಯಂತ್ರಿಸಲು ಬಳಸುತ್ತೇವೆ.

ಕೆಲವನ್ನು ಕಳೆ ನಿಯಂತ್ರಿಸಲು ಉಪಯೋಗಿಸುತ್ತೇವೆ. ಕೀಟಗಳ ಹಾಗೆ ಬೂಷ್ಟು ಅಥವಾ ಶಿಲೀಂದ್ರ ನಾಶಕ್ಕೆ ಮತ್ತು ಇಲಿ, ಹೆಗ್ಗಣಗಳ ನಾಶಕ್ಕೂ ಶಕ್ತಿಯುತ ರಾಸಾಯನಿಕಗಳ ಬಳಕೆಯಾಗುತ್ತವೆ. ಕೆಲವನ್ನು ಧೂಳಿನ ಹಾಗೆ ಎರಚಿದರೆ, ಕೆಲವನ್ನು ನೀರಲ್ಲಿಯೋ, ಸೀಮೆಎಣ್ಣೆಯಲ್ಲಿಯೋ ಬೆರೆಸಿ ಸಿಂಪಡಿಸ ಬೇಕಾಗುತ್ತದೆ. ಇನ್ನು ಕೆಲವನ್ನು ಹೊಗೆಯಂತೆ ಬಳಸಬೇಕಾಗುತ್ತದೆ.

**ಪರಿಹಾರ ಇಲ್ಲವೆ ?**

ಅತ್ಯುತ್ತಮ ಪರಿಹಾರ ಎಂದರೆ ಸಾವಯವ ಕೃಷಿ ಅನುಸರಿಸುವುದು. ಇದರಲ್ಲಿ ಕೀಟನಾಶಕ, ನಿಯಂತ್ರಕಗಳ ಬಳಕೆಯೇ ಇರುವುದಿಲ್ಲ. ಸರಿಯಾದ ಕೀಟ ನಿಯಂತ್ರಣ ವ್ಯವಸ್ಥೆ ರೂಢಿಸುವುದು ಇನ್ನೊಂದು ಕ್ರಮ. ಇದನ್ನು ಸರ್ಕಾರಗಳೇ ಮಾಡಬೇಕು. ಹಾಗೆಯೇ ಕೀಟನಾಶಕ ಬಳಸುವ ರೈತರಿಗೆ ಸರಿಯಾದ ಶಿಕ್ಷಣ ನೀಡುವುದೂ ಆಗಬೇಕು. ಇವೆಲ್ಲ ಹೇಳುವ ಅಂಶಗಳು. ಮಾಡಬಹುದಾದ್ದು ಎಂದು ನಮ್ಮಲ್ಲಿ ಹೇಳುವುದು ಕಷ್ಟ.

**ಪಾಪಕ್ಕೆ ಪರಿಹಾರ**

ನಾವಾಗಿ ತಂದುಕೊಂಡ ಈ ಪಾಪಕ್ಕೆ ನಾವೇ ಪರಿಹಾರ ಕಂಡುಕೊಳ್ಳುವುದು ಸರಿಯಾದ ಮಾರ್ಗ. ದಿನ ನಿತ್ಯವೂ ನಾವು ಬಳಸುವ ಆಹಾರದ ಬಗ್ಗೆ ಹಲವಾರು ಮುನ್ನೆಚ್ಚರಿಕೆ ವಹಿಸಿದರೆ ಕೀಟನಾಶಕ ದೇಹದ ಒಳ ಸೇರದಂತೆ ತಡೆಯುವುದು ಸಾಧ್ಯ.

ತರಕಾರಿ, ಹಣ್ಣು, ಗೆಡ್ಡೆ ಪದಾರ್ಥಗಳನ್ನು ಅಡುಗೆಗೆ ಬಳಸುವ ಮುನ್ನ ಚೆನ್ನಾಗಿ ತೊಳೆಯುವುದರಿಂದ ಕೀಟನಾಶಕಗಳನ್ನು ನಿವಾರಿಸುವುದು ಸಾಧ್ಯ. ಬೇಳೆ, ಆಹಾರ ಧಾನ್ಯಗಳನ್ನು ಹಿಟ್ಟು ಮಾಡಿಸುವ ಮುನ್ನ ನೀರಲ್ಲಿ ಚೆನ್ನಾಗಿ ತೊಳೆದು, ಬಿಸಿಲಲ್ಲಿ ಒಣಗಿಸಿ ಆನಂತರ ಹಿಟ್ಟು ಮಾಡಿಸುವುದೂ ಇಂದು ತೀರಾ ಅಗತ್ಯವಾದ ಸ್ಥಿತಿ ಏರ್ಪಟ್ಟಿದೆ.

ತರಕಾರಿಗಳನ್ನು ಹೆಚ್ಚುವ ಅಥವಾ ಸಿಪ್ಪೆ ಸುಲಿಯುವ ಮುನ್ನವೇ ಚೆನ್ನಾಗಿ ತೊಳೆಯಬೇಕು. ಮಾಂಸಾಹಾರಿಗಳಾದರೆ ಮಾಂಸ, ಮೀನು ಮುಂತಾದವನ್ನು ನಂಬಿಕಸ್ಥ ವ್ಯಾಪಾರಿಗಳಿಂದ ಮಾತ್ರ ಖರೀದಿಸುವುದು ಉತ್ತಮ.

ಕೀಟನಾಶಕದ ರಾಸಾಯನಿಕ ಹೆಚ್ಚಾಗಿ ಪ್ರಾಣಿಗಳ ಕೊಬ್ಬಿನಲ್ಲಿ ಪ್ರವೇಶಿಸಿರುವುದರಿಂದ, ಆದಷ್ಟೂ ಕೊಬ್ಬಿನ ಅಂಶ ಬಳಸದೇ ಇರುವುದೂ ಒಳ್ಳೆಯ ಮುನ್ನೆಚ್ಚರಿಕೆ ಕ್ರಮ ಆಗಬಲ್ಲದು. ಹಾಗೇ ಪ್ರಾಣಿಗಳ ಹೃದಯ, ಲಿವರ್ ಮುಂತಾದ ಅಂಗಗಳನ್ನು ಆಹಾರವಾಗಿ ಬಳಸದೇ ಇರುವುದೇ ಒಳ್ಳೆಯದು. ಇಂಥ ಅಂಗಾಂಗಗಳಲ್ಲಿಯೇ ಹೆಚ್ಚಾಗಿ ಕೀಟನಾಶಕಗಳು ನೆಲೆಯಾಗಿ ಇರುವುದರಿಂದ, ಅವುಗಳ ರುಚಿಯಲ್ಲಿಯೇ ಸಾಕಷ್ಟು ವ್ಯತ್ಯಾಸವನ್ನು ಗಮನಿಸುವುದೂ ಸಾಧ್ಯ. ರುಚಿಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡರೂ ಅಂಥವುಗಳನ್ನು ಬಳಸದೇ ಇರುವುದೇ ಉತ್ತಮ ಉಪಾಯ. ■

---

## ಬಾಬಿಟೈಸ್ (Bobbitise)

ಸ್ತ್ರೀಯರು ಪುರುಷರ ಜನನಾಂಗವನ್ನು ಕತ್ತರಿಸುವ ಕ್ರಿಯೆ ಎಂಬ ಅರ್ಥ ಕೊಡುವ ಬಾಬಿಟೈಸ್ ಎಂಬ ಪದದ ಮೂಲ ತುಂಬಾ ರೋಚಕ. ಯು.ಎಸ್.ಎ. ಯಲ್ಲಿ ಜಾನ್‌ವೇನೋ ಬಾಬಿಟೈಸ್ ಎಂಬಾತನು ಪರನಾರಿ ಗಮನ ಮಾಡಿದ ಕಾರಣ ಆತನ ಪತ್ನಿ ಆತನ ಪುರುಷಾಂಗವನ್ನು ಕತ್ತರಿಸಿದಾಗ ಪತ್ರಕರ್ತರು ಬಾಬಿಟೈಸ್ ಎಂಬ ಪದವನ್ನು ಸೃಜಿಸಿದರಂತೆ. ಈ ಮುನ್ನ ಆಸ್ಟ್ರೇಲಿಯಾದ ಸಿಡ್ನಿಯಲ್ಲಿ ಟಾಂ ಟ್ರಾಂ ಎಂಬುವನ ಪತ್ನಿ ಹಾಗೂ ಬಾಂಗ್ಲಾ ದೇಶದ ಬಾನು ಮತ್ತು ಫಿರ್ದೂಸ್ ಎಂಬ ನಾರಿಯರು ಹೀಗೆಯೇ ಮಾಡಿದ್ದರೂ ಅವರಿಂದ ಹೊಸಪದ ಏಕೆ ಸೃಷ್ಟಿಯಾಗಲಿಲ್ಲವೋ ತಿಳಿಯದು.

## ಲಿಂಗ ಶೋಧನೆ

ಸುಪ್ರಸಿದ್ಧ ವಿಜ್ಞಾನಿ ಐನ್‌ಸ್ಟೀನ್‌ರು ಹೊರಾಂಗಣ ಔತಣಕೂಟದಲ್ಲಿ ಭೇಟಿಯಾದಾಗ ಫ್ಯಾಷನಬಲ್ ನಾರೀಮಣಿಯೊಬ್ಬಳು ಆಗಸದಲ್ಲಿದ್ದ ಗ್ರಹವೊಂದರತ್ತ ಬೆರಳು ಮಾಡಿ 'ಓ ಆ ವೀನಸ್ ಅದೆಷ್ಟು ಸುಂದರವಾಗಿದೆ' ಎಂದಳು. ಅದಕ್ಕೆ ಐನಸ್ಟೀನ್ 'ಕ್ಷಮಿಸಿ, ಅದು ನಿಜಕ್ಕೂ ಜ್ಯೂಪಿಟರ್. ವೀನಸ್ ಅಲ್ಲ' ಎಂದರು. ಆಗ ಲೇಡಿ 'ಓ ಐನ್‌ಸ್ಟೀನ್, ನೀವು ಬಲು ಜಾಣರಪ್ಪ. ಎಷ್ಟೇ ದೂರದಲ್ಲಿದ್ದರೂ ನೀವು ಕರಾರುವಕ್ಕಾಗಿ ಅವುಗಳ ಲಿಂಗವನ್ನು ಗುರುತಿಸಿಬಿಟ್ಟಿರಲ್ಲಾ' ಎಂದು ಹುಂಬ ನಗೆ ಬೀರಿದಳಂತೆ.

ಸಂಗ್ರಹ : ಕೆ. ವೆಂಕಣ್ಣಾಚಾರ್

## ಅರ್ಥ - ಅಪಾರ್ಥ

ಪತ್ರಿಕೆಗಳ ಸುದ್ದಿ ಬೋಧಪ್ರದ. ಹಾಗೇ ಕೆಲವೊಮ್ಮೆ ರಂಜನೀಯ. ಮುದ್ರಾರಾಕ್ಷಸನ ಹಾವಳಿಯಿಂದ 'ಅರ್ಥಾಂತರ' ಆಗಿ ಏನೆಲ್ಲ ಫಜೀತಿ.

ನೀವು ಓದುವ ಪತ್ರಿಕೆಯಲ್ಲಿ ನಿಮ್ಮ ಕಣ್ಣಿಗೆ ಬಿದ್ದ ಅಂಥ ಅರ್ಥಾಂತರಗೊಂಡ ವಾಕ್ಯವನ್ನು ಬರೆದು ಕಳಿಸಿ. ಮೂಲದ ತುಣುಕು ಜೊತೆಗಿರಿಸಿದ್ದರೆ ಒಳ್ಳೆಯದು. ದಿನಪತ್ರಿಕೆಯ ಹೆಸರು, ಸುದ್ದಿ ಪ್ರಕಟವಾದ ದಿನಾಂಕ ನಮೂದಿಸಿ. ಉತ್ತಮ ಎನಿಸಿದ ಇಂಥ ಅರ್ಥಾಂತರಗೊಂಡ ವಾಕ್ಯಗಳನ್ನು ಕಳಿಸಿದವರ ಹೆಸರಿನೊಂದಿಗೆ ಪ್ರಕಟಿಸುತ್ತೇವೆ. ಪಕ್ಕದಲ್ಲಿರುವ ಇಂಥ ಅಪಾರ್ಥದ ಸ್ಯಾಂಪಲ್ ಗಮನಿಸಿ.

-ಸಂಪಾದಕ

ಸಂಯುಕ್ತ ಕರ್ನಾಟಕ
18.2.2000

ಜನಗಳು ಬಸ್ ಹತ್ತುವಾಗ ಅಥವಾ ಇಳಿಯುವುದಾಗ ಇವರುಗಳು ಪರ್ಸ್‌ಗಳನ್ನು ಹೊಡೆದು, ಮಧ್ಯದಲ್ಲೇ ಬಸ್ ನಿಧನವಾದಾಗ ಅಥವಾ ಮುಂದಿನ ಬಸ್‌ಸ್ಟಾಪ್‌ನಲ್ಲಿ ಇಳಿದು ಹೋಗಿ ಬಿಡುತ್ತಾರೆ.

ಜನಗಳು ಬಸ್ ಹತ್ತುವಾಗ ಅಥವಾ ಇಳಿಯುವುದಾಗ ಇವರುಗಳು ಪರ್ಸ್‌ಗಳನ್ನು ಹೊಡೆದು, ಮಧ್ಯದಲ್ಲೇ ಬಸ್ ನಿಧನವಾದಾಗ ಅಥವಾ ಮುಂದಿನ ಬಸ್‌ಸ್ಟಾಪ್‌ನಲ್ಲಿ ಇಳಿದು ಹೋಗಿ ಬಿಡುತ್ತಾರೆ.

# ಸ್ಟೀವ್ ವಾ ಎಂಬ ಮನುಷ್ಯ

**ಮನುಷ್ಯ ದೊಡ್ಡವನಾಗಿ ಬೆಳೆದಷ್ಟೂ ಅವನ ಬಗೆಗಿನ ನಿರೀಕ್ಷೆಗಳು ಹೆಚ್ಚುತ್ತವೆ. ಕ್ರಿಕೆಟ್‌ನಂಥ ಆಟದಲ್ಲಿ ಜನಪ್ರಿಯತೆ ಹೆಚ್ಚಿದಷ್ಟೂ ಆದಾಯ ಹೆಚ್ಚುತ್ತದೆ. ಕ್ರಿಕೆಟ್ ಜೀವನದ ಅವಧಿಯೇ ಅನಿಶ್ಚಿತ. ಹೀಗಾಗಿ ಇರುವಷ್ಟು ಕಾಲದಲ್ಲಿಯೇ ಆದಷ್ಟು ಹೆಚ್ಚು ಸಂಪಾದಿಸುವುದೇ ಗುರಿಯಾಗುತ್ತದೆ. ಇದನ್ನು ಮೀರಿ ನಾಲ್ಕು ಜನಕ್ಕೆ ಒಳ್ಳೆಯದು ಏನಾದರೂ ಮಾಡುವುದು ಸಾಧ್ಯ ಎಂಬುದು ಸ್ಟೀವ್‌ವಾನ ನಂಬಿಕೆ. ಆತನ ಜೀವನದ ಇಣುಕು ನೋಟ ಇಲ್ಲಿದೆ.**

ವಿಶ್ವಕಪ್ ಪಂದ್ಯಾವಳಿಯ ಸಮಯ. 'ಆಸ್ಟ್ರೇಲಿಯಾ ತಂಡ ಗೆಲ್ಲಲಿ' ಎಂದು ಆಶಿಸಿ ಕಲ್ಕತ್ತಾದ ಹುಡುಗರು ಫ್ಯಾಕ್ಸ್ ಸಂದೇಶ ಕಳಿಸಿದ್ದರು. ಅವರೆಲ್ಲ ಕುಷ್ಠ ರೋಗಿಗಳು. ಅವರ ಶಾಲೆಯ ನಿರ್ವಹಣೆ ಹೊತ್ತುಕೊಂಡವನು ಆಸ್ಟ್ರೇಲಿಯಾ ತಂಡದ ನಾಯಕ ಸ್ಟೀವ್ ವಾ. ಆತನನ್ನು ಆ ಹುಡುಗರೆಲ್ಲ 'ಸ್ಟೀವ್ ದಾ (ಅಣ್ಣ)' ಎಂದೇ ಕರೆಯುವುದು.

1998ರ ಇಂಡಿಯಾ ಪ್ರವಾಸದ ವೇಳೆ ಬೆಸೆದ ನಂಟು ಇದು. ಸ್ಟೀವ್ ತಾನೇ ತೆಗೆದ ಸ್ಲೈಡುಗಳನ್ನು ತನ್ನೂರಿಗೆ ಹೊತ್ತೊಯ್ದಿದ್ದ. ಮನೆಯವರನ್ನೆಲ್ಲ ಒಂದೆಡೆ ಸೇರಿಸಿ, ಸ್ಲೈಡುಗಳನ್ನು ಒಂದೊಂದಾಗಿ ಹಾಕಿ ತೋರಿಸಿ, ಕುಷ್ಠದ ಕಷ್ಟ ವಿವರಿಸುತ್ತಾ ಹೋದ. ಅದಾದ ಮೇಲೆ ಅವನು ಹೇಳಿದ್ದು 'ಇನ್ನು ಅದು ಬೇಕು. ಇದು ಬೇಕು ಅಂತ ಯಾವತ್ತೂ ಹೇಳಬೇಡಿ' ಅವನ ದನಿಯಲ್ಲಿ ತೇವವಿತ್ತು. ಪ್ರಪಂಚದ ಇನ್ನೊಂದು ತುದಿಯಲ್ಲಿ ತುತ್ತು ಅನ್ನಕ್ಕೆ, ಬದುಕಿನ ಸಣ್ಣ ಪುಟ್ಟ ಅಗತ್ಯಗಳಿಗೆ ಎರವಾಗಿ ಬದುಕುವ ಜನ ಇರುವತನಕ ತಾವು ಸುಖದಲ್ಲಿ ಮುಳುಗುವುದು ಅಮಾನವೀಯ ಎಂಬುದೇ ಆತನ ಭಾವನೆಯಾಗಿತ್ತು.




ಶ್ರೀಮಂತಿಕೆಯ ಆಡಂಬರ ಮೆರೆಯುವ ಪಾಶ್ಚಿಮಾತ್ಯ ದೇಶಗಳು ಅವನಿಗೆ ಬೇಡ. ವೈವಿಧ್ಯಮಯ, ಬಡತನ ತುಂಬಿದ ಇಂಡಿಯಾ ಬೇಕು. ಇಲ್ಲಿ ಆಡಲು ಬಂದಾಗ ಎತ್ತಿಟ್ಟುಕೊಂಡ ಮಣ್ಣು ಮೆತ್ತಿದ್ದ ಸ್ಟಂಪ್‌ಗಳನ್ನು ಆತ ಜತನದಿಂದ ಕಾಯ್ದಿರಿಸಿಕೊಂಡಿದ್ದಾನೆ. ಅದನ್ನು ತೊಡೆದು ಸ್ಟಂಪ್ ಚಂದ ಕಾಣಿಸುವಂತೆ ಮಾಡಲು ಯಾರಾದರೂ ಯತ್ನಿಸಿದರೆ ರೇಗಿಯೇ ಬಿಡುತ್ತಾನೆ. ಮುಂದೊಂದು ದಿನ ಇಲ್ಲಿನ ಮಣ್ಣು,ಧೂಳು ತುಂಬಿದ ನಗರಗಳಿಗೆ ಬರಬೇಕು. ಕುಷ್ಠರೋಗದಿಂದ ಬಳಲುವ ಜನಕ್ಕೆ ನೆರವಾಗಬೇಕೆನ್ನುವುದು ಅವನ ಮಹದಾಸೆ. ಅಂಗವಿಕಲರಿಗೆ ಈಜು ಕಲಿಸುವುದೇ ಜೀವನದ ಸಂತಸದ ಸಂಗತಿ ಎಂದು ತೊಡಗಿಕೊಂಡಿರುವ ಆತನ ತಾಯಿ ಕೂಡ ಆಗ ಜೊತೆಗೆ ಬರಲಿದ್ದಾಳೆ.

1965ರ ಜೂನ್ 2 ರಂದು ತಮ್ಮ ಮಾರ್ಕ್‌ವಾಗಿಂತ ನಾಲ್ಕು ನಿಮಿಷ ಮುಂಚೆ ಹುಟ್ಟಿದವನು ಸ್ಟೀವ್. ತಾಯಿ ಬೆವರ್ಲಿ, ತಂದೆ ರಾಡ್ರಿಗ್ಸ್, ತಾಯಿಗೀಗ 54 ವರ್ಷ. ತಂದೆ ವಿಚ್ಛೇದನ ಪಡೆದು ದೂರವಾಗಿ ತುಂಬಾ ವರ್ಷ ಆಗಿವೆ. ಸಿಡ್ನಿಯ ಮಧ್ಯಮವರ್ಗದ ಉಪನಗರ

ಬ್ಯಾಂಕ್ಸ್ ಟೌನ್ ಇಬ್ಬರ ನೆಚ್ಚಿನ ತವರು. ಅವರು ಆಡಿ ಬೆಳೆದ ಜಾರ್ಜಿಯಾ ನದಿಯ ದಂಡೆಯುದ್ದಕ್ಕೂ ಇವತ್ತು ನಾನಾ ರೀತಿಯ ಸ್ಮಾರಕಗಳು ಎದ್ದು ನಿಂತಿವೆ. ಅಣ್ಣ - ತಮ್ಮಂದಿರಿಗೆ ಒಂದೇ ರೀತಿಯ ಎರಡು ಮನೆ. ಅವರು ಓದಿದ ಈಸ್ಟ್ ಹಿಲ್ ಬಾಯ್ಸ್ ಸ್ಕೂಲ್‌ನ ಕ್ರಿಕೆಟ್ ಅಭ್ಯಾಸದ ಮೈದಾನಕ್ಕೆ ಅವರಿಬ್ಬರ ಹೆಸರು.

ಇವತ್ತು ಅವರಿಬ್ಬರು ಗಳಿಸಿದ ಹಣ ಊರಿಗೇ ಹಂಚುವಷ್ಟಿದೆ. ಒಂದು ಕಾಲಕ್ಕೆ ಅವನ ತಾಯಿಗೆ ಇಬ್ಬರ ಕ್ರಿಕೆಟ್ ಬ್ಯಾಟ್ ಖರೀದಿಸಲು ಪರದಾಡಬೇಕಾಗುತ್ತಿತ್ತು. ಗಂಡ ಇರಲಿಲ್ಲ. ಮನೆ ಕೊಳ್ಳಲು ಮಾಡಿದ ಸಾಲದ ಹೊರೆ. ಇವರಿಬ್ಬರಲ್ಲದೇ ಇನ್ನಿಬ್ಬರು ಮಕ್ಕಳು. ಸ್ಟೀವ್ ಮತ್ತು ಮಾರ್ಕ್‌ಗೆ ಏನು ಕೊಂಡರೂ ಒಟ್ಟೊಟ್ಟಿಗೆ ಒಂದೇ ರೀತಿಯದು ಎರಡೆರಡು ಕೊಳ್ಳಬೇಕು. ಹುಡುಗರಿಗೆ ಕ್ರಿಕೆಟ್‌ನಲ್ಲಿ ಅಭಿರುಚಿ ಅದರಲ್ಲೇ ಮುಂದಾದರೆ ಕನಿಷ್ಠ ರಾಜ್ಯಮಟ್ಟದ ಆಟಗಾರರಾದರೂ ಆದಾರು ಎಂದು ತಾಯಿಯ ಆಸೆ.


ಅಂಗವಿಕಲ ಜೋನಾ

ಯಾರಾದರೂ ಹುಡುಗರಿಗೆ ಬ್ಯಾಟು, ಸ್ಪಾನ್ಸರ್ ಮಾಡುವವರು ಸಿಗುತ್ತಾರೇನೋ! ಎಂದು ಸಣ್ಣ ಆಸೆ. ಎಲ್ಲ ಕಡೆ ನಿರಾಸೆ. ಸ್ಪೋರ್ಟ್ಸ್ ಅಂಗಡಿಯ ಒಬ್ಬನಂತೂ, ಬ್ಯಾಟ್ ಖರೀದಿಯಲ್ಲಿ ಕೊಂಚ ರಿಯಾಯಿತಿಯಾದರೂ ತೋರು ಎಂದದ್ದಕ್ಕೆ 'ನಿಮ್ಮ ಹುಡುಗರು ರಾಜ್ಯ ಕ್ರಿಕೆಟ್ ಆಟಗಾರರಾಗಲಿ ಆಮೇಲೆ ರಿಯಾಯಿತಿ ಕೊಡೋಣಂತೆ' ಎಂದು ಮುಖ ಮುರಿದ ಹಾಗೆ ಹೇಳಿದ್ದ.

ಇಂಥ ಪಡಿಪಾಟಲ ನಡುವೆ ಆ ತಾಯಿ ಮಕ್ಕಳನ್ನು ಬೆಳೆಸಿದಳು. ಸ್ಟೀವ್‌ಗೆ ಕೊಂಚ ಅಸಡ್ಡೆ ಜಾಸ್ತಿ. ಮಾರ್ಕ್ ಶಿಸ್ತುಗಾರ. ಅಣ್ಣ ಸ್ವಲ್ಪ ಗಿಡ್ಡ ಬೇರೆ. ತಲೆ ಸರಿಯಾಗಿ ಬಾಚುತ್ತಾ ಇರಲಿಲ್ಲ. ಬೆಳಿಗ್ಗೆ ಎದ್ದು ತಮ್ಮ ಶಿಸ್ತಾಗಿ ಶಾಲೆಗೆ ಹೊರಟು ನಿಂತರೆ, ಅಣ್ಣ ಕೊನೆ ಗಳಿಗೆಯಲ್ಲಿ ತಲೆ ಕೆದರಿಕೊಂಡು, ಅಸಡ್ಡಾಳ ಅಂಗಿ, ಪ್ಯಾಂಟ್ ತೊಟ್ಟು, ಹಲ್ಲು ಸರಿಯಾಗಿ ಉಜ್ಜದೇ ಓಡೋಡಿ ಬಂದು ತಮ್ಮನ ಜೊತೆ ಸೇರುತ್ತಾ ಇದ್ದ. ಆದರೆ ಸ್ಟೀವ್ ಮಹಾ ಕಿಡಿಗೇಡಿ. ಆದರೆ ದುಷ್ಟನಲ್ಲ. ಸದಾ ತಮಾಷೆ ಕೀಟಲೆ. ಇವನನ್ನು ನೋಡಿ ಮಾರ್ಕ್ ಕೂಡ ಹಾಗೇ ಮಾಡಲು ಹೋಗಿ ಪೆಚ್ಚಾಗಿ ಬಿಡುತ್ತಿದ್ದ.

ತಂಡದ ಆಟಗಾರರಲ್ಲಿ ಸ್ಫೂರ್ತಿ ಹುಟ್ಟಿಸುವ ಹಾಗೆ, ಜನರ ಬದುಕಿನಲ್ಲಿ ಆತ ಪವಾಡ ನಿರ್ಮಿಸಬಲ್ಲ ಎಂಟು ವರ್ಷದ ಹಿಂದೆ ಪರಿಚಯವಾದ ಎರಡೂ ಕಾಲಿಲ್ಲದ ಜೋನಾ ಈಗ ಆತನ ಆತ್ಮೀಯ ಗೆಳೆಯ. ಕಾಲೇ ಇಲ್ಲದ ಈತ ಎಷ್ಟೊಂದು ದೂರ ಕ್ರಿಕೆಟ್ ಬಾಲ್ ಎಸೆಯಬಲ್ಲ! ಎಂಬ ವಿಸ್ಮಯದಿಂದ ಅವನನ್ನು ಹಚ್ಚಿಕೊಂಡ. ಈಗ ಜೋನಾ ರೇಡಿಯೋ ಟಾಕ್ ನೀಡುತ್ತಾನೆ. ಪುಸ್ತಕ ಬರೆಯುತ್ತಾನೆ. ಸ್ಟೀವ್ ಆಡುವ ಮ್ಯಾಚುಗಳಲ್ಲೆಲ್ಲ ಪ್ರತ್ಯಕ್ಷದರ್ಶಿ ಆಗಿರುತ್ತಾನೆ.

ಒಮ್ಮೆ ಡೇವಿಡ್ ಬೂನ್‌ನ ಕ್ರಿಕೆಟ್ ಕಿಟ್‌ನೊಳಗೆ ಜೋನಾನ ಮಲಗಿಸಿ ತಮಾಷೆ ನೋಡಲು ನಿಂತ ಸ್ಟೀವ್. ಬೂನ್ ಜಿಪ್ ಎಳೆದರೆ ಅದರಿಂದ ಜೋನಾ ಬುದಂಗನೆ ಎದ್ದು ಕುಳಿತಿದ್ದೇ, ಅವನು ಬೆಚ್ಚಿದ ರೀತಿಯಿಂದ ಉಳಿದವರು ಬಿದ್ದು ಬಿದ್ದು ನಗುತ್ತಾ ಇದ್ದರು.

ಇತ್ತೀಚೆಗೆ ವೆಸ್ಟಿಂಡೀಸ್ ಪ್ರವಾಸಕ್ಕೂ ಸ್ಟೀವ್ ಜೊತೆ ಜೋನಾ ಹೋಗಿದ್ದ. ಕಾಲಿಲ್ಲದ ಅವನನ್ನು ಹೆಗಲ ಮೇಲೆ ಸವಾರಿ ಮಾಡಿಸಿಕೊಂಡು ಕಡಲ ದಂಡೆಯಲ್ಲಿ ಹೊರಟರೆ ಜನ ವಿಸ್ಮಯದಿಂದ ನೋಡುತ್ತಿದ್ದರು. 'ಏನಾಯಿತು?' ಎಂದು ಯಾರಾದರೂ ಕುತೂಹಲದಿಂದ ಕೇಳಿದರೆ 'ಅವನ ಎರಡೂ ಕಾಲುಗಳು ಶಾರ್ಕ್ ಮೀನುಗಳು ತಿಂದು ಹಾಕಿದವು' ಎಂದು ಸ್ಟೀವ್ ಬುರುಡೆ ಹೊಡೆದು ಇನ್ನಷ್ಟು ವಿಸ್ಮಯ ಹುಟ್ಟಿಸುತ್ತಿದ್ದ.

ಸದಾ ಮುಖ ಗಂಟಿಕ್ಕಿಕೊಂಡೇ ಇರುವಂತೆ ಕಾಣುವ ಸ್ಟೀವ್ ಆಟದಲ್ಲಿ ತನ್ಮಯತೆ ಬೇಕು. ಆಗ ಮಾತಿಗಿಂತ ಕೃತಿ ಮುಖ್ಯ ಎನ್ನುತ್ತಾನೆ. ಈಚೆಗೆ ವಿಶ್ವಕಪ್ ಹಾಗೂ ತ್ರಿಕೋನ ಸರಣಿ ಪಂದ್ಯಗಳನ್ನು ಗೆದ್ದು ಮತ್ತಷ್ಟು ದೊಡ್ಡ ಹೀರೋ ಎನಿಸಿಕೊಂಡಿರುವ ಸ್ಟೀವ್‌ಗೆ ಬಡತನ ಗೊತ್ತು. ಮುಖ್ಯ ಮನುಷ್ಯನ ಕಷ್ಟ, ಯಾತನೆಗಳು ಗೊತ್ತು.

■ ಸುಹಾಸ.

## ರೂಮು ಮತ್ತು ವ್ಯಕ್ತಿ

ದಲಿತ ಕವಿಯೊಬ್ಬರ ಕವನ ಸಂಕಲನ ಇತ್ತೀಚೆಗೆ ಪ್ರಕಟ ಆಯಿತು. ಪುಸ್ತಕ ಬಿಡುಗಡೆ ಮಾಡಿ ಮಾತಾಡಿದವರು ಇನ್ನೊಬ್ಬ 'ಖ್ಯಾತ' ಕವಿ. ಸಂಗ್ರಹದಲ್ಲಿ ಬಂಡಾಯ ಸಾಹಿತಿಯೊಬ್ಬರಿಗೆ ನಲವತ್ತು ತುಂಬಿದ ಸಂದರ್ಭದಲ್ಲಿ ಬರೆದ ಕವನ ಬಂದಿದೆ. ಕವನಕ್ಕೆ ಸಾಹಿತಿಯ ಇನಿಷಿಯಲ್‌ಗಳನ್ನೇ ಇಡಲಾಗಿತ್ತು. 'ಖ್ಯಾತ' ಕವಿಗಳು ಅದನ್ನು ಶಾಸಕರ ಭವನದ ನಲವತ್ತನೇ ರೂಮಿನ ಕುರಿತಾದ ಕವಿತೆ ಎಂದು, ಒಂದು ಕಾಲಕ್ಕೆ ಅಲ್ಲಿರುತ್ತಿದ್ದ ಸಿದ್ದಲಿಂಗಯ್ಯನವರ ಲೀಲೆಗಳಿಗೆ ಅದು ಸಂಬಂಧಿಸಿದ್ದೆಂದು ವಿವರಿಸುತ್ತಾ ಇದ್ದಾಗ, ಪ್ರೇಕ್ಷಕರಾಗಿದ್ದ ಲೇಖಕರ ಗೆಳೆಯರು ಮುಸಿ ಮುಸಿ ನಗುತ್ತಾ ಇದ್ದರು.

## ಭೇಟಿಯಾಗುವ ಚಟ

ಧಾರವಾಡದ ಉದಯೋನ್ಮುಖ ಕವಿಯೊಬ್ಬರಿಗೆ ಪ್ರಸಿದ್ಧ ಸಾಹಿತಿಗಳನ್ನು ಕಂಡು ಮಾತಾಡಿಸುವ ಹುಚ್ಚು. ಹಾಗೆ ಮಾತಾಡಿಸಿದರೆ ತಮ್ಮ ಜನ್ಮ ಸಾರ್ಥಕವಾದ ಭಾವದಲ್ಲಿ ಅವರು ಇರುತ್ತಿದ್ದರು. ಇದನ್ನು ಗೊತ್ತಿದ್ದ ಸಾಹಿತಿ ಮಿತ್ರ ತರಲೆಗಳು ಅವರನ್ನು ಗೋಳು ಹುಯ್ದುಕೊಳ್ಳುತ್ತಿದ್ದರು.

ಧಾರವಾಡದಲ್ಲಿ ಒಂದು ಕಲ್ಲು ಎಸೆದರೆ ಅದು ಯಾವನಾದರೊಬ್ಬ ಕವಿಯ ತಲೆಯ ಮೇಲೆಯೇ ಬೀಳುತ್ತದೆ ಎಂಬ ರೂಢಿ ಮಾತಿದೆ. ಇಂಥ ಊರ ಸಾಹಿತಿಗಳು ಬೇಡ. ದೂರದ ಬೆಂಗಳೂರು, ಮುಂಬಯಿ ಸಾಹಿತಿಗಳು ಎಂದರೆ ಉದಯೋನ್ಮುಖರು ಬಾಯಿ ಬಿಡುತ್ತಾ ಇದ್ದರು. ಸಾಹಿತಿ ಮಿತ್ರ ತರಲೆಗಳು ಜೊತೆ ಸೇರಿ ಮಾತಾಡುತ್ತಾ ನಿಂತಾಗ, ಇದ್ದಕ್ಕಿದ್ದ ಹಾಗೆ,

'ಅರೇ! ನಮ್ಮ ಎದುರಾಗೇ ಶಾಂತಿನಾಥ ದೇಸಾಯಿ ಹೋದರು ನೋಡ. ಮೊದಲೇ ಹಿಂಗಂತ ಗೊತ್ತಿದ್ದರೆ ಮಾತಾಡಿಸಾಕ ಬರ್ತಿತ್ತು' ಎಂದು ಲೊಚಗುಟ್ಟುತ್ತಿದ್ದರು.
'ಅರೇ! ಖರೇನೇ ಹೌದೇನು! ದೇಸಾಯರs'

'ಹೌದು ನೋಡs. ಅಲ್ಲೇ ಹೋಗುತ್ತಾ ಅದಾರ ನೋಡು. ಟೊಪಗಿ ಹಾಕಿ, ಛತ್ರಿ ಹಿಡಿದು ಹೊಂಟಾರಲ್ಲ ಅವರ ಮಗ್ಗುಲಾಗೇ ಹೊಂಟಾರ ನೋಡ...' ಎನ್ನುತ್ತಿದ್ದಂತೆ ಬಿಲ್ಲಿನಿಂದ ಬಿಟ್ಟ ಬಾಣದಂತೆ ಈ ಉದಯೋನ್ಮುಖ ಓಡುತ್ತಿದ್ದ. ಅವರು ಎಷ್ಟೇ ದೂರ ಇರಲಿ ಬಿಡುತ್ತಿರಲಿಲ್ಲ. ಕೊನೆಗೆ ಪೆಚ್ಚು ಮೋರೆ ಹಾಕಿ ಹಿಂದಿರುಗುತ್ತಿದ್ದ. ಆಗಲೂ ತರಲೆ ಮಿತ್ರರು ಹೇಳುತ್ತಿದ್ದರು.

'ನೀ ಖರೇ ಅವರ ಜೋಡಿ ಮಾತಾಡಿಯೋ, ಇನ್ಯಾರ ಜೋಡೀನೋ?'

'ನಮ್ಮವ್ವನಾಣೆ. ನೀವಂದ್ರಲ್ಲ ಟೊಪಿಗೆ ಹಾಕಿದವರ ಮಗ್ಗುಲಾಗೇ ಅಂತ ಅವರನ್ನೇ....'

'ನೀ ಎಲ್ಲೋ ತಪ್ಪುಗಂಟು ಮಾಡಿಕೊಂಡೀ ಬಿಡು' ಎಂದು ದಬಾಯಿಸಿ ಮಜಾ ತೆಗೆದುಕೊಳ್ಳುತ್ತಾ ಇದ್ದರೇ ಹೊರತು ಗುಟ್ಟು ಬಿಟ್ಟುಕೊಡುತ್ತಾ ಇರಲಿಲ್ಲ. ■

# ಸೊಳ್ಳೆಗಳು ನಿಮ್ಮತ್ತ ಆಕರ್ಷಿಸಲ್ಪಡುತ್ತಿವೆಯೆ?



**ಸೊಳ್ಳೆಗಳಿಗೂ ತಾವು ಯಾರನ್ನು ಕಚ್ಚಬೇಕೆಂಬ ಪರಿಜ್ಞಾನ ಇದೆ. ಮನುಷ್ಯರ ವಾಸನೆ, ಅವರ ದೇಹದ ರೋಗಗಳು ಎಲ್ಲ ಗಮನಿಸಿಯೇ ಸೊಳ್ಳೆಗಳು ದಾಳಿ ನಡೆಸುತ್ತವೆ. ಆದ್ದರಿಂದಲೇ ಕೆಲವರು ಸೊಳ್ಳೆ ಕಡಿತಕ್ಕೆ ಗುರಿಯಾದರೆ ಇನ್ನು ಕೆಲವರು ಪಾರಾಗುತ್ತಾರೆ.**

ನಮ್ಮ ಕಿವಿಯ ಸಮೀಪವೇ ಸೊಳ್ಳೆಗಳು ಮಾಡುವ 'ಗುಂಯ್' ಶಬ್ದವನ್ನು ಮೆಚ್ಚಿಕೊಳ್ಳುವ ಮಂದಿಯೇ ಇಲ್ಲ ಸೊಳ್ಳೆಗಳು ಮನುಷ್ಯರನ್ನು ಸಂಪರ್ಕಿಸುವುದು ರಕ್ತಹೀರುವುದಕ್ಕಾಗಿಯೇ. ಒಂದೇ ಕೋಣೆಯಲ್ಲಿ ರಾತ್ರಿ ಮಲಗಿದ್ದ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬನು ವಿಪರೀತ ಸೊಳ್ಳೆ ಕಡಿತಕ್ಕೊಳಗಾಗಿದ್ದು ಇನ್ನೊಬ್ಬನನ್ನು ಸೊಳ್ಳೆಗಳು ಬಾಧಿಸದಿರುವುದು ಸಾಧ್ಯವೇ? ಸಾಧ್ಯ. ಎಂಬುದು ವಿಜ್ಞಾನಿಗಳ ಅಭಿಪ್ರಾಯ. ಇದಕ್ಕೆ ಕಾರಣಗಳೂ ಇವೆ.

ಸೊಳ್ಳೆಗಳು ನಿಮ್ಮನ್ನು ಇತರರಿಗಿಂತ ಹೆಚ್ಚಾಗಿ ಇಷ್ಟಪಟ್ಟು ನಿಮ್ಮತ್ತ ದಾಳಿ ಇಡುತ್ತವೆ ಎಂಬ ನಂಬಿಕೆ ನಿಮಗುಂಟಾಗಿದ್ದರೆ ನಿಮ್ಮ ನಂಬಿಕೆ ಸರಿ. ಚಿಕ್ಕಗಾತ್ರದ ಈ ರಕ್ತಪಿಪಾಸುಗಳು ವ್ಯಕ್ತಿಯನ್ನು ಆಯ್ಕೆ ಮಾಡುತ್ತವೆಯೆಂದು ಸಂಶೋಧನೆಗಳಿಂದ ತಿಳಿದು ಬಂದಿದೆ. ಸೊಳ್ಳೆಗಳ ಆಕರ್ಷಣೆ ಎಲ್ಲಾ ವ್ಯಕ್ತಿಗಳ ಕಡೆ ಒಂದೇ ರೀತಿಯಾಗಿರುವುದಿಲ್ಲ. ಮೊಟ್ಟೆಯಿಡುವುದಕ್ಕೆ ಅವಶ್ಯಕವಾದ ರಕ್ತದೌತಣಕ್ಕೆ ಅತ್ಯುತ್ತಮ ಅತಿಥೇಯನನ್ನು ಆಯ್ಕೆಮಾಡುವ ತಮ್ಮ ಸಾಮರ್ಥ್ಯದಿಂದಾಗಿಯೇ ಸೊಳ್ಳೆಗಳು ವಿಕಸನಗೊಂಡು, ಬದುಕುಳಿದು, ಅಭಿವೃದ್ಧಿಹೊಂದಿವೆ ಎಂದು ವಿಜ್ಞಾನಿಗಳ ಅಭಿಪ್ರಾಯ.

ಸೊಳ್ಳೆಗಳು ಅತಿಥೇಯನನ್ನು ಅತಿಸೂಕ್ಷ್ಮ ವಾಸನಾಶಕ್ತಿಯಿಂದಲೇ ಆಯ್ಕೆ ಮಾಡುತ್ತವೆ. ಕೇವಲ ಉಸಿರಾಟದಿಂದ ಮನುಷ್ಯ ಸೊಳ್ಳೆಗಳನ್ನು ತನ್ನತ್ತ ಆಕರ್ಷಿಸಿಕೊಳ್ಳುತ್ತಾನೆ. ಉಸಿರಾಟದಲ್ಲಿ ಹೊರಬರುವ ಅಂಗಾರಾಮ್ಲ ಮತ್ತು ಇತರ ವಾಸನೆಗಳು ಗಾಳಿಯ ಪ್ರವಾಹದಲ್ಲಿ ಸಂಚರಿಸುತ್ತವೆ. ಈ ವಾಸನೆ ಸೊಳ್ಳೆಗಳಿಗೆ ಔತಣಕ್ಕೆ ಕರೆನೀಡುವ ಕರೆಗಂಟೆ. ಬಿಸಿ ರಕ್ತದ ಪ್ರಾಣಿಯೊಂದು ಸಮೀಪದಲ್ಲಿದೆ ಎಂದು ಅವು ತಿಳಿದುಕೊಳ್ಳುತ್ತವೆ. ವಾಸನೆ ಬರುವ ದಿಕ್ಕಿನತ್ತ ಅಂಕುಡೊಂಕಾಗಿ ಹಾರಾಡುತ್ತಾ ವ್ಯಕ್ತಿಯನ್ನು ಸಮೀಪಿಸುತ್ತವೆ. ವ್ಯಕ್ತಿಯನ್ನು ಸಮೀಪಿಸಿದಾಗ ಅವು ಆಯ್ಕೆಗಾಗಿ ದೃಷ್ಟಿ ಮತ್ತು ಉಷ್ಣತೆಯನ್ನು ಉಪಯೋಗಿಸಿಕೊಳ್ಳುತ್ತವೆ. ಸೊಳ್ಳೆಗಳು ರಕ್ತಹೀರುವ 8 ರಿಂದ 10 ಸೆಕೆಂಡುಗಳಷ್ಟು ಅವಧಿಯಲ್ಲಿ ಅವು ಜಜ್ಜಹೋಗದಂತೆ ಅತೀ ಕಡಿಮೆ ಅಪಾಯವಿರುವ ಸುರಕ್ಷಿತ ಜಾಗವನ್ನೇ ರಕ್ತ ಹೀರಲು ಆರಿಸಿಕೊಳ್ಳುತ್ತವೆ.

**ಸೊಳ್ಳೆಗೆ ಆಕರ್ಷಕ ಎನಿಸುವ ವ್ಯಕ್ತಿಗಳು ಯಾರು? :** ಸೊಳ್ಳೆಗಳು ವಾಸನೆಯಿಂದಲೇ ಆಕರ್ಷಿಸಲ್ಪಡುತ್ತವೆ. ಬೆವರಿನೊಂದಿಗೆ ಬ್ಯಾಕ್ಟೀರಿಯಾಗಳು ಬೆಳೆಯುತ್ತಾ ಬಂದಂತೆ ಚರ್ಮ ಸೊಳ್ಳೆಗಳಿಗೆ ಹೆಚ್ಚು ಆಕರ್ಷಕವಾಗುತ್ತದೆ. ಚರ್ಮದ ರಕ್ಷಣೆಗಾಗಿ ಉಪಯೋಗಿಸುವ ಪ್ರಸಾದನಗಳೂ ಸೊಳ್ಳೆಗಳನ್ನು ಆಕರ್ಷಿಸುತ್ತವೆ. ಸೌಂದರ್ಯವರ್ಧಕಗಳ ವಾಸನೆ ಸೊಳ್ಳೆ ವಿಕರ್ಷಕ ಕ್ರೀಮ್‌ಗಳ ವಾಸನೆಗಿಂತ ಹೆಚ್ಚು ಕಾಲ ಚರ್ಮದಲ್ಲಿ ಉಳಿಯುತ್ತದೆ. ಹೃದಯ ಮತ್ತು ರಕ್ತದೊತ್ತಡಗಳಿಗಾಗಿ ಸೇವಿಸುವ ಔಷಧಿಗಳೂ ಸೊಳ್ಳೆಗಳ ಆಕರ್ಷಣೆಯ ಮೇಲೆ ಪರಿಣಾಮ ಬೀರಬಲ್ಲವು ಎಂದು ಸಂಶೋಧಕರ ಅಭಿಪ್ರಾಯ.

ಸೊಳ್ಳೆಗಳು ಹಲವು ಸಾಂಕ್ರಾಮಿಕ ರೋಗಗಳ ಹರಡುವಿಕೆಗೆ ಕಾರಣ. ಪ್ರತಿ ಸಾವಿರದಲ್ಲಿ ಒಂದು ಸೊಳ್ಳೆ ರೋಗಾಣುಗಳನ್ನು ಹೊಂದಿರಬಹುದು. ಸೊಳ್ಳೆಗಳಿಗೆ ಆಕರ್ಷಣೆಯುಳ್ಳ ವ್ಯಕ್ತಿಗಳು ರೋಗ ಪೀಡಿತರಾಗುವ ಸಂದರ್ಭಗಳು ಅಧಿಕ.

ಸೊಳ್ಳೆಗಳಿಗೆ ಕಡಿಮೆ ಆಕರ್ಷಣೆಯುಳ್ಳ ವ್ಯಕ್ತಿ ರೋಗಾಣುಗಳಿಂದ ತಪ್ಪಿಸಿಕೊಳ್ಳಬಹುದು. ಹೆಚ್ಚು ಆಕರ್ಷಣೆಯುಳ್ಳ ವ್ಯಕ್ತಿಗಳು ರೋಗಕ್ಕೀಡಾಗಬಹುದು. ಸೊಳ್ಳೆಬಾಧೆಯಿರುವ ಪ್ರದೇಶಗಳಲ್ಲಿ ಸಂಚರಿಸುವಾಗ ಇಂತಹ ವ್ಯಕ್ತಿಗಳು ರಕ್ಷಣಾ ವಿಧಾನ ಅನುಸರಿಸುವುದು ಉತ್ತಮ.

■ ಪಿ.ಎಸ್.ರೈ

---

## ವಿಮಾನ ಬಿಟ್ಟ ಲೇಖಕಿ !

ಅವರೊಬ್ಬರು ಪ್ರಸಿದ್ಧ ಕಾದಂಬರಿಕಾರ್ತಿ. ಯಾವುದೇ ವಿಷಯ ಕುರಿತಾದರೂ ಕಾದಂಬರಿ ಬರೆಯಬಲ್ಲವರು. ಅವರು ಲೆಕ್ಕವಿಲ್ಲದಷ್ಟು ಕಾದಂಬರಿ ಬರೆದು ಜನಪ್ರಿಯರೂ ಆಗಿಬಿಟ್ಟಿದ್ದಾರೆ. ಒಮ್ಮೆ ಪತ್ರಿಕೆಯೊಂದು ಅವರಿಂದ ಕಾದಂಬರಿ ಕೋರಿ ಪತ್ರ ಬರೆಯಿತು. ವಿಮಾನ ಸಿಬ್ಬಂದಿಯ ಜೀವನ ಕುರಿತಾದ ಕಾದಂಬರಿ ಆದರೆ ಒಳ್ಳೆಯದು ಎಂದೂ ಸಂಪಾದಕರು ಸೂಚಿಸಿದ್ದರು.

ಕೆಲವೇ ದಿನದಲ್ಲಿ ಕಾದಂಬರಿ ಬರೆದೂ ಆಯಿತು. ಪತ್ರಿಕೆಯಲ್ಲಿ ಅಚ್ಚೂ ಆಯಿತು. ವಿಮಾನವನ್ನು ಹತ್ತಿರದಿಂದ ಕೂಡ ನೋಡಿರದಿದ್ದ ಇವರು ಬರೆದ ಕಾದಂಬರಿಯನ್ನು ಓದಿ ಎಲ್ಲ ನಿಬ್ಬೆರಗಾದರು. ಏಕೆಂದರೆ ಒಂದಷ್ಟು ಜನಕ್ಕೆ ವಿಮಾನ ಗೊತ್ತೇ ಇರುವುದಿಲ್ಲ. ಉಳಿದವರಿಗೆ ವಿಮಾನ ಚೆನ್ನಾಗಿ ತಿಳಿದಿರುತ್ತದೆ.

'ರೈಲು ಬಿಡುವುದು' ಎಂಬ ಮಾತಿದೆ. ಆದರೆ ಈ ಲೇಖಕಿ ವಿಮಾನ ಬಿಟ್ಟು ಹಲವರ ಮುಸಿ ಮುಸಿ ನಗೆಗೆ ಕಾರಣವಾದರು. ■

ಕಥೆ

# ಪದ್ಮಿನಿ ಪ್ರಕರಣ



**ಶುರುವಿಗೆ ಅದೊಂದು ಮಾಮೂಲೀ ಪ್ರೇಮ ಪ್ರಕರಣವಾಗಿತ್ತು. ಹುಡುಗಿ-ಹುಡುಗ ಸಂಧಿಸಿದರು. ಆತ್ಮೀಯರಾದರು. ಒಂದಿಷ್ಟು ತಮಾಷೆಯೂ ಬೇಕೆನ್ನಿಸಿತು ಆ ಹುಡುಗಿಗೆ. ಆಗ ಹುಟ್ಟಿಕೊಂಡಿತು ನೋಡಿ....**

**ಪ**ದ್ಮಿನಿ ಶುದ್ಧ ತರಲೆ. ಇದು ರಾಕೇಶನಿಗೂ ಇಷ್ಟ. ಅಂಥ ತರಲೆ ಇಲ್ಲದೇ ಇದ್ದಿದ್ದರೆ ಅವಳ ಪರಿಚಯವೇ ಆಗುತ್ತಾ ಇರಲಿಲ್ಲ. ಮುಂಬಯಿಯಲ್ಲಿ ಫ್ಲ್ಯಾಟ್ ಹಿಡಿದು, ಅಗತ್ಯ ವಸ್ತುಗಳನ್ನು ಹೊಂದಿಸುತ್ತಾ ಇದ್ದಾಗಲೇ ಅವಳು ಕಂಡದ್ದು. ಡಿಪಾರ್ಟ್‌ಮೆಂಟ್ ಸ್ಟೋರಿನಲ್ಲಿ ಏನು ಖರೀದಿಸಬೇಕೆಂದು ತಿಳಿಯದೇ ಪೇಚಾಡುತ್ತಾ ನಿಂತಾಗ 'ಮೇ ಐ ಹೆಲ್ಪ್ ಯೂ?' ಎಂದು ನೆರವಿಗೆ ಬಂದಿದ್ದಳು. ತನಗೆ ಏನು ಬೇಕಿದೆ? ಎಷ್ಟು ಬೇಕಿದೆ? ಎಂದು ತಿಳಿಯದು. ಅದೆಲ್ಲ ಹೊಂದಿಸಿ ಖರೀದಿಸಲು ನೆರವಾಗಬೇಕು ಎಂದಿದ್ದ. ಆಕೆ ಡಿಪಾರ್ಟ್‌ಮೆಂಟ್ ಸ್ಟೋರ್‌ನಲ್ಲಿ ಕೆಲಸ ಮಾಡುವ ಹುಡುಗಿ ಇರಬೇಕು ಅಂದುಕೊಂಡಿದ್ದ.

ಖರೀದಿ ಮುಗಿಸಿ, ಜತನವಾಗಿ ಪ್ಲ್ಯಾಸ್ಟಿಕ್ ಬ್ಯಾಗಿಗೆ ತುಂಬಿದ ವಸ್ತುಗಳನ್ನು ಚೌಕೀದಾರ ತಂದು ಕಾರಲ್ಲಿ ಇಡುವಾಗಲೂ ಅವಳು ಜೊತೆಗೇ ಬಂದಿದ್ದಳು. ಮಾತು ಮಾತು ಮಾತು. ಅವನ ಹೌದು, ಇಲ್ಲ ಎಂಬಂಥ ಎರಡೆರಡೇ ಅಕ್ಷರದ ಪದಗಳ ಮೂಲಕವೇ ಅವನು ಒಂಟಿ. ಕಾರ್ಪೋರೇಟ್ ಆಫೀಸಲ್ಲಿ ಭಾರೀ ಸಂಬಳದ ಕೆಲಸ. ಮದುವೆಯಾಗಿಲ್ಲ. ತಾಯಿ ದೂರ ಇದ್ದಾರೆ. ಅವರ್‍ಯಾರೂ ಇಲ್ಲಿ ಬರುವಂತೆ ಇಲ್ಲ ಎಂಬುದೆಲ್ಲ ಗ್ರಹಿಸಿಬಿಟ್ಟಿದ್ದಳು.

ಕಾರಿನ ವ್ಹೀಲ್ ಹಿಡಿದು ಮುಗುಳ್ನಗೆ ಚೆಲ್ಲಿ, 'ಥ್ಯಾಂಕ್ಸ್' ಎಂದು ಮುಜುಗರಿಸುತ್ತಲೇ ಹೊರಡಲನುವಾದ ಗಳಿಗೆ 'ಬರೀ ಒಂದು ಥ್ಯಾಂಕ್ಸ್‌ನಿಂದ ಮುಗಿಸಿಬಿಡುತ್ತೀರಾ? ಒಂದು ಐಸ್ ಕ್ರೀಂ ಕೂಡ ಇಲ್ಲವಾ?' ಎಂದು ಮೋಹಕವಾಗಿ ಕತ್ತು ಬಗೆದು, ಅವನು ಉತ್ತರ ಹೇಳುವ ಮುನ್ನವೇ ಕಾರಿನ ಡೋರ್ ತೆಗೆದು ಒಳಗೆ ಕುಳಿತು 'ಎರಡು ಬೀದಿಯಾಚೆ ಬಾಸ್ಕಿನ್ ಕಾಲಿನ್ಸ್ ಮಳಿಗೆ ಇದೆ' ಎಂದ ಮೇಲೇ ಅವಳು ಅಂಗಡಿಯಲ್ಲಿ ದುಡಿಯುವವಳಲ್ಲ ತನ್ನ ಹಾಗೆ ಖರೀದಿಗೆ ಬಂದಿದ್ದವಳು ಎಂಬುದು ತಿಳಿದಿದ್ದು. ಅಂಥ ಹುಡುಗಿ ತನ್ನನ್ನು ಇಂಥ ಪೇಚಿಗೆ ಸಿಕ್ಕಿಸಿದಳೇ ಎಂದುಕೊಂಡ ರಾಕೇಶ್.

★

ಹಾಗೆ ನೋಡಿದರೆ ಆ ಪೇಚು ಕೂಡ ಮೊದಲು ಗಮನಕ್ಕೆ ಬಂದಾಗ ಒಂದು ರೀತಿಯ ಖುಷಿಯಾಗಿತ್ತು. ಒಂದೇ ಕಲ್ಲಿನಿಂದ ಎರಡು ಹಕ್ಕಿ ಹೊಡೆಯುವುದು ಯಾರಿಗೆ ಬೇಡ!

ಈ ಒಂದು ವರ್ಷದಲ್ಲಿ ಗಾಢವಾದ ಸ್ನೇಹ, ಯಾರೊಂದಿಗೆ? ಎಂಬುದು ನಿಖರವಾಗಿ ತಿಳಿಯದೇ ಗಲಿಬಿಲಿ. ಅದು ಹೇಗೆ ತಿಳಿದುಕೊಂಡಳೋ? ಮುಂಜಾನೆಯೇ ಫೋನ್ ಮಾಡಿ 'ಇವತ್ತು ಮಹಾಲಕ್ಷ್ಮಿಯ ಸಿದ್ಧಿ ವಿನಾಯಕ ಮಂದಿರಕ್ಕೆ ಹೋಗಬೇಕು. ನನಗೆ ಬೇಕಾದವರೊಬ್ಬರ ಪರವಾಗಿ ಪೂಜೆ ಸಲ್ಲಿಸಲೇಬೇಕಿದೆ' ಎಂದು ಹಟ ಮಾಡಿ ಹೊರಡಿಸಿಯೇ ಬಿಟ್ಟಳು. ವಿಶೇಷ ಪೂಜೆ ಮುಗಿದು 'ಯಾರಿಗಾಗಿ ಈ ಪೂಜೆಯೆಲ್ಲ?' ಎಂದು ಕೇಳಿದೊಡನೆ ಘೊಳ್ಳಂತ ನಕ್ಕು 'ಅಯ್ಯೋ ಪೆದ್ದಣ್ಣ. ಇವತ್ತು ನಿಮ್ಮ ಬರ್ತ್‌ಡೇ ಅಲ್ಲವೇ?' ಎಂದಿದ್ದಳು.

ಅವತ್ತು ಜೊತೆಯಲ್ಲಿ ನಿಂತವಳು, ನಕ್ಕವಳು, ಮಹಾಲಕ್ಷ್ಮಿಯ ಸಮುದ್ರ ದಂಡೆಯ ಕೊರಕಲುಗಳಲ್ಲಿ ಸಂಜೆಯವರೆಗೂ ಕುಳಿತು ಹರಟಿದವಳು ನಿಜಕ್ಕೂ ಪದ್ಮಿನಿಯೇ?

★

ಇರಬಹುದು. ಆದರೆ ಎಲಿಫಂಟಾ ಗುಹೆಗಳಿಗೆ ಹೋಗುವಾಗ ಮಾತ್ರ ಕಂಡೂ ಕಾಣದ ಹಾಗಿದ್ದ ವ್ಯತ್ಯಾಸ. ಅವತ್ತು ಮಾತ್ರ ಏನೂ ಅನ್ನಿಸಿಯೇ ಇರಲಿಲ್ಲ. ಪದ್ಮಿನಿ ಎಂದಿನ ಹಾಗೆ ಇಲ್ಲ ಎನಿಸುವಷ್ಟು ಗಂಭೀರ. ಪರಶಿವನ ತ್ರಿಮೂರ್ತಿಯ ವಿಗ್ರಹದ ಎದುರು ನಿಂತ ವೇಳೆ ಯೋಚನೆಗೆ ಬಿದ್ದ ಹಾಗೆ ಕಂಡಿದ್ದಳು.

ಅಂಥ ವ್ಯತ್ಯಾಸವೆಲ್ಲ ಈಗ ಕುಳಿತು ಯೋಚಿಸುವಾಗ ಗಮನಕ್ಕೆ ಬರುವ ಸಂಗತಿಗಳು. ಅವಕ್ಕೇ ತಾನು ಸಣ್ಣದೊಂದು ಪ್ರಶ್ನೆ ಕೇಳಿದ್ದರೆ?

'ಯಾಕೆ ಹೀಗೆ ಉದಾಸವಾಗಿದ್ದೀಯ ಪದ್ಮಿನಿ?' ಎಂದಿದ್ದರೆ ಎಲ್ಲ ತಿಳಿದುಬಿಡುತ್ತಾ ಇತ್ತೋ ಏನೋ! ಎಲ್ಲ ಹಾಗಾಗಿದ್ದಾರೆ! ಹೀಗೆ ಆಗಿದ್ದರೆ!

ಎಂಬ 'ರೇ' ಪ್ರಪಂಚ.

★

ನಿತ್ಯವೆಂಬಂತೆ ಫೋನ್‌ನಲ್ಲಿ ಮಾತಾಡುವಾಗ, ತಾನು ನಿಜವಾಗಿಯೂ ಮಾತಾಡುತ್ತಾ ಇದ್ದುದು ಪದ್ಮಿನಿಯ ಜೊತೆ ಅಲ್ಲ. ಎಂಬುದು ಈಗ ಮನದಟ್ಟಾಗುವಾಗ ಸಣ್ಣಗೆ ಕಾಡುವ ಕಸಿವಿಸಿ 'ಯಾಕೆ ಸರಿಯಾಗಿ ಮಾತಾಡುತ್ತ ಇಲ್ಲ ಎಂದಿನ ಹಾಗೆ? ಏನಾಯಿತು ನನ್ನ ಪದ್ಮಿನಿಗೆ? ಎಂದು ಪುಸಲಾಯಿಸುವ ದನಿಯಲ್ಲಿ ಕೇಳಿದ್ದಾಗಲೂ ದೀರ್ಘವಾದೊಂದು ನಿಟ್ಟುಸಿರೇ ಉತ್ತರವಾಗಿರುತ್ತಿತ್ತು. ಅದು ಪದ್ಮಿನಿಯ ನಿಟ್ಟುಸಿರಲ್ಲ ಎಂಬುದು ತಿಳಿಯಲೇ ಇಲ್ಲ. ಮರುದಿನ ಎಂದಿನಂತೆ ತಾನಾಗಿಯೇ ಫೋನ್ ಮಾಡಿ 'ಸ್ಸಾರಿ, ಸ್ಸಾರಿ ನಿನ್ನೆ ಹೇಗೋ ಹೇಗೋ ಮಾತಾಡಿಬಿಟ್ಟೆ, ನಿಮಗೆ ಬೇಸರಾಯಿತೋ ಏನೋ?' ಎಂದೆಲ್ಲ ಹರಟಲು ಶುರುವಿಟ್ಟುಕೊಂಡು, ನಿನ್ನೆಯ ಪದ್ಮಿನಿ ಇದಲ್ಲವೇ ಅಲ್ಲ ಅನಿಸುತ್ತಾ ಇದ್ದರೂ, ಆಕೆಯ ಮೂಡ್‌ಗಳ ಸ್ವಿಂಗ್ ಹಾಗಿರಬೇಕು. ಇದ್ದಕ್ಕಿದ್ದ ಹಾಗೆ ಮೌನವಾಗುವುದು, ಮರುಕ್ಷಣ ತನ್ನ ಎಲ್ಲ ಜೀವ ಚೈತನ್ಯ ತುಂಬಿ ಪುಟಿಯುವುದು ಅವಳ ಸ್ವಭಾವವಿರಬೇಕು ಅಂದಕೊಂಡಿದ್ದ ರಾಕೇಶ್.

ಕೊನೆಗೂ ಅದು ಪತ್ತೆಯಾದದ್ದು ಅನಿರೀಕ್ಷಿತವಾಗಿ. ಮಹೀಂನ ಹಿಂದೂಜಾ ಆಸ್ಪತ್ರೆಯ ಮಗ್ಗುಲಲ್ಲೇ ನಡೆಯುತ್ತಾ, ಸಿಟಿಲೈಟ್ಸ್ ಸಿನಿಮಾದ ಮಗ್ಗುಲಲ್ಲಿ ನಡೆಯುತ್ತಾ ಬಾಂದ್ರಾದ ಸಮುದ್ರ ಕಿನಾರೆಗೆ ಹೋಗುವ ವಿಷಯದ ಪ್ರಸ್ತಾಪಿಸಿದಾಗಲೇ ಅವಳು ಮುಖ ಕಿವುಚಿದ್ದಳು. ಆದರೂ ಕತ್ತಲಾಗುತ್ತಿದ್ದ ವೇಳೆ ಬ್ಯಾಂಡ್ ಸ್ಟ್ಯಾಂಡಿನ ಕಿನಾರೆಯಲ್ಲಿ ಕಗ್ಗಲ್ಲ ಕೊರಕಲು ನಡುವೆ ಕುಳಿತು ಕೈ ಹಿಡಿದು ನೇವರಿಸುತ್ತ ಹತ್ತಿರಕ್ಕೆಳೆದುಕೊಂಡ ಗಳಿಗೆ 'ನೋ...:.' ಎಂದು ಚೀರಿದ ರೀತಿಯಿಂದಲೇ ರಾಕೇಶ್‌ನಿಗೆ ಬೆಚ್ಚಿ ಬೀಳುವಂತಾಗಿತ್ತು.

ಪದ್ಮಿನಿ ಹೀಗೇಕೆ ಮಾಡಿದಳು. ಎಷ್ಟೊಂದು ಸಲ ಅವಳ ತುಟಿಗೆ ತುಟಿ ಬೆರೆಸಿಲ್ಲ! ಅದು ಹಾಳಾಗಲಿ ಎಂದರೆ ಮುಖ ಮುಚ್ಚಿಕೊಂಡು ಅಳಲುತೊಡಗಿದ್ದಾಳೆ.

'ಏನಾಯಿತು ಪಮ್ಮು? ಯಾಕೆ ಇವತ್ತು ಹೀಗಾಡ್ತಿ?'

ಎಂದು ಕೇಳುತ್ತಲೇ ಹೋದರೂ ಬಿಕ್ಕಿ ಅಳುವ ಸದ್ದು ನಿಲ್ಲಲೇ ಇಲ್ಲ. ಎಷ್ಟೋ ಹೊತ್ತಿನ ಮೇಲೆ ಸಾವರಿಸಿಕೊಂಡು ಎದ್ದು 'ಸ್ಸಾರಿ' ಎಂದವಳು ಹೇಳುವದೋ ಬೇಡವೋ! ಎಂದು ಯೋಚಿಸುತ್ತಾ.

'ನಾನು ನಿಮ್ಮ ಪದ್ಮಿನಿ ಅಲ್ಲ. ರಾಗಿಣಿ' ಎಂದ ಗಳಿಗೆ ನಂಬಿಕೆಯೇ ಆಗಿರಲಿಲ್ಲ. 'ನಾನು ಪದ್ಮಿನಿಯ ತಂಗಿ ಅವಳು ಶುದ್ಧ ತರಲೆ. ಅವಳ ತಾಳಕ್ಕೆ ಕುಣಿಯಲೇಬೇಕಾಗಿತ್ತು. ಇದು ಇಷ್ಟೆಲ್ಲ ದೂರ ಕರೆದು ತರುತ್ತದೆ ಎಂದು ನನಗನ್ನಿಸಿರಲಿಲ್ಲ....'

ಮಾತು ನಿಲ್ಲಿಸಿ ಮತ್ತೆ ಕರ್ಚೀಫಿಂದ ಕಣ್ಣು, ಮೂಗು, ಸೀಟಿಕೊಳ್ಳುತ್ತಾ
'ನನ್ನ ಕೈ ಬಿಡೋದಿಲ್ಲ ಅಲ್ಲವೆ' ಎಂದು ಕೇಳಿದ ಗಳಿಗೆ ತಲ್ಲಣ ಹುಟ್ಟಿತು.
ತಾನು ಪ್ರೀತಿಸಿದ್ದು ಪದ್ಮಿನಿಯನ್ನೋ! ರಾಗಿಣಿಯನ್ನೋ!
ದಂಡೆಗೆ ಅಪ್ಪಳಿಸುತ್ತಿದ್ದ ಅಲೆಗಳನ್ನು ನೋಡುತ್ತಾ
ರಾಕೇಶ್ ಕುಳಿತಿದ್ದಾನೆ.
ಪದ್ಮಿನಿಯೋ!
ರಾಗಿಣಿಯೋ!

(ಇಂಗ್ಲೀಷ್ ಕತೆಯೊಂದರಿಂದ ಪ್ರೇರಿತ)

■ ಶ್ರೀಕಾಂತ

---

# ಅದೃಷ್ಟದಾಟ

ಮನುಷ್ಯನ ಬದುಕಿನಲ್ಲಿ ಎಂತೆಂತಹ ಬದಲಾವಣೆ ಆಗುತ್ತದೆಂದು ಯಾರೂ ಭವಿಷ್ಯ ನುಡಿಯಲಾರರು. 1987ರ ಅಂತ್ಯದವರೆಗೆ ಸೌದೀ ಅರೇಬಿಯಾದ ಬಹು ಚರ್ಚಿತ ವ್ಯಾಪಾರಿ ಹಾಗೂ ಬಂಡವಾಳಶಾಹಿಯಾಗಿದ್ದ 'ಅದನಾನ್ ಖಸೋಗೀ'ಯ ಬಳಿ ಎಲ್ಲ ವೈಭವವೂ ಇತ್ತು. ವಿಶ್ವದಲ್ಲೇ ಆತ ಎರಡನೇ ಅಥವಾ ಮೂರನೇ ನಂಬರಿನ ಶ್ರೀಮಂತನೆಂದು ಪರಿಗಣಿತನಾಗಿದ್ದ. ಅವನ ಬಳಿ ಡಿ.ಸಿ. 8 ಎಂಬ ಸ್ವಂತ ವಿಮಾನವಿತ್ತು. ಅದು ವಿಶ್ವದಲ್ಲೇ ಅತಿ ಸುಂದರ, ಆಕರ್ಷಕ, ಸುಖದಾಯಕ ಹಾಗೂ ವಿಲಾಸ ಪೂರ್ಣ ವಿಮಾನ ಎನಿಸಿತ್ತು. ಈ ವಿಮಾನದಲ್ಲಿ ವಿಶ್ವದ ಹೆಸರಾಂತ ಮಹಾರಾಜರೂ, ರಾಯಭಾರಿಗಳೂ, ರಾಜಕಾರಣಿಗಳೂ ಪ್ರವಾಸ ಮಾಡುತ್ತಿದ್ದರು. ಅವರೆಲ್ಲರೂ ಆ ವಿಮಾನವನ್ನು ತುಂಬಾ ಹೊಗಳುತ್ತಿದ್ದರು. ಅದನಾನ್‌ನ ಬಳಿ ಒಂದು ಹಡಗು ಕೂಡ ಇತ್ತು.

ಬನೀಲಾ ಎಂಬ ಈ ಹಡಗಿನ ಅಲಂಕಾರಕ್ಕಾಗಿಯೇ ಕೋಟ್ಯಂತರ ರೂಪಾಯಿ ಖರ್ಚಾಯಿತು. ನೀರ ಮೇಲೆ ತೇಲುವ ಈ ಅರಮನೆಯಲ್ಲಿ ವಿಲಾಸಮಯ ಜೀವನಕ್ಕೆ ಅಗತ್ಯವಿರುವ ಎಲ್ಲ ಸೌಕರ್ಯಗಳೂ ಇದ್ದವು.

ವಿಶ್ವಾದ್ಯಂತ ವ್ಯಾಪಿಸಿದ ಅವನ ಅಪಾರ ಸಂಪತ್ತು ಎಷ್ಟೆಂದು ಯಾರೂ ಅರಿತಿರಲಿಲ್ಲ. ಹಲವಾರು ದೇಶಗಳಲ್ಲಿ ಅವನ ಕಾರ್ಯಾಲಯದ ಶಾಖೆಗಳಿದ್ದವು. ಕೇನಿಯಾದಲ್ಲಿ ಅವನ ದೊಡ್ಡದೊಂದು 'ಫಾರ್ಮ್‌ಹೌಸ್' ಹಾಗೂ ಕೋಟ್ಯಂತರ ಡಾಲರ್‌ಗಳ ವ್ಯಾಪಾರವಿತ್ತು. ಆದರೆ 1988ರಲ್ಲಿ ಇರಾನಿಗೆ ಗುಟ್ಟಾಗಿ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡಿದ ಅಪರಾಧ ಬಯಲಾದಾಗ, ಅದನಾನ ಖಸೋಗಿಯ ಜೀವನಧಾರೆಯೇ ಬದಲಾಯಿತು. ಆತ ಒಮ್ಮೆಲೇ ದಿವಾಳಿಯಾದ. ಅವನ ವಿಮಾನ ಚಪ್ಪಾಗಿ ಫ್ರಾನ್ಸಿನಲ್ಲಿ ಹರಾಜಾಯಿತು. 'ಬರುಘಾಯಿ'ಯ ಸುಲ್ತಾನ ಅವನ ಹಡಗನ್ನು ಕೊಂಡು ನ್ಯೂಯಾರ್ಕಿನ ಒಬ್ಬ ಸಂಪನ್ನ ವ್ಯಾಪಾರಿಗೆ ಮಾರಿಬಿಟ್ಟ, ವಿದೇಶಗಳಲ್ಲಿನ ಎಲ್ಲ ಶಾಖೆಗಳೂ ಬಂದ್ ಆದವು. ಬ್ಯಾಂಕ್‌ಗಳಲ್ಲಿದ್ದ ಎಲ್ಲ ಹಣವೂ ಸಾಲಕ್ಕಾಗಿ ಸಂದಾಯವಾಯಿತು. ವ್ಯಾಪಾರ ನಿಂತುಹೋಯಿತು. ಕೇನಿಯಾದ ಫಾರ್ಮಹೌಸ್ ಮಾರಾಟವಾಯಿತು. ಹೆಂಡತಿ ವಿಚ್ಛೇದನ ನೀಡಿದಳು. ಗೆಳೆಯರು ದೂರ ಸರಿದರು. ತಾನಿನ್ನು ಅದೇಕೆ ಆತ್ಮಹತ್ಯೆ ಮಾಡಿಕೊಂಡಿಲ್ಲ?' ಎಂದು ಅದನಾನ್ ಯೋಚಿಸತೊಡಗಿದ. ನಾವು ಈ ಘಟನೆಯಿಂದ ಪಾಠ ಕಲಿಯಬೇಕು. ಪ್ರಪಂಚದಲ್ಲಿ ಯಾವ ವಸ್ತುವೂ ಸ್ಥಾಯಿಯಲ್ಲ. ನಾವು ಬರಿಗೈಯಿಂದಲೇ ಬಂದು, ಬರಿಗೈಯಿಂದಲೇ ಹೋಗಬೇಕಾಗಿದೆ. ಇದ್ದಷ್ಟು ದಿನ ಸಮಾಜಕ್ಕೆ ನಮ್ಮಿಂದಾದಷ್ಟು ಸೇವೆ ಸಲ್ಲಿಸಿದರೆ ಅದರಿಂದಲೇ ಆತ್ಮತೃಪ್ತಿ ಸಿಗಬಲ್ಲುದು.

# ವಿನೋಬಾ ಮಹಿಳೆಯಾದಾಗ

ವಿನೋಬಾ ಭಾವೆಯವರ ಪೂರ್ತಿ ಹೆಸರು ವಿನಾಯಕ ನರಹರಿ ಭಾವೇ. ಅವರಿಗೆ ಗಾಂಧೀಜಿ ವಿನೋಬಾ ಎಂಬ ಹೆಸರು ಕೊಟ್ಟಿದ್ದರು. ಏಕೆಂದರೆ ಮರಾಠಿಯಲ್ಲಿ ಸಂತರ ಹೆಸರಿನ ಜತೆ ಬಾ ಹಚ್ಚುವ ಪದ್ಧತಿಯಿದೆ. ಸಂತ ತುಕಾರಾಮರನ್ನು ತುಕೋಬಾ, ಸಂತ ಜ್ಞಾನೇಶ್ವರರನ್ನು ಜ್ಞಾನೋಬಾ ಎಂದು ಅವರ ಸುಯಾಯಿಗಳು ಕರೆಯುತ್ತಾರೆ. ಆದರೆ ಗುಜರಾತಿನಲ್ಲಿ ಬಾ ಶಬ್ದಕ್ಕೆ ತಾಯಿ ಎಂದರ್ಥ. 'ಕಸ್ತೂರ ಬಾ' ಈ ರೀತಿಯಲ್ಲೇ ಬಳಕೆಗೆ ಬಂತು.

ಆಗ ಸೇವಾಶ್ರಮದಲ್ಲಿ ಮಹಾತ್ಮಾಗಾಂಧಿ, ಕಸ್ತೂರ ಬಾ ಹಾಗೂ ವಿನೋಬಾ ಇದ್ದರು. ಆಗಲೇ ಮಹಿಳೆಯೊಬ್ಬರು ಆಶ್ರಮಕ್ಕೆ ಬಂದು ಗಾಂಧೀಜಿಯೊಡನೆ 'ಬಾಪೂ... ನಿಮ್ಮ ಆಶ್ರಮದ ಇಬ್ಬರೂ ಸೋದರಿಯರನ್ನು ಕಾಣಬೇಕೆಂದಿರುವೆ' ಎಂದಳು.

ಗಾಂಧೀಜಿ ವಿಚಾರಮಗ್ನರಾದಾಗ 'ಅದೇಕೆ? ನಿಮ್ಮ ಆಕ್ಷೇಪವಿದೆಯೇ!' ಎಂದು ಕೇಳಿದಳು. ಆ ಮಹಿಳೆ.

'ಹಾಗೇನೂ ಇಲ್ಲ... ಈ ಆಶ್ರಮದ ಇಬ್ಬರು ಸೋದರಿಯರು ಯಾರು?' ಕೇಳಿದರು ಗಾಂಧೀಜಿ.

'ಕಸ್ತೂರಬಾ ಮತ್ತು ವಿನೋಬಾ' ಎಂದಳಾಕೆ.

ಸಂಗ್ರಹ : 'ಅಡಿಗ'



ಪ್ರಕೃತಿಯ ಜೊತೆ ಬದುಕುವ ಮನುಷ್ಯನಿಗೆ ಆ ಪ್ರಕೃತಿಯೇ ಜೀವನದ ಪಾಠ ಕಲಿಸುತ್ತದೆ. ಪ್ರಾಣಿ, ನಿಸರ್ಗ ಎಲ್ಲವನ್ನೂ ನೋಡುತ್ತಲೇ ದೇಹದ ಆರೋಗ್ಯ ರಕ್ಷಿಸಿಕೊಳ್ಳುವ, ಉತ್ತಮಗೊಳಿಸಿಕೊಳ್ಳುವ ವಿದ್ಯೆ ಮನುಷ್ಯ ಕಲಿತ. ಅದೇ ಯೋಗ....

# ಆರೋಗ್ಯಕ್ಕಾಗಿ ಯೋಗ

■ ಡಾ.ವಿಜಯಕುಮಾರ ಮಹಾನುಭಾವಿಗಳು
608, 3ನೇ ಹಂತ, 3ನೇ ವಿಭಾಗ, 7ನೇ ಮುಖ್ಯ ಬೀದಿ,
ಬಸವೇಶ್ವರ ನಗರ, ಬೆಂಗಳೂರು - 560 079.

**ಯೋ**ಗದಿಂದ ಆರೋಗ್ಯ ಹೇಗೆ ಸಾಧ್ಯ? ಆರೋಗ್ಯಕ್ಕೂ ಯೋಗಕ್ಕೂ ಸಂಬಂಧವೇನು? ಎನ್ನುವ ಪ್ರಶ್ನೆಗಳನ್ನು ಅನೇಕರು ಕೇಳುತ್ತಿರುತ್ತಾರೆ. ಯೋಗದಿಂದ ಆಗುವ ಪ್ರಯೋಜನ ಎಂದರೆ ದೇಹ, ಮನಸ್ಸಿನ ಆರೋಗ್ಯವನ್ನು ಪಡೆದುಕೊಳ್ಳುವುದು. ಯೋಗದಿಂದ ಆರೋಗ್ಯ ಪಡೆದುಕೊಳ್ಳುವುದು ಹೇಗೆ ತಿಳಿದುಕೊಳ್ಳೋಣ.

**ಅಷ್ಟಾಂಗ ಯೋಗದಲ್ಲಿ ಯಮ ನಿಯಮ ಆಸನ**
**ಪ್ರಾಣಾಯಾಮ ಪ್ರತ್ಯಾಹಾರ ಧಾರಣ, ಧ್ಯಾನ, ಸಮಾಧಿ**
**ಎಂದು ಎಂಟು ಯೋಗವುಂಟು. ಅಲ್ಲಿ ಅಳಿದು ಕೂಡುವುದು ಒಂದು ಯೋಗ. ಅಳಿಯದೆ ಕೂಡುವುದು ಇನ್ನೊಂದು ಯೋಗ**
**ಈ ಎರಡು ಯೋಗದೊಳಗೆ ಅಳಿಯದೆ ಕೂಡುವ ಯೋಗ**
**ಅರಿಯದು ಕಾಣಾ ಗುಹೇಶ್ವರ.**

ಯೋಗದ ವಿಚಾರವಾಗಿ ಪ್ರಭುದೇವರು ಇಲ್ಲಿ ಪ್ರತಿಪಾದಿಸಿದ್ದಾರೆ. ಯೋಗದಲ್ಲಿ ಎಂಟು ವಿಧ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ. ಈ ಯೋಗದ ಈ ಎಂಟು ಪದ್ಧತಿಗಳನ್ನು ಮೂರು ರೀತಿ ವಿಭಜಿಸಲಾಗಿದೆ. ಯಮ, ನಿಯಮ, ಆಸನ ಇವುಗಳು ನಮ್ಮ ಸ್ಥೂಲ ಶರೀರದ ಆರೋಗ್ಯಕ್ಕಾಗಿ ರೂಪಿತವಾಗಿವೆ. ಪ್ರಾಣಾಯಾಮ, ಪ್ರತ್ಯಾಹಾರಗಳು ಸೂಕ್ಷ್ಮಶರೀರದ ಆರೋಗ್ಯಕ್ಕಾಗಿ ಆಯೋಜಿಸಲಾಗಿದೆ. ಧ್ಯಾನ, ಧಾರಣ, ಸಮಾಧಿ ಇವುಗಳನ್ನು ಕಾರಣ ಶರೀರದ ಆರೋಗ್ಯಕ್ಕಾಗಿಯೂ, ಆತ್ಮ ಸಾಕ್ಷಾತ್ಕಾರಕ್ಕಾಗಿಯೂ ಕಂಡುಕೊಳ್ಳಲಾಗಿದೆ.

ಕಣ್ಣಿಗೆ ಕಾಣುವ ಈ ಶರೀರ ಸ್ಥೂಲಶರೀರ, ಸೂಕ್ಷ್ಮ ಶರೀರ, ಕಾರಣ ಶರೀರ ಎಂದು ಅನುಭಾವಿಗಳು ವಿಶ್ಲೇಷಿಸಿದ್ದಾರೆ. ಈ ಮೂರು ಶರೀರದ ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಯೋಗವು ಅಂತರಂಗ ಶುದ್ಧಿ (Internal discipline), ಬಹಿರಂಗ ಶುದ್ಧಿ (External discipline) ಇವುಗಳನ್ನು ಅಳವಡಿಸಿದೆ. ನಾವು ನಿತ್ಯ ಜೀವನದಲ್ಲಿ ನಮ್ಮ ಆಚಾರ, ವಿಚಾರಗಳಲ್ಲಿ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ ಇವುಗಳನ್ನು ಅಳವಡಿಸಿಕೊಳ್ಳಬೇಕು ಎಂದು ಪ್ರತಿಪಾದಿಸಿದೆ. ಇವುಗಳನ್ನು ಅಳವಡಿಸಿಕೊಳ್ಳದೆ ನಾವು ಎಷ್ಟೇ ಯೋಗಾಭ್ಯಾಸ ಮಾಡಿದರೂ ಏನೂ ಉಪಯೋಗ ವಾಗುವುದಿಲ್ಲ. ಯೋಗಾಸನ, ಪ್ರಾಣಾಯಾಮ, ಧ್ಯಾನ ಇವುಗಳಿಂದ ನಾವು ಸಂಪೂರ್ಣ ಆರೋಗ್ಯವನ್ನು ಪಡೆಯುತ್ತೇವೆ. ಇದಕ್ಕೆ ಮೊದಲ ಮೆಟ್ಟಿಲುಗಳಾಗಿ ಯೋಗಾಭ್ಯಾಸ ಮಾಡುವವರು ಕಡ್ಡಾಯವಾಗಿ ಕೆಲವು ರೂಢಿಗಳನ್ನು ಅಳವಡಿಸಿಕೊಳ್ಳಬೇಕು. ಈ ರೂಢಿಗಳನ್ನು ಹೇಳುವುದೇ ಯಮ, ನಿಯಮಗಳ ವಿಚಾರಗಳು.

ಸತ್ಯ, ಅಹಿಂಸೆ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಇವು ಯಮದ ತತ್ವಗಳು. ಅಧ್ಯಯನ, ಸದಾಚಾರ, ಧ್ಯಾನ, ಅನುಭಾವ ಶ್ರದ್ಧೆ ಇವು ನಿಯಮದ ತತ್ವಗಳು.

ಯಮ ಎಂದರೆ ಸಂಯಮ ಎಂದರ್ಥ. ನಿಯಮ ಎಂದರೆ ನಿತ್ಯದ ಆಚರಣೆಗಳು ಎಂದರ್ಥ. ಯೋಗಾಭ್ಯಾಸ ಮಾಡುವವರು ಮೊದಲಿಗೆ ನುಡಿ, ನಡೆ ಇವುಗಳಲ್ಲಿ ಒಂದಾಗಿರಬೇಕು. ಇದೇ ಸತ್ಯ. ಸಸ್ಯಾಹಾರಿಗಳಾಗಿದ್ದು ಮಾತಿನಲ್ಲಿಯೂ, ಕೃತಿಯಲ್ಲಿಯೂ ಇನ್ನೊಬ್ಬರಿಗೆ ತೊಂದರೆ ಕೊಡದಂತೆ ಬದುಕಬೇಕು. ಇದೇ ಅಹಿಂಸೆ. ನಮ್ಮ ಕೈಗಳಾಗಲಿ, ಮನಸ್ಸಾಗಲಿ ಎಂದಿಗೂ ಕಳ್ಳತನ ಮಾಡಬಾರದು. ಇದೇ ಅಸ್ತೇಯ. ಲಗ್ನವಾಗುವವರೆಗೆ ಸ್ತ್ರೀ ಸಂಗ ಮಾಡದೇ ಇರುವುದು. ಲಗ್ನವಾದ ಮೇಲೆ ತನ್ನ ಪತಿ ಪತ್ನಿಗೆ ಇಬ್ಬರೂ

ನಿಷ್ಠರಾಗಿರಬೇಕು. ಇದೇ ಬ್ರಹ್ಮಚರ್ಯ. ಭಾರತೀಯವಾದ ಈ ಪದ್ಧತಿಯನ್ನು ಅನುಸರಿಸದೇ ಇರುವುದರ ಪರಿಣಾಮವಾಗಿಯೇ Aids ಮತ್ತು ಇತರ ಕೇಳರಿಯದ ಹೊಸ ಹೊಸ ರೋಗಗಳು ಹುಟ್ಟಿಕೊಳ್ಳುತ್ತಿವೆ. ಮುಖ್ಯವಾಗಿ ತರುಣ-ತರುಣಿಯರು ತಮ್ಮ ಯೌವನದ ದಿನಗಳಲ್ಲಿ ಸಂಯಮ ಪಾಲನೆ ಮಾಡಬೇಕು. ಬ್ರಹ್ಮಚರ್ಯದ ಮಹತ್ವವೇ ಶ್ರೇಷ್ಠ ಆರೋಗ್ಯ, ಆನಂದದ ಸೋಪಾನವಾಗಿದೆ. ಅತಿ ಆಶೆಯನ್ನು ನಿಗ್ರಹಿಸಿದರೆ ಅಧಿಕ ಸಂಗ್ರಹ ಮನಸ್ಸು ತಂತಾನೆ ಹೋಗುತ್ತದೆ. ಇಂತಹ ಅತ್ಯಧಿಕ ಆಶೆಯೇ ಸ್ವಾರ್ಥವೂ ಲೋಭವೂ ಆಗಿ ಎಂದು ದೇಶದಾದ್ಯಂತ ವಂಚನೆ, ಭ್ರಷ್ಟಾಚಾರ ಹೆಚ್ಚಲು ಕಾರಣವಾಗಿದೆ. ಶ್ರೇಷ್ಠ ಸಮಾಜದ ನಿರ್ಮಾಣಕ್ಕೆ, ಶ್ರೇಷ್ಠ ಆರೋಗ್ಯಕ್ಕೆ ಯೋಗವು ಅಪರಿಗ್ರಹವನ್ನು ಹೇಳಿದೆ. ಅಧಿಕ ಸಂಗ್ರಹವನ್ನು ಬೇಡ ಎನ್ನುತ್ತದೆ. ಮೇಲೆ ಹೇಳಿದ 5 ತತ್ವಗಳನ್ನು ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಅಧ್ಯಯನ, ಚಿಂತನೆ ಶ್ರೇಷ್ಠರ ಒಡನಾಟದಲ್ಲಿ ಬಾಳುವುದೇ ನಿಯಮದ ತತ್ವಗಳಾಗಿವೆ.

**ಯೋಗಾಸನಗಳು :** ಆಸನ ಎಂದರೆ ಒಂದು ನಿಲುವು, ಭಂಗಿ, Position ಎಂದರ್ಥ. ಯೋಗ ಎಂದರೆ ಒಂದಾಗುವುದು ಕೂಡುವುದು, ಬೆರೆಯುವುದು, ವಿಲೀನವಾಗುವುದು ಎಂದರ್ಥ. ಜಗತ್ತಿನಲ್ಲಿ ಎಷ್ಟು ಜೀವರಾಶಿಗಳಿವೆಯೋ, ಅಷ್ಟು ಯೋಗಾಸನಗಳಿವೆ. ಜಗತ್ತಿನಲ್ಲಿ ಅಸಂಖ್ಯ ಜೀವರಾಶಿಗಳು ಸೃಷ್ಟಿಯಾಗಿವೆ. ಒಂದೊಂದು ಜೀವರಾಶಿಯೂ ಒಂದೊಂದು ಆಕಾರದಲ್ಲಿ ಕುಳಿತಿರುತ್ತದೆ. ಈ ಜೀವಗಳ ಸ್ವರೂಪವನ್ನು ಮನುಷ್ಯ ಅನುಕರಣೆ ಮಾಡಿ ಅದರಂತೆ ತನ್ನ ದೇಹವನ್ನು ಆ ನಿಲುವುಗಳಿಗೆ ಹೊಂದಿಸಿಕೊಳ್ಳುವುದೇ ಯೋಗಾಸನ. ಅಲ್ಲದೆ ನಮ್ಮ ದೇಹದ ಸರ್ವಾಂಗಗಳನ್ನೂ ಭಿನ್ನ ಭಿನ್ನ ಆಕಾರಗಳಿಗೆ ಬಗ್ಗಿಸುವುದೇ ಯೋಗಾಸನ.

ಸತ್ಯಾನ್ವೇಷಣೆ ದಾರಿ ಯಾವುದು? ಮನುಷ್ಯ ತನ್ನ ಆಹಾರವನ್ನು ತಾನೊಬ್ಬನೇ ಕಾಡಿನಲ್ಲಿ ಸಂಗ್ರಹಿಸಿಕೊಂಡು, ಕಾಡುಮೃಗಗಳು ಮತ್ತು ಪ್ರಕೃತಿ ವಿಕೋಪಗಳಿಂದ ತನ್ನ ದೇಹವನ್ನು ರಕ್ಷಿಸಿಕೊಂಡು ಹೊಳೆದಂಡೆಯಲ್ಲಿ ಸ್ನಾನ ಮಾಡಿ ಶುಚಿರ್ಭೂತನಾಗಿ ಧ್ಯಾನಕ್ಕೆ ಕೂಡುತ್ತಿದ್ದ. ಬಹಳ ಕಾಲ ಹೀಗೆ ಕಣ್ಣು ಮುಚ್ಚಿ ಅಥವಾ ಕಣ್ತೆರೆದು ಒಂದೇ ಕಡೆ ಧ್ಯಾನ, ತಪಸ್ಸಿನಲ್ಲಿ ಕೂಡುವುದರಿಂದ ಶರೀರಕ್ಕೆ ಕೆಲವು ತೊಂದರೆಗಳು ಉಂಟಾಗುತ್ತವೆ. ಆತ್ಮ ಸಾಕ್ಷಾತ್ಕಾರಕ್ಕಾಗಿ ಯೋಗಿಗಳು ತಿಂಗಳಾನುಗಟ್ಟಲೆ ಒಂದೇ ಸ್ಥಳದಲ್ಲಿ ತಪಸ್ಸಿಗೆ ಕೂಡುತ್ತಿದ್ದರು ಇದರಿಂದ ಶರೀರವು ಸ್ಥೂಲಕಾಯವಾಗುವುದು. ಮಂಡಿನೋವು, ಬೆನ್ನುನೋವು, ದಪ್ಪಹೊಟ್ಟೆ, ಬೊಜ್ಜು ಇವೆಲ್ಲವು ಬರುತ್ತದೆ. ಆಗ ತಪಸ್ಸು ಸಾಧ್ಯವಾಗದೆ ಮನಸ್ಸೆಲ್ಲವೂ ಈ ರೋಗದ ನೋವಿನ ಕಡೆಗೆ ಹೋಗುತ್ತದೆ. ಧ್ಯಾನ, ಆತ್ಮ ಚಿಂತನೆ ಸಾಧನೆ ನಡೆಯುವುದಿಲ್ಲ. ಧ್ಯಾನ, ತಪಸ್ಸು, ಆತ್ಮ ಸಾಕ್ಷಾತ್ಕಾರಕ್ಕಾಗಿ ಬಂದೆ. ಆದರೆ ನನಗೆ ಈ ರೋಗಗಳು ಬಂದುವಲ್ಲ. ಇವುಗಳನ್ನು ನಿವಾರಿಸಿಕೊಳ್ಳುವುದು ಹೇಗೆ ಎಂದು ಚಿಂತನೆ ಆರಂಭಿಸಿದ. ಇವನ ಕಣ್ಣೆದುರಿಗೆ ಹೊಳೆಯ ದಡದಲ್ಲಿ ಹರಿದು ಹೋಗುತ್ತಿದ್ದ ಹಾವು ಕಪ್ಪೆಯನ್ನು ಹಿಡಿದು ನುಂಗಿತು. ಮೀನುಗಳನ್ನು, ಇಲಿಗಳನ್ನು ಹಿಡಿದು ನುಂಗಿತು. ಕಪ್ಪೆ, ಮೀನುಗಳ ಹೊರಭಾಗ ತುಂಬ ಒರಟು. ಇಲಿಯ ಕಾಲು, ಮೂಗು, ಬಾಯಿಗಳಲ್ಲಿ ಹಲ್ಲುಗಳಿವೆ. ಇವನ್ನೆಲ್ಲ ಹಸಿಯಾಗಿ, ಜೀವಂತವಾಗಿ ನುಂಗಿದ ಸರ್ಪ-ಹಾವುಗಳು ಅದು ಹೇಗೆ ಆರೋಗ್ಯವಂತವಾಗಿ ಇವೆ? ಈ ದಿಕ್ಕಿನಲ್ಲಿ ಯೋಗಿಗಳು ಚಿಂತಿಸಿದರು. ಹಾವು ಮೈಯೆಲ್ಲ ಹೊಟ್ಟೆಯಾಗಿ ಇದೆ. ಅದೇ ಹೊಟ್ಟೆಯನ್ನು ಕಾಲುಗಳೆಂಬಂತೆ ಮಾಡಿಕೊಂಡು ಹರಿಯುತ್ತದೆ. ಕಾಲುಗಳೇ ಇಲ್ಲ. ಆದರೂ ನಡೆಯುತ್ತದೆ. ಯಾವ ರೋಗವೂ ಇಲ್ಲದೆ ಆರೋಗ್ಯವಾಗಿದೆ. ನಾನು ಯೋಗಿ, ಋಷಿ. ಹಣ್ಣು, ಹಂಪಲು, ಬೇಯಿಸಿದ ಮೃದು ಆಹಾರವನ್ನು ಊಟ ಮಾಡುತ್ತೇನೆ. ಹಾಲು, ತುಪ್ಪ, ಮೊಸರು, ಬೆಣ್ಣೆ ಊಟ ಮಾಡುತ್ತೇನೆ. ಆದರೂ ನನಗೆ ಅಜೀರ್ಣ ರೋಗ. ಇನ್ನೂ ಏನೇನೋ ತೊಂದರೆ. ಹಾವು ಹೇಗೆ ಜೀರ್ಣ ಮಾಡಿಕೊಂಡಿತು. ನಾನು ಕೂಡ ಹೊಟ್ಟೆಯ ಮೇಲೆ ಒತ್ತಡ ಹಾಕಿದರೆ, ಹೊಟ್ಟೆಯಲ್ಲಿರುವ ಆಹಾರ ಪಚನವಾಗುತ್ತದೆ. ಆದುದರಿಂದ ಹಾವಿನಂತೆ ಆಸನ ಹಾಕಿದ. ಅದೇ ಸರ್ಪಾಸನ, ಭುಜಂಗಾಸನವಾಯಿತು.

ಹೀಗೆ ಗಿರಿ, ಕಂದರಗಳಲ್ಲಿ ತಪಸ್ಸು ನಡೆಯುವಾಗ, ಮಳೆ ಮೋಡಗಳು ಬಂದಾಗ, ಎಳೆಬಿಸಿಲು, ಸಂಜೆಬಿಸಿಲು ಬಂದಾಗ ನವಿಲು ಗರಿಬಿಚ್ಚಿ ಕುಣಿಯುತ್ತದೆ. ಈ ನವಿಲು ಆಹಾರವಾಗಿ ವಿಷಜಂತುಗಳನ್ನು ಹಾವು-ಚೇಳಿನ ಮರಿಗಳನ್ನು, ಕ್ರಿಮಿ, ಕೀಟಗಳನ್ನೆಲ್ಲ ತಿನ್ನುತ್ತದೆ. ವಿಷವನ್ನು ಊಟ ಮಾಡಿದರೂ ನವಿಲು ಅದನ್ನು ಅರಗಿಸಿಕೊಂಡು ಆನಂದ ನರ್ತನ ಮಾಡುತ್ತದೆ. ನಾನು ಮನುಷ್ಯ ಮುಂದುವರಿದ ಪ್ರಾಣಿ ವಿಷ ಅರಗಿಸಿಕೊಳ್ಳುವುದು ಬೇಡ, ಊಟ ಮಾಡಿದ ಆಹಾರ ಜೀರ್ಣಿಸಿಕೊಂಡರೆ ಸಾಕೆಂದು ಚಿಂತನೆ ನಡೆಸಿದ, ತಾನೂ ನವಿಲಿನಂತೆ ತನ್ನ ಶರೀರವನ್ನು ಮಾಡಿಕೊಂಡ. ಹಾಗೆ ಉಂಟಾದುದೇ ಮಯೂರಾಸನ. ಸಿಂಹವು ಕೆಚ್ಚೆದೆಯ ಮಹಾಧೈರ್ಯದ ಪ್ರಾಣಿ. ವನರಾಜ, ಆನೆ, ಹುಲಿಗಳೂ ಇದಕ್ಕೆ ಹೆದರುತ್ತವೆ ಯಾಕೆ? ಒಂದು ಸಿಂಹ ಒಂದು ಹಸು, ಒಂದು ಜಿಂಕೆ, ಒಂದು ಕಾಡೆಮ್ಮೆ ಹೀಗೆ ಯಾವುದೇ ಒಂದು ಪ್ರಾಣಿಯನ್ನು ಕೊಂದು ಒಂದೇ ಸಲಕ್ಕೆ ಬಗೆದು ತಿಂದು ಬಿಡುತ್ತದೆ. ಇಷ್ಟೊಂದು ಹೊಟ್ಟೆಬಾಕ ಪ್ರಾಣಿಯಾದರೂ ಅದರ ಸೊಂಟ ತುಂಬ ಸಣ್ಣದು. ಅದು ಒಂದು ಗರ್ಜನೆ



ಮಾಡಿದರೆ ಕಾಡೆಲ್ಲವೂ ನಡುಗಿ ಹೋಗುತ್ತದೆ. ಎಲ್ಲ ಪ್ರಾಣಿಗಳೂ ದಿಕ್ಕು ಪಾಲಾಗಿ ಓಡಿ ಹೋಗುತ್ತವೆ. ಆ ದನಿ, ಗರ್ಜನೆಗೆ, ಈ ಶೌರ್ಯ ಎಲ್ಲಿಂದ ಬಂತು? ತಾನು ತಿಂದುದನ್ನೆಲ್ಲ ಪಚನ ಮಾಡಿಕೊಳ್ಳಲು ಅದು ಗರ್ಜಿಸುತ್ತದೆ. ಇದನ್ನು ಅನುಕರಿಸಿ ಹಾಕಿದ ಆಸನವೇ ಸಿಂಹಾಸನ. ವೃಶ್ಚಿಕ, ಪತಂಗ, ಗಂಡ ಭೇರುಂಡ ಹೀಗೆ ಅನೇಕ ಯೋಗಾಸನಗಳು ಯೋಗಿಗಳಿಂದ ಅನ್ವೇಷಣೆ ಆದವು.

ಇನ್ನು ಕೆಲವು ವಿಪರೀತ ವಿಷ ಜಂತುಗಳಾದ ಹಾವುಗಳಿವೆ. ಅವು ಉಸಿರು ಬಿಟ್ಟರೆ ಆ ಉಸಿರು ಬಿದ್ದ ಜಾಗವೆಲ್ಲ ಕೊಳೆತು ಹೋಗುತ್ತದೆ. ಉಸಿರನ್ನು ಹೊರದಬ್ಬಿ ವಿಷವಾಯುವನ್ನು ಹೊರಗೆ ಹಾಕುತ್ತವೆ. ಹಾಗೆ ನಮ್ಮ ಹೊಟ್ಟೆಯೊಳಗೆ ವಿಷವಾಯು ಇದೆ. ಅದನ್ನು ಹೊರಹಾಕಿದರೆ, ಹೊಸ ಗಾಳಿ, ಆಮ್ಲಜನಕ ಪಡೆದರೆ ಹೊಸ ಶಕ್ತಿ, ಚೈತನ್ಯ ಬರುತ್ತದೆ. ಅದಕ್ಕಾಗಿಯೇ ನಾವು ನಿರಂತರ ಉಸಿರಾಡುತ್ತಿದ್ದೇವೆ. ಈ ಉಸಿರಾಟವನ್ನು ಅನುಸರಿಸಿ ಹುಟ್ಟಿದ್ದೇ ಪ್ರಾಣಾಯಾಮ ಧ್ಯಾನ. ಹೀಗೆ ಯೋಗ ವಿದ್ಯೆ ಅನೇಕ ವರ್ಷಗಳಲ್ಲಿ ಅನೇಕ ಮಹಾತ್ಮರು ಯೋಗಿಗಳಿಂದ ಅನ್ವೇಷಣೆ ಆಯಿತು.

■



# ಟೊಮಾಟೋ ತಿನ್ನಿ ಕ್ಯಾನ್ಸರ್ ದೂರವಿಡಿ

**ಕೆಂಪಗೆ ಹೊಳೆಯುವ ಟೊಮಾಟೋ ಬಡವರ ಸೇಬು. ಜಗತ್ತಿನಾದ್ಯಂತ ಎಲ್ಲೆಡೆ ಬೆಳೆಯುವ ಈ ಹಣ್ಣು ಸುಗ್ಗಿ ಸಮಯದಲ್ಲಿ ತೀರಾ ಅಗ್ಗ. ಹಸಿಯಾಗಿ ಆಗಲಿ, ತರಕಾರಿಯಾಗಿ ಬಳಸಿ ಆಗಲಿ ಟೊಮಾಟೋ ಸೇವಿಸುವುದು ಕ್ಯಾನ್ಸರ್‌ನಿಂದ ರಕ್ಷಿಸುತ್ತದೆ ಎನ್ನುತ್ತಾರೆ ವಿಜ್ಞಾನಿಗಳು.**

ದಕ್ಷಿಣ ಅಮೇರಿಕಾದ ಮೆಕ್ಸಿಕೋದ ಕರಾವಳಿ ಕಣಿವೆ ಟೊಮಾಟೋದ ತವರು. ನೆಲಕ್ಕಂಟಿ ಹರಡಿಕೊಳ್ಳುತ್ತಿದ್ದ ಈ ಗಿಡದ ಹಣ್ಣು ತಿನ್ನಲು ಯೋಗ್ಯವೆಂದು ಕಂಡು ಕೃಷಿ ಮಾಡಿದವರು ಮಾಯಾ ಸಂಸ್ಕೃತಿಯ ಕೃಷಿಕರು.

ಸೋಲನೇಸಿ ಕುಟುಂಬದ ಈ ಗಿಡ ಸ್ಪೇಯ್ನ್‌ನ ಸಮುದ್ರ ಸಾಹಸಿಗಳ ಕಣ್ಣಿಗೆ ಬಿತ್ತು. 1520ರ ಸುಮಾರಿಗೆ ಇದನ್ನವರು ತವರಿಗೆ ತಂದರು. ನಂತರ ಇಟಲಿ, ಮಧ್ಯಪ್ರಾಚ್ಯಕ್ಕೂ ಸ್ಪೇಯ್ನ್ ಸಾಹಸಯಾತ್ರಿಗಳೊಡನೆ ಟೊಮಾಟೊ ಬಂತು. ಭಾರತಕ್ಕೆ ಇದನ್ನು 1822ರಲ್ಲಿ ತಂದವರು ಈಸ್ಟ್ ಇಂಡಿಯಾ ಕಂಪೆನಿಯ ಜನ. ಅದರ ಕೆಂಪು ಬಣ್ಣಕ್ಕೋ, ಬ್ರಿಟಿಷರು ತಂದರೆಂಬ ಕಾರಣಕ್ಕೋ ಟೊಮಾಟೋ ಭಾರತೀಯರ ಪಾಲಿಗೆ ವಿಲಾಯತಿ ತರಕಾರಿ. ಸಂಪ್ರದಾಯಸ್ಥರು ಅದನ್ನು ಮುಟ್ಟುತ್ತಲೂ ಇರಲಿಲ್ಲ.

ಈಗ ಕಾಲ ಬದಲಾಗಿದೆ. ಕೆಚಪ್‌ನಿಂದ ಹಿಡಿದು ಟೊಮಾಟೋ ತಿಳಿ ಸಾರಿನವರೆಗೆ ನಾನಾ ರೂಪದಲ್ಲಿ ಅದು ಭಾರತೀಯರ ಹೊಟ್ಟೆ ಸೇರುತ್ತಿದೆ. ವರ್ಷಕ್ಕೆ ಆರು ದಶಲಕ್ಷ ಟನ್ ಟೊಮಾಟೋ ಈಗ ಬೆಳೆಯಲಾಗುತ್ತಿದೆ. ಕರ್ನಾಟಕ, ಪಂಜಾಬು, ಹರ್ಯಾಣಾ, ಉತ್ತರ ಪ್ರದೇಶ, ಮಹಾರಾಷ್ಟ್ರ ಮತ್ತು ಆಂಧ್ರ ರಾಜ್ಯಗಳು ಟೊಮಾಟೋದ ಪ್ರಮುಖ ಬೆಳೆ ಪ್ರದೇಶಗಳು.

ಎಲ್ಲ ಹಣ್ಣುಗಳಲ್ಲೂ ಇರುವಂತೆ ಟೊಮಾಟೋದಲ್ಲಿ ವಿಟಮಿನ್ 'ಸಿ' ಸಮೃದ್ಧವಾಗಿರುತ್ತದೆ. ತಾವು ಹೋದಲ್ಲೆಲ್ಲ ಸ್ಪೇಯ್ನಿಗರು ಟೊಮಾಟೋ ಹೊತ್ತೊಯ್ದು, ಕೃಷಿ ಮಾಡಿ ಬಳಸುತ್ತಾ ಇದ್ದುದರಿಂದ, ಅಲ್ಲಿನ ನಾವಿಕರಲ್ಲಿ ಬ್ರಿಟಿಷ್ ಮತ್ತು ಡಚ್ ನಾವಿಕರಲ್ಲಿ ತಲೆದೋರುತ್ತಿದ್ದ ಸ್ಕರ್ವಿ ರೋಗ ಇರುತ್ತಾ ಇರಲಿಲ್ಲ. ಸ್ಪೇಯ್ನಿನ ರಾಜಾಜ್ಞೆಯಂತೆ ಹೋದಲ್ಲೆಲ್ಲ ಟೊಮಾಟೋ ಬಿತ್ತಿ ಬೆಳೆದು ಹರಡಬೇಕೆಂಬ ನಿಯಮ ಅವರ ಪಾಲಿಗಂತೂ ವರದಾನವಾಯಿತು.

ಹಸಿಯಾಗಿಯೋ, ಬೇಯಿಸಿಯೋ ಸಾಕಷ್ಟು ಪ್ರಮಾಣದಲ್ಲಿ ಟೊಮಾಟೋ ಸೇವಿಸುವುದರಿದ ಪ್ರಾಸ್ಟೇಟ್ ಕ್ಯಾನ್ಸರ್‌ನ ಸಾಧ್ಯತೆ ಕಡಿಮೆ ಎಂದು ಇತ್ತೀಚೆಗೆ ಅಮೇರಿಕಾದ ಹಾರ್ವರ್ಡ್ ವಿಶ್ವವಿದ್ಯಾಲಯದ ವಿಜ್ಞಾನಿಗಳು ಪತ್ತೆಹಚ್ಚಿದ್ದಾರೆ. ಹಣ್ಣಲ್ಲಿ ಇರುವ ಲೈಕೋಪೇನ್ ಇದಕ್ಕೆ ಕಾರಣ ಎಂದು ವಿಜ್ಞಾನಿ ಡಾ. ಎಡ್ವರ್ಡ್ ಗಿಯೋವೆನುಚಿ ಹೇಳುತ್ತಾರೆ.

ದೆಹಲಿ ವಿಶ್ವವಿದ್ಯಾಲಯದ ಪ್ಲ್ಯಾಂಟ್ ಮಾಲಿಕ್ಯುಲರ್ ಟೆಕ್ನಾಲಜಿ ಮತ್ತಿತರ ಕಡೆ ಮತ್ತೊಂದು ಬಗೆಯ ಸಂಶೋಧನೆ ನಡೆಯುತ್ತಿದೆ. ಟೊಮಾಟೋದಲ್ಲಿ ಜೀನ್ ಇಂಜೆಕ್ಷನ್‌ಗಳ ಮೂಲಕ ಮಾರ್ಪಾಡು ತರುವುದು ಈ ಪ್ರಯೋಗ. ಇದು ಯಶಸ್ವಿಯಾದಲ್ಲಿ ಇನ್ನು ಮುಂದೆ ಕಾಲರಾ ಮುಂತಾದ ರೋಗಗಳಿಗೆ ರೋಗ ನಿರೋಧಕ ಚುಚ್ಚುಮದ್ದು ಪಡೆಯಬೇಕಾಗಿಲ್ಲ. ಜೀನ್ ಇಂಜೆಕ್ಷನ್‌ನಿಂದ ಮಾರ್ಪಾಡಾದ ಟೊಮಾಟೋದ ಕೆಲವು ತುಂಡು ಸೇವಿಸಿದರೆ ಸಾಕು. ಇನ್ನೂ ಹಣ್ಣಾಗದ ಸ್ಥಿತಿಯಲ್ಲಿ ಇರುವ ಟೊಮಾಟೊಗಳು ನೀಲಿ ಬಣ್ಣದ್ದಾಗಿರುತ್ತವೆ. ಅದೊಂದೇ ಇದರ ವಿಶೇಷ.

ಈ ಜೀನ್ ಇಂಜೆಕ್ಷನ್‌ನಿಂದ ತರಬಹುದಾದ ಮಾರ್ಪಾಡು ಮುಂದಿನ ದಿನಗಳಲ್ಲಿ ಓರಲ್ ರೀ ಹೈಡ್ರೇಷನ್‌ನಷ್ಟೆ (ಮಕ್ಕಳಲ್ಲಿ ವಾಂತಿ, ಬೇಧಿ ಕಾಣಿಸಿಕೊಂಡು ದೇಹದ ನೀರಿನಾಂಶ ಬತ್ತಿ ಹೋಗುವಾಗ ಉಪ್ಪು ಮತ್ತು ಸಕ್ಕರೆ ಸಮಪ್ರಮಾಣದಲ್ಲಿ ಬೆರೆಸಿ ನೀರಿನಲ್ಲಿ ಸೇರಿಸಿ ಸ್ವಲ್ಪ ಸ್ವಲ್ಪವೇ ಕುಡಿಸುವುದರಿಂದ ದೇಶದಲ್ಲೀಗ ಲಕ್ಷಾಂತರ ಮಕ್ಕಳ ಪ್ರಾಣ ಉಳಿಸಲಾಗುತ್ತಿದೆ) ಜನಪ್ರಿಯ ಆಗಬಹುದೆಂದು ವಿಜ್ಞಾನಿಗಳು ಹೇಳುತ್ತಾರೆ.

ಇದು ವ್ಯಾಕ್ಸೀನ್ ತಯಾರಿಸುವ ಅಗ್ಗದ ಕ್ರಮ. ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವಾಗ ರೆಫ್ರಿಜಿರೇಟರ್‌ನಲ್ಲಿ ಇಟ್ಟು ಕೊಂಡೊಯ್ಯುವ ಅಗತ್ಯವಿಲ್ಲ. ಸಾಗಾಣಿಕೆ ಕೂಡ ಸುಲಭ. ಇದರಿಂದ ತೃತೀಯ ವಿಶ್ವದ ಜನಕ್ಕೆ ಆರೋಗ್ಯಸೇವೆ ಮತ್ತಷ್ಟು ಪ್ರಭಾವಕಾರಿ ಆಗುವುದೂ ಸಾಧ್ಯ.

ಇದೊಂದೇ ಅಲ್ಲ. ಒಂದೇ ಗಿಡದಲ್ಲಿ ಜೀನ್ ಮಾರ್ಪಾಡಿನಿಂದ ಹಲವು ರೋಗ ಬಾರದಂತೆ ತಡೆಯುವುದೂ ಸಾಧ್ಯ. ಹೆಪಿಟೈಟಿಸ್‌ನಲ್ಲಿ ನಾನಾ ಬಗೆ. ಒಂದೊಂದೂ ಬಾರದಂತೆ ಪ್ರತ್ಯೇಕ ರೋಗ ನಿರೋಧಕ ಚುಚ್ಚುಮದ್ದು ಈಗ ಅಗತ್ಯ. ಅದರ ಬದಲು ಸಸ್ಯದಲ್ಲಿ ಜೀನ್ ಮಾರ್ಪಾಡಿನಿಂದ ಈ ಎಲ್ಲ ಬಗೆಯ ರೋಗಗಳೂ ಬರದಂತೆ ತಡೆಯುವ ವ್ಯವಸ್ಥೆ ಮಾಡಬಹುದು.

ವಿಶ್ವ ಆರೋಗ್ಯ ಸಂಸ್ಥೆ ನೆರವಿನಿಂದ ಈ ನಿಟ್ಟಿನಲ್ಲಿ ಹೆಚ್ಚಿನ ಸಂಶೋಧನೆ ಭಾರತದಲ್ಲಿ ನಡೆಯುತ್ತಿದ್ದು, ಈಗಾಗಲೇ ಸಾಕಷ್ಟು ಪ್ರಗತಿ ಸಾಧಿಸಲಾಗಿದೆ.

ಟೊಮಾಟೋ ಮಾರುಕಟ್ಟೆಗೆ ತರುವಷ್ಟರಲ್ಲಿ ಹಣ್ಣಾಗಿ ಹಾಳಾಗುತ್ತದೆ. ಈ ಕಾರಣಕ್ಕಾಗಿಯೇ ನಮ್ಮಲ್ಲಿನ ರೈತರು ಆಗಾಗ ಬೆಲೆ ಕುಸಿತದಿಂದ ಸಿಟ್ಟಿಗೇಳುತ್ತಾರೆ. ಹಿಂದೊಮ್ಮೆ ಜನತಾದಳದ ನಾಯಕ ಸಿ.ಬೈರೇಗೌಡರು ರೈತರು ಬೆಳೆದ ಟೊಮಾಟೋಗೆ ಸರಿಯಾದ ಬೆಲೆ ಸಿಕ್ಕಿಲ್ಲವೆಂದು ಸಿಟ್ಟಿಗೆದ್ದು ವಿಧಾನಸೌಧದ ಮೆಟ್ಟಿಲ ಮೇಲೆ ಲೋಡುಗಟ್ಟಲೆ ಟೊಮಾಟೋ ಎಸೆದು ಹೋಗಿದ್ದರು. ಜನತಾದಳ ಅಧಿಕಾರಕ್ಕೆ ಬಂದು ಬೈರೇಗೌಡರೇ ಕೃಷಿ ಸಚಿವ ಆಗಿದ್ದಾಗ ಕಳೆದ ವರ್ಷ ಮತ್ತೆ ಅಂಥದ್ದೇ ಸ್ಥಿತಿ ಮೂಡಿತು. ಬೈರೇಗೌಡರು ಅಸಹಾಯಕರಾಗಿ ಉಳಿದರು. ಅವರ ಜಿಲ್ಲೆಯವರೇ ಆದ ಟೊಮಾಟೋ ಬೆಳೆದ ರೈತರು ಬೆಂಗಳೂರಿನ ಕೆ.ಆರ್.ಸರ್ಕಲಿನಲ್ಲಿ ಜನಕ್ಕೆ ಉಚಿತವಾಗಿ ಟೊಮಾಟೋ ಹಂಚಿ ಪ್ರತಿಭಟಿಸಿದರು.

ಟೊಮಾಟೋ ಪೂರ್ತಿಯಾಗಿ ಬೆಳೆದ ಮೇಲೆ ಬೇಗ ಹಣ್ಣಾಗಿ ಕೊಳೆಯುತ್ತದೆ. ಇದನ್ನು ತಪ್ಪಿಸಲು ಅಮೇರಿಕಾದ ಜೀವಶಾಸ್ತ್ರಜ್ಞ ಆಂಥೋನಿಯಸ್ ಥಿಯಾಲಜಿಸ್ 1989ರಲ್ಲಿ ಭಾರೀ ತಲೆ ಕೆಡಿಸಿಕೊಂಡ. ಆತನ ತಂಡದವರು ಎಥಿಲಿನ್ ಅನಿಲ ಬಿಡುಗಡೆಯಿಂದಾಗಿ ಟೊಮಾಟೋ ಕೆಂಪು ಬಣ್ಣ ಪಡೆಯುತ್ತದೆ ಎಂಬುದು ಕಂಡು ಹಿಡಿದರು. ಅದಾದದ್ದೇ ಗಿಡದಲ್ಲಿ ಕಾಯಿ ತುಂಬು ಗಾತ್ರಕ್ಕೆ ಬೆಳೆಯುತ್ತಿದ್ದಂತೆ ಬಿಡುಗಡೆ ಆಗುವ ಎಥಿಲಿನ್ ಅನಿಲ, ಬಿಡುಗಡೆಯೇ ಆಗದಂತೆ ತಡೆದರೆ ತಮ್ಮ ಕಾರ್ಯ ಸಿದ್ಧಿಸುತ್ತದೆ ಎಂದು ಅರಿತರು. ಟೊಮಾಟೋದ ಜೀನ್‌ಗಳಲ್ಲಿ ಎಥಿಲಿನ್ ಅನಿಲ ಬಿಡುಗಡೆಗೆ ಕಾರಣವಾಗುವ ಜೈವಿಕ ಅಂಶ ಪತ್ತೆ ಹಚ್ಚಿ ಅದನ್ನು ತೆಗೆದು ಹಾಕಿದರು. ಹೀಗೆ ರೂಪಿಸಿದ ಡಿಎನ್‌ಎದಿಂದ ಪ್ರಯೋಗಾಲಯದಲ್ಲಿ ಟೊಮಾಟೋ ಬೆಳೆದರು. ಗಿಡದಲ್ಲಿ ಬಿಟ್ಟ ಕಾಯಿ ಪೂರ್ಣ ಗಾತ್ರಕ್ಕೆ ಬೆಳೆದರೂ ಕೆಂಪಿಗೆ ತಿರುಗದೇ ಗಟ್ಟಿಯಾಗಿ ಉಳಿಯಿತು. ಇಂಥ ಕಾಯಿ ಎಲ್ಲಿಂದ ಬೇಕಾದರೂ ಸಾಗಿಸಬಹುದು. ಹಣ್ಣು ಬೇಕೆಂದಾಗ, ಎಥಿಲಿನ್ ಅನಿಲವನ್ನು ಅದಕ್ಕೆ ಪ್ರಯೋಗಿಸಿದರೆ ಕಾಯಿ ಹಣ್ಣಾಗಿ ಮಾರ್ಪಡುತ್ತದೆ. ಇದು ವಿಜ್ಞಾನಿಗಳ ಇತ್ತೀಚಿನ ಅಪೂರ್ವ ಸಾಧನೆ.

ಟೊಮಾಟೋ ಬಗ್ಗೆಯೇ ಇಷ್ಟೇಕೆ ಕಾಳಜಿ, ಪ್ರಯೋಗ? ಅದಕ್ಕೆ ಕಾರಣ ಇದೆ. ಅಂಟಾರ್ಟಿಕಾದಲ್ಲಿ ಬೀಡುಬಿಟ್ಟಿರುವ ಭಾರತೀಯ ವಿಜ್ಞಾನಿಗಳ ಕೇಂದ್ರ 'ಮೈತ್ರಿ'ಯ ಹಾಟ್‌ಹೌಸಿನಲ್ಲಿ ಟೊಮಾಟೋ ಬೆಳೆಯಲಾಗುತ್ತಿದೆ. ಇದು ಒಂದು ವಿಜ್ಞಾನದ ಪ್ರಯೋಗಕ್ಕಾಗಿ. ಆದರೆ ವಿಶ್ವದ ಬಹುಪಾಲು ಎಲ್ಲೆಡೆ ಮನೆಯ ಅಂಗಳ, ಹಿತ್ತಲು, ಕಿಟಕಿಗಳಲ್ಲಿ ಇಟ್ಟ ಕುಂಡದಲ್ಲಿ ಇವತ್ತು ಸಾಮಾನ್ಯವಾಗಿ ಬೆಳೆಯುತ್ತಿರುವುದು ಇದೇ ಟೊಮಾಟೋವನ್ನು.

ಅತ್ಯಂತ ಅಗ್ಗದಲ್ಲಿ ಎಲ್ಲೆಡೆ ಸಿಗುವ ಹಣ್ಣು ತರಕಾರಿ ಇದಾದ್ದರಿಂದಲೇ ಇದರ ಬಗ್ಗೆ ಇಷ್ಟೆಲ್ಲ ಕಾಳಜಿ.

**ಟೊಮಾಟೋ ಮಹೋತ್ಸವ**

ಪ್ರತಿವರ್ಷ ಆಗಸ್ಟ್ ತಿಂಗಳಲ್ಲಿ ಪೂರ್ವ ಸ್ಪೇಯ್ನ್‌ನ ಬ್ಯುನೋಲ್ ಎಂಬಲ್ಲಿ ಟೊಮಾಟೋ ಹಬ್ಬ ನಡೆಯುತ್ತದೆ. ಅಂದು ಈ ಉತ್ಸವ ನೋಡಲೆಂದೇ ಸ್ಪೇಯ್ನ್‌ನ ಹಾಗೂ ವಿದೇಶೀ ಪ್ರವಾಸಿಗಳ ಹಿಂಡು ಸಹಸ್ರಾರು ಸಂಖ್ಯೆಯಲ್ಲಿ ಸೇರುತ್ತಾರೆ. ಸುಡುವ ಬಿಸಿಲಲ್ಲಿ ಸುಣ್ಣ ಬಳಿದ ರಸ್ತೆಗಳ ಇಕ್ಕೆಲದಲ್ಲಿ ಜನ ಸಮೂಹ. ಇಲ್ಲಿನ ಮುಖ್ಯ ಚೌಕಕ್ಕೆ ಹೆಚ್ಚಾಗಿ ಉಳಿದ ಕಳಿತ ಟೊಮಾಟೋಗಳನ್ನು ಡಂಪರ್‌ಗಳು ತಂದು ರಸ್ತೆಯಲ್ಲಿ ಸುರಿಯುತ್ತವೆ. ಜನ 'ಟೊಮಾಟೋ! ಟೊಮಾಟೋ!' ಎಂದು ಹುಯಿಲಿಡುವಾಗ 1,25,000 ಕಿಲೋಗಳಷ್ಟು ಹಣ್ಣು ಹಣ್ಣಾದ ಕೆಂಪು ಟೊಮಾಟೋ ಬೀದಿಗೆ ಬೀಳುತ್ತವೆ. ಉತ್ಸವದಲ್ಲಿ ಪಾಲ್ಗೊಳ್ಳುವ ಜನ ತಮ್ಮ ವಾಹನವ ಚೆಲ್ಲಿದ ಟೊಮಾಟೋ ಮೇಲೆ ಓಡಿಸುತ್ತಾರೆ. ಸಿಡಿಯುವ ರಸ, ಉರುಳಾಡುವ ಟೊಮಾಟೋ, ಜನರ ಕಿರುಚಾಟ ಮುಗಿಲು ಮುಟ್ಟುತ್ತದೆ. ಈ ಹುಡುಗಾಟ ಸರಿಯಾಗಿ ಒಂದು ತಾಸು ಮಾತ್ರ ನಡೆಯುತ್ತದೆ.

ಟೊಮಾಟೋ ರಸ ಲೇಪಿತ ಹುಡುಗರು ಸಾಮೂಹಿಕ ಸ್ನಾನಕ್ಕೆ ಇಳಿಯುತ್ತಾರೆ. ಆನಂತರ ಕೆಂಪು ರಾಚಿದ ರಸ ತುಂಬಿ ತುಳುಕುತ್ತಿರುವ ಊರಿನ ಚೌಕ ತೊಳೆದು ಚೊಕ್ಕಟ ಗೊಳಿಸಲು ನೀರಿನ ಪೈಪು ಹಿಡಿದ ಜನ ಬರುತ್ತಾರೆ. ಅತ್ಯಂತ ರಭಸದಿಂದ ನೀರುಗುಳುವ ಪೈಪುಗಳಿಂದ ನೀರು ಹಾಯಿಸಿದ ಮೇಲೆ ಇಡೀ ರಸ್ತೆ ಮತ್ತು ರಸ್ತೆಯ ಬದಿ ಇನ್ನಷ್ಟು ಶುಭ್ರವಾಗಿ ಕಾಣುತ್ತದೆ. ಇದಕ್ಕೆ ಟೊಮಾಟೋದಲ್ಲಿರುವ ಆಸಿಡ್ ಕಾರಣ ಎಂದು ಬ್ಯುನೋಲ್ ಊರವರು ಹೇಳುತ್ತಾರೆ.

'ಲಾ ಟೊಮಾಟೋ' ಎಂದು ಕರೆಯಲಾಗುವ ಈ ಉತ್ಸವ 55 ವರ್ಷದ ಹಿಂದೆ ಆರಂಭಗೊಂಡಿತು. ಆಗ ಅಲ್ಲಿ ಸರ್ವಾಧಿಕಾರಿ ಫ್ರಾನ್ಸಿಸ್ಕೋ ಫ್ರ್ಯಾಂಕೋನ ಆಡಳಿತವಿತ್ತು. ಆಗಿಂದ ರಾಜಕೀಯ ಪ್ರತಿಭಟನೆಕಾರರು ತಮ್ಮ ವಿರೋಧಿಗಳ ಮೇಲೆ ಕೊಳೆತ ಟೊಮಾಟೋ ಎಸೆಯುವುದು ಮಾನ್ಯತೆ ಪಡೆಯಿತು. ■



# ಬಿದಿರು ಎಂಬ ಚದುರೆ

**ನೀನ್ಯಾರಿಗಲ್ಲದವಳೇ**
**ಹೇಳೇ ಬಿದಿರಮ್ಮ ತಾಯೇ?**
ಎಂಬ ಜಾನಪದ ಗೀತೆಯೊಂದಿದೆ,
**ತೊಟ್ಟಿಲಂಗಡಿಯಲ್ಲಿ**
**ಬೊಂಬು ತುಂಬಾ ಅಗ್ಗ**

ಎಂದ ಅಡಿಗರು ಹುಟ್ಟು-ಸಾವಿನ ವಿಚಿತ್ರ ತಳಿಕೆಯನ್ನು ತಮ್ಮ ಕವನದಲ್ಲಿ ಪ್ರಸ್ತುತಪಡಿಸಿದ್ದಾರೆ.

ಹುಟ್ಟಿದಾಗ ತೊಟ್ಟಿಲು, ಸತ್ತಾಗ ಚಟ್ಟ. ಎರಡಕ್ಕೂ ಬಿದಿರು ಬೇಕು. ಇವತ್ತು ಕಾಲ ಬದಲಾಗಿದೆ. ಬಿದಿರು ನಾಗರೀಕತೆಯ ಅಂಗವಾಗಿ ಉಳಿದಿಲ್ಲ. ತೊಟ್ಟಿಲಿಗೆ ಸಾಗುವಾನಿ ಕಟ್ಟಿಗೆ ಬಂತು. ಈಗ ಸ್ಟೀಲು ಬಳಸಲಾಗುತ್ತಿದೆ. ಇದು ನಗರಗಳ ಕತೆ. ಏಷಿಯಾ ಖಂಡದ ಬಹುಪಾಲು ಗ್ರಾಮಗಳಲ್ಲಿ ಈಗಲೂ ಬಿದಿರಿನ ಪತ್ರಿನ್ನಗಳೇ ಮುಖ್ಯ. ಮನೆ ಕಟ್ಟಲು, ಬಾಗಿಲು ಮಾಡಲು, ಬೇಲಿ ಹಾಕಲು ಈ ಬಿದಿರೇ ಬೇಕು. ಭತ್ತ ಸಂಗ್ರಹಿಸುವ ಪಣತದಿಂದ ಹಿಡಿದು ನಾನಾ ಕೆಲಸಗಳಿಗೆ ಬಿದಿರಿನ ಬುಟ್ಟಿಯೇ ಇವತ್ತೂ ಆಗಬೇಕು. ನಿತ್ಯದ ಬದುಕಿಗೂ ಬಿದಿರಿಗೂ ಸದಾ ಅಂಟಿದ ನಂಟು.

ಚೀನಾದಲ್ಲಿ ಕಾಗದದ ಆವಿಷ್ಕಾರ ಆಯಿತು. ಇದಕ್ಕೆ ಬಿದಿರು ಮೂಲವಸ್ತು. ಈಗ ಕೈಗಾರಿಕೆಗಳಲ್ಲೂ ಅದೇ ಬಳಕೆ, ಬಿದಿರು ಬಳಸಿ ಅತ್ಯುತ್ತಮ ಕಾಗದ ತಯಾರಿಸುವ ಜಪಾನು, ಚೀನಾ ಅಗ್ರಶ್ರೇಣಿಯ ಕಾಗದ ತಯಾರಿಕೆ ದೇಶಗಳು. ಬಿದಿರು ಬೇಗ ಬೆಳೆಯುತ್ತದೆ. ಕಾಡಿನ ಮರ ಕಡಿದರೆ ಮತ್ತೆ ಅಂಥದೊಂದು ಮರ ಬೆಳೆದು ನಿಲ್ಲಲು ದಶಕಗಳೇ ಬೇಕು. ಬಿದಿರು ಹಾಗಲ್ಲ. ಅದಕ್ಕಾಗೇ ಕಾಗದ ತಯಾರಿಕೆಯಲ್ಲಿ ಬಿದಿರಿಗೆ ಪ್ರಾಶಸ್ತ್ಯ. ನಮ್ಮ ರಾಜ್ಯದ ಭದ್ರಾವತಿಯ ಮೈಸೂರು ಪೇಪರ್ ಮಿಲ್‌ನಲ್ಲಿ ತಯಾರಾಗುವ ಕಾಗದದ ಮೂಲವಸ್ತು ಇದೇ ಬಿದಿರು.

ಈಚಿನ ದಿನಗಳಲ್ಲಿ ಅಗರಬತ್ತಿ ಉದ್ಯಮ ದೊಡ್ಡದಾಗಿ ಬೆಳೆದಿದೆ. ಸುವಾಸನೆಯುಕ್ತ ರಾಸಾಯನಿಕಗಳು ಉರಿದು ಸುಗಂಧ ನೀಡಲು ಆಸರೆ ಬಿದಿರಿಂದ ಬಂದ ಕಡ್ಡಿ. ಅದಕ್ಕಾಗಿ ಈಗ ಭಾರೀ ಬೇಡಿಕೆ. ಇದನ್ನು ಗಮನಿಸಿ ಅರಣ್ಯ ಇಲಾಖೆ ಕೋಟಾ ಪದ್ಧತಿಯನ್ನು ಜಾರಿಗೆ ತಂದಿದೆ. ಅಗರಬತ್ತಿ ಉದ್ಯಮದಲ್ಲಿ ತೊಡಗಿರುವವರು ಹೆಚ್ಚಾಗಿ ಹೆಣ್ಣು ಮಕ್ಕಳು. ಅಗರಬತ್ತಿ ಹೊಸೆಯುವುದು ಇವತ್ತು ಗುಡಿ ಕೈಗಾರಿಕೆ.

ಇನ್ನು ಕಟ್‌ಔಟ್, ಚಪ್ಪರಗಳ ನಿರ್ಮಾಣಕ್ಕೆ ಬಿದಿರು ಬೇಕೇ ಬೇಕು. ಇದು ಕೇವಲ ಸೀಸನಲ್ ಬೇಡಿಕೆ. ಆದರೂ ಇಂಥ ಸಮಾರಂಭಗಳಿಗಾಗಿ ಸಾಕಷ್ಟು ಪ್ರಮಾಣದ ಬೇಡಿಕೆ ಇದ್ದೇ ಇರುತ್ತದೆ. ಅಂತೂ ಕಾಲದಿಂದ ಕಾಲಕ್ಕೆ ಬಿದಿರಿನ ಬಳಕೆ ಬೆಳೆಯುತ್ತಲೇ ಇದೆ.

ಬಿದಿರು ಹುಲ್ಲಿನ ಜಾತಿಗೆ ಸೇರಿದ ಸಸ್ಯ. ತನ್ನಪಾಡಿಗೆ ತಾನು ಬೆಳೆಯುವ ರಾಕ್ಷಸಗಿಡ ಎಂದು ಹೇಳುವುದುಂಟು. ಸಾಮಾನ್ಯವಾಗಿ ಹುಲ್ಲಿನ ಜಾತಿಯ ಸಸ್ಯಗಳು ಐದಾರು ಅಡಿಗಳಿಗಿಂತ ಹೆಚ್ಚು ಬೆಳೆಯುವುದಿಲ್ಲ. ಹಾಗೇ ಈ ಜಾತಿಯ ಸಸ್ಯಗಳ ಜೀವಾವಧಿ ಕೇವಲ ಒಂದರಿಂದ ಎರಡು ವರ್ಷ. ಬಿದಿರು ಮಾತ್ರ ಬಹುಕಾಲ ಬೆಳೆದು ಉಳಿಯುವುದು ಇನ್ನೊಂದು ವಿಶೇಷ.

ರಾಜ್ಯದ ಮಲೆನಾಡು ಮತ್ತು ಮೈಸೂರು ವಿಭಾಗದಲ್ಲಿ ಹೆಚ್ಚಾಗಿ ಕಂಡುಬರುವ ಬಿದಿರು ಕಾಡುಗಳು ಆನೆಗಳಿಗೆ ಪ್ರಿಯವಾದ ಆಹಾರ. ಇಂಥ ಕಾಡು ಇದ್ದೆಡೆ ಆನೆಗಳು ಹಿಂಡು ಹಿಂಡಾಗಿ ವಾಸಿಸುತ್ತವೆ. ಬಿದಿರು ಹಿಂಡಲಿನ ಮೇಲೆ ಮನುಷ್ಯನ ಕಣ್ಣು ಬಿದ್ದು, ನಾಶವಾಗುತ್ತಾ ಹೋದಂತೆ ಆನೆಗಳಿಗೆ ಆಹಾರದ ಕೊರತೆ. ಅಂಥ ಸಂದರ್ಭಗಳಲ್ಲಿ ಆನೆಗಳ ಹಿಂಡು ಪುಂಡು ಬೆಳೆದು ಊರೊಳಗೆ ನುಗ್ಗಿ ರೈತ ಬೆಳೆದ ಪಯರು ತಿಂದು ಬದುಕುವ ದುಸ್ಸಾಹಸಕ್ಕೆ ಎಳೆಸುತ್ತವೆ. ಆನೆ ಕಾಟಕ್ಕೆ ತಾನೇ ಕಾರಣ ಎಂಬುದನ್ನು ಮರೆಯುವ ಮನುಷ್ಯ, ಅವುಗಳ ಮೇಲೆ ಸಿಟ್ಟಾಗಿ ಜೀವ ಹಾನಿಗೆ ಮುಂದಾಗುವುದೂ ಉಂಟು. ಅಂಥ ಪ್ರಕರಣ ಈಚೆಗೆ ಹೆಚ್ಚಾಗುತ್ತಾ ಇದೆ.

ಬಿದಿರು ಬೆಳೆದು ಗಾಳಿಗೆ ಸಿಕ್ಕು ತುಯ್ದಾಡುವಾಗ ಒಂದಕ್ಕೊಂದು ಉಜ್ಜಿ

**ಚೀನಾದ ಒಂದು ಬಗೆಯ ಬಿದಿರು ಮೂವತ್ಮೂರು ವರ್ಷಕ್ಕೆ ಹೂ ಬಿಟ್ಟರೆ, ಇನ್ನೊಂದು ಅರವತ್ತಾರು ವರ್ಷಕ್ಕೆ ಹೂಬಿಟ್ಟು ಸಾಯುತ್ತದೆ. ಆ ಕಾಲಕ್ಕೆ ಬಿದಿರಿನ ಅಕ್ಕಿ ಎಲ್ಲೆಡೆ ಚೆಲ್ಲಾಡುತ್ತದೆ. ಇದನ್ನು ಆಯ್ದು ಸಾಮಾನ್ಯ ಅಕ್ಕಿಯನ್ನು ಬಳಸುವಂತೆಯೇ ಅಡುಗೆಗೆ ಜನ ಬಳಸುತ್ತಾರೆ. ಆದರೆ ಹೀಗೆ ಬಿದಿರು ಅಕ್ಕಿ ಬಿಡುವ ಸಮಯಕ್ಕೆ ಕ್ಷಾಮ ತಲೆದೋರುತ್ತದೆ ಎಂಬ ನಂಬಿಕೆ ಒಂದಿದೆ.**

ಭಯಂಕರ ಶಬ್ದ ಹೊರಡಿಸುತ್ತದೆ. ಬೇಸಿಗೆ ಕಾಲದಲ್ಲಿ ಇಂಥ ಬಿದಿರಿನ ಮಸೆತದಿಂದ ಬೆಂಕಿ ಹೊತ್ತಿಕೊಂಡು ಕಾಡ್ಗಿಚ್ಚಿಗೂ ಕಾರಣವಾಗುತ್ತದೆ. ಆದರೆ ಇಂಥ ಪ್ರಕರಣಗಳು ತೀರಾ ಅಪರೂಪ. ಹಾನಿಯಾದರೂ ತೀರಾ ನಗಣ್ಯ.

ಏಷಿಯಾದ ಭಾಗಗಳಿಂದಲೇ ಬೇರೆಡೆಗೆ ಬಿದಿರು ಹೋಗಿ ನೆಲೆಸಿದೆ. ಎಲ್ಲ ಕಡೆಯೂ ಅದು ಜನಕ್ಕೆ ಉಪಯುಕ್ತ ವಸ್ತುವಾಗಿದೆ. ಬಿದಿರಿನದು ವಿಶೇಷತೆ ಬಹಳ. ಚೀನಾದ ಒಂದು ಜಾತಿಯ ಬಿದಿರು ದಿನಕ್ಕೆ ಮೂರರಿಂದ ನಾಲ್ಕು ಅಡಿ ಬೆಳೆದು, ತನ್ನ ಗರಿಷ್ಠ ಎತ್ತರವಾದ ನೂರು ಅಡಿಗಳನ್ನು ಮುಟ್ಟಿ ನಿಂತು ಬಿಡುತ್ತದೆ. ಕೆಲವೊಮ್ಮೆ ಈ ಜಾತಿಯ ಬಿದಿರು ನೂರೈವತ್ತು ಅಡಿಗಳಿಗೂ ಮೀರಿ ಬೆಳೆದು ನಿಲ್ಲುವುದುಂಟು. ಇಂಥ ಅತಿಶೀಘ್ರ ಬೆಳವಣಿಗೆ ಬೇರೆ ಸಸ್ಯಗಳಲ್ಲಿ ಅಪರೂಪ. ಹಲವಾರು ಸಾಗುವಾನಿ ಮರಗಳು ನೂರಾರು ಅಡಿ ಎತ್ತರಕ್ಕೆ ಬೆಳೆಯುತ್ತವೆ ನಿಜ. ಆದರೆ ಅಂಥ ಬೆಳವಣಿಗೆಗೆ ಅವಕ್ಕೆ ಹಲವಾರು ದಶಕಗಳೇ ಬೇಕು. ಅಲ್ಲದೇ ಅವು ಎತ್ತರಕ್ಕೆ ಬೆಳೆಯುವ ಹಾಗೆಯೇ ದಪ್ಪಕ್ಕೂ ಸಾಕಷ್ಟು ಬೆಳೆಯುತ್ತವೆ. ಬಿದಿರು ಹಾಗಲ್ಲ. ತೆಳುವಾಗಿ, ಬಳಕುವ ಕಾಂಡ ಅದರದು.

ಚೀನಾದ ಒಂದು ಬಗೆಯ ಬಿದಿರು ಮೂವತ್ಮೂರು ವರ್ಷಕ್ಕೆ ಹೂ ಬಿಟ್ಟರೆ, ಇನ್ನೊಂದು ಅರವತ್ತಾರು ವರ್ಷಕ್ಕೆ ಹೂಬಿಟ್ಟು ಸಾಯುತ್ತದೆ. ಆ ಕಾಲಕ್ಕೆ ಬಿದಿರಿನ ಅಕ್ಕಿ ಎಲ್ಲೆಡೆ ಚೆಲ್ಲಾಡುತ್ತದೆ. ಇದನ್ನು ಆಯ್ದು ಸಾಮಾನ್ಯ ಅಕ್ಕಿಯನ್ನು ಬಳಸುವಂತೆಯೇ ಅಡುಗೆಗೆ ಜನ ಬಳಸುತ್ತಾರೆ. ಆದರೆ ಹೀಗೆ ಬಿದಿರು ಅಕ್ಕಿ ಬಿಡುವ ಸಮಯಕ್ಕೆ ಕ್ಷಾಮ ತಲೆದೋರುತ್ತದೆ ಎಂಬ ನಂಬಿಕೆ ಒಂದಿದೆ. ಆದರೆ ಇದಕ್ಕೆ ವೈಜ್ಞಾನಿಕ ಆಧಾರಗಳಿಲ್ಲ.

ಬಿದಿರು ಹೀಗೆ ಹೂ ಬಿಡುವ ಕಾಲಕ್ಕೆ ಆತ್ಮಹತ್ಯೆ ಮಾಡಿಕೊಳ್ಳುವ ವ್ಯಕ್ತಿಯಂತೆ ವರ್ತಿಸುತ್ತದೆ. ತನ್ನೆಲ್ಲ ಜೀವ ದ್ರವವನ್ನೂ ಅದು ಹೂ ಬಿಡಲು, ಅಕ್ಕಿ ಆಗಿಸಲು ವ್ಯಯಿಸಿ ಸತ್ತುಬಿಡುತ್ತದೆ. ಇದು ಕೇವಲ ಯಾವುದೋ ಒಂದು ಪ್ರದೇಶದ ಬಿದಿರಿಗೆ ಸೀಮಿತವಲ್ಲ. ಆ ಜಾತಿಯ ಬಿದಿರು ಜಪಾನಿನಲ್ಲಿರಲಿ, ಚೈನಾದಲ್ಲಿರಲಿ, ದೂರದ ವೆಸ್ಟಿಂಡೀಸ್‌ನ ಜಮೈಕಾದಲ್ಲಿ ಇರಲಿ, ಎಲ್ಲ ಗಿಡಗಳೂ ಒಂದೇ ಕಾಲಕ್ಕೆ ಹೂವರಳಿಸಿ ಒಮ್ಮೆಲೇ ಸತ್ತು ಹೋಗುತ್ತವೆ.

■ ಶೇಷಗಿರಿ ಜೋಡಿದಾರ್.



# ವಿಸ್ಮಯದ ಸೃಷ್ಟಿ ಪಿರಮಿಡ್

**ಈಜಿಪ್ತಿನ ಮರಳುಗಾಡಲ್ಲಿ ನಿಂತ ಪಿರಮಿಡ್‌ಗಳು ಇವತ್ತೂ ಮನುಷ್ಯನ ವಿಸ್ಮಯಕ್ಕೆ ಕಾರಣ. ವಿಶ್ವದ ಏಳು ಅದ್ಭುತಗಳ ಪಟ್ಟಿಯಲ್ಲಿ ಉಳಿದಿರುವ ಸ್ಮಾರಕ ಎಂದರೆ ಪಿರಮಿಡ್‌ಗಳು ಹಾಗೂ ತಾಜ್‌ಮಹಲ್. ಇಂಥದೊಂದು ವಿಸ್ಮಯದ ಸೃಷ್ಟಿ ಆಗಿದ್ದು ನಾಲ್ಕೂವರೆ ಸಾವಿರ ವರ್ಷಗಳ ಹಿಂದೆ. ಕಟ್ಟಡ ನಿರ್ಮಾಣ ತಂತ್ರಜ್ಞಾನದ ಆಧುನಿಕ ಆವಿಷ್ಕಾರಗಳೂ ಸಾಧಿಸಲು ಸಾಧ್ಯವಾಗದ ನಿಖರತೆಯನ್ನು ಈ ಪಿರಮಿಡ್‌ಗಳ ನಿರ್ಮಾಣದಲ್ಲಿ ಹೇಗೆ ಸಾಧಿಸಲಾಯಿತು! ಆಧುನಿಕರನ್ನು ಇವತ್ತಿಗೂ ಕಾಡುತ್ತಿರುವ ಪ್ರಶ್ನೆ ಇದು.**

ಈಜಿಪ್ತ್‌ನ ಜೀವನದಿ ನೈಲ್. ಅದರ ಪಶ್ಚಿಮ ದಂಡೆಯಲ್ಲಿ ಎಂಬತ್ತಕ್ಕೂ ಹೆಚ್ಚು ಪಿರಮಿಡ್‌ಗಳಿವೆ. ಅವುಗಳಲ್ಲಿ ಅತ್ಯಂತ ದೊಡ್ಡದು ಖುಫೂನ ಪಿರಮಡ್. ಕಳೆದ ನಾಲ್ಕು ಸಾವಿರ ವರ್ಷಗಳಲ್ಲಿ ಅಂಥ ಇನ್ನೊಂದು ವಿಸ್ಮಯಕಾರಿ ಕಟ್ಟಡದ ಸೃಷ್ಟಿ ಮಾನವನಿಗೆ ಸಾಧ್ಯವಾಗಿಲ್ಲ. ಆದ್ದರಿಂದಲೇ ಅದಕ್ಕೆ ಮಹಾನ್ ಪಿರಮಿಡ್ ಎಂಬ ಅಭಿದಾನ.

ಈ ಅದ್ಭುತ ಪಿರಮಿಡ್‌ನ ಎತ್ತರ 147 ಮೀಟರ್. ಅದರ ಬುಡದ ವಿಸ್ತಾರವೇ 503 ಹೆಕ್ಟೇರ್‌ಗಳಷ್ಟು. ಅಡಿಪಾಯದ ಆಯತಾಕಾರದ ಒಂದು ಪಾರ್ಶ್ವದ ಉದ್ದವೇ 220 ಮೀಟರ್. ಹೂವರ್ ಆಣೆಕಟ್ಟಿನ ಎತ್ತರದ ಮೂರನೇ ಒಂದರಷ್ಟು.

ಪಿರಮಿಡ್ ಕಟ್ಟುವ ಜಾಗ ಸಮಗೊಳಿಸಿ, ದೂರದಿಂದ ಭಾರಿ ಗಾತ್ರದ, ಕೆಲವೊಮ್ಮೆ 20 ಟನ್ ತೂಗುತ್ತಿದ್ದ ಸುಣ್ಣ ಬೆರೆತ ಕಲ್ಲು ಎಲ್ಲೆಲಿಂದಲೋ ಸಾಗಿಸಿ ತಂದು. ಅಷ್ಟೊಂದು ಎತ್ತರದಲ್ಲಿ ನಿಖರವಾಗಿ ಇಟ್ಟು ಪಿರಮಿಡ್‌ನ ಆಕೃತಿ ನಿರ್ಮಿಸುವುದು ಹೇಗೆ ಸಾಧ್ಯಆಯಿತು? ಎಂಬುದೇ ಆಧುನಿಕರನ್ನು ಇಂದಿಗೂ ಕಾಡುತ್ತಿರುವ ಪ್ರಶ್ನೆ. ಇಂಥದೊಂದು ಬೃಹತ್ ನಿರ್ಮಾಣಕ್ಕೆ ಸಾಮಾನ್ಯ ದಿನಗಳಲ್ಲಿ ಕನಿಷ್ಠ ಹದಿಮೂರು ಸಾವಿರ ಜನ, ಅಂತಿಮಘಟ್ಟದ ಕೆಲಸಗಳಲ್ಲಿ ದಿನ ಒಂದಕ್ಕೆ ನಲವತ್ತು ಸಾವಿರ ಜನ ದುಡಿಯಬೇಕಿತ್ತು ಎಂದು ಅಂದಾಜಿದೆ. ಇವರೆಲ್ಲರಿಗೆ ನೀಡಲಾಗುತ್ತಿದ್ದ ವೇತನವೇ ಭಾರಿಯಾಗಿತ್ತು. ಕೂಲಿಗಳಿಗೆ ದುಡಿಮೆಯ ಫಲವಾಗಿ ಕಾಳು, ಎಣ್ಣೆ, ಬಟ್ಟೆ ಮುಂತಾದ್ದು ನೀಡಲಾಗುತ್ತಿತ್ತು. ನಾವು ಮೇಲೆ ಹೇಳಿದ ಮಹಾನ್ ಪಿರಮಿಡ್ ನಿರ್ಮಾಣಕ್ಕೇ ಹನ್ನೊಂದು ದಶಲಕ್ಷ ಜಾಡಿ ಬಿಯರ್, 126 ದಶಲಕ್ಷ ಬ್ರೆಡ್ ತುಂಡುಗಳ ವಿತರಣೆ ಆಗಿರಬೇಕೆಂಬ ಅಂದಾಜಿದೆ.

ಕೂಲಿಗಳಿಗೆ ದುಡಿಮೆಯ ಫಲವಾಗಿ ಕಾಳು, ಎಣ್ಣೆ, ಬಟ್ಟೆ ಮುಂತಾದ್ದು ನೀಡಲಾಗುತ್ತಿತ್ತು. ನಾವು ಮೇಲೆ ಹೇಳಿದ ಮಹಾನ್ ಪಿರಮಿಡ್ ನಿರ್ಮಾಣಕ್ಕೇ ಹನ್ನೊಂದು ದಶಲಕ್ಷ ಜಾಡಿ ಬಿಯರ್, 126 ದಶಲಕ್ಷ ಬ್ರೆಡ್ ತುಂಡುಗಳ ವಿತರಣೆ ಆಗಿರಬೇಕೆಂಬ ಅಂದಾಜಿದೆ.

ಇಂಥದೊಂದು ಮಹಾನ್ ಕೃತಿಯ ನಿರ್ಮಾಣ ಸಾಮಾನ್ಯವೇನಲ್ಲ. ಕೇವಲ ದೇಹ ಶ್ರಮದ ದುಡಿಮೆಯ ಕೂಲಿಗಳಿದ್ದರೆ ಸಾಲದು. ಕುಶಲ ಕರ್ಮಿಗಳೂ ಬೇಕು. ಅಂಥವರ ಸಂಖ್ಯೆ ಸುಮಾರು ಹತ್ತು ಸಾವಿರ ಇರಬಹುದು. ಕಲ್ಲು ಕೆತ್ತಿ ಹದಗೊಳಿಸುವ ಇಂಥ

ಶಿಲ್ಪಿಗಳ ಸಮುದಾಯವೇ ಇರುತ್ತಿದ್ದ ಹಳ್ಳಿಯೊಂದನ್ನು ಇತ್ತೀಚೆಗೆ ಉತ್ಖನನದಲ್ಲಿ ಪತ್ತೆ ಮಾಡಲಾಗಿದೆ.

ಅಂಥ ಹಳ್ಳಿಯಲ್ಲಿ ನಾಲ್ಕರಿಂದ ಐದು ಸಾವಿರ ಜನ ವಾಸಿಸುತ್ತಾ ಇದ್ದಿರಬಹುದು. ಇಂಥ ಅದೆಷ್ಟು ಗ್ರಾಮಗಳನ್ನು ನಿರ್ಮಿಸಲಾಗಿತ್ತೋ ತಿಳಿಯದು.

ಮಹಾನ್ ಪಿರಮಿಡ್ ನಿರ್ಮಾಣದ ಕಾಲದ ಅಂದಾಜೇ ಬೆಚ್ಚಿ ಬೀಳಿಸುವಂತಿದೆ. ನೆಲಗಟ್ಟು ನಿರ್ಮಿಸಲು ಕನಿಷ್ಠ ಮೂರು ವರ್ಷ. ಕಟ್ಟಡ ನಿರ್ಮಾಣಕ್ಕೆ ನಾಲ್ಕರಿಂದ ಐದು ವರ್ಷ. ಮತ್ತೆ ಮೂರುವರ್ಷ ಸಾರುವೆಗಳನ್ನು ತೆಗೆಯಲು ಹಾಗೂ ಅಂತಿಮ ಸ್ವರೂಪ ನೀಡಲು ಬೇಕಾಗಿದೆ. ಏನಿಲ್ಲವೆಂದರೂ ಹತ್ತು ಸುದೀರ್ಘ ವರ್ಷಗಳ ನಿರಂತರ ಪರಿಶ್ರಮ.



**ಇಲ್ಲಿ ಬಳಸಲಾದ ಕಲ್ಲು ಗೀಜಾ ಪ್ರಸ್ಥಭೂಮಿಯಿಂದ ತಂದಿದ್ದು ಅಲ್ಲಿ ಕ್ವಾರಿಗಳಲ್ಲಿ ಕತ್ತರಿಸಿ ತೆಗೆದ ಕಲ್ಲನ್ನು ದೋಣಿಗಳಲ್ಲಿ ನೈಲ್ ನದಿಯ ಮುಖಾಂತರ ಸಾಗಿಸಿ ತಂದಿದ್ದಾರೆ. ಕಟ್ಟಡದಲ್ಲಿ ಬಳಸಲಾದ ಕೆತ್ತಿದ ಕಲ್ಲಿನ ತೂಕವೇ ಸರಾಸರಿ ಎರಡೂವರೆ ಟನ್‌ನಿಂದ ಆರು ಟನ್‌ಗಳಷ್ಟು**

ಇಲ್ಲಿ ಬಳಸಲಾದ ಕಲ್ಲು ಗೀಜಾ ಪ್ರಸ್ಥಭೂಮಿಯಿಂದ ತಂದಿದ್ದು. ಅಲ್ಲಿ ಕ್ವಾರಿಗಳಲ್ಲಿ ಕತ್ತರಿಸಿ ತೆಗೆದ ಕಲ್ಲನ್ನು ದೋಣಿಗಳಲ್ಲಿ ನೈಲ್ ನದಿಯ ಮುಖಾಂತರ ಸಾಗಿಸಿ ತಂದಿದ್ದಾರೆ. ಕಟ್ಟಡದಲ್ಲಿ ಬಳಸಲಾದ ಕೆತ್ತಿದ ಕಲ್ಲಿನ ತೂಕವೇ ಸರಾಸರಿ ಎರಡೂವರೆ ಟನ್‌ನಿಂದ ಆರು ಟನ್‌ಗಳಷ್ಟು.

ಇಷ್ಟು ಭಾರೀ ಗಾತ್ರದ ಕಲ್ಲುಗಳು ಒಂದಕ್ಕೊಂದು ಸರಿಯಾಗಿ ಹೊಂದಿಕೊಂಡು ಕೂರಬೇಕು. ಪಿರಮಿಡ್‌ನ ಆಕೃತಿಯಲ್ಲಿ ಇದು ತೀರಾ ಮುಖ್ಯ. ಆಗಿನ ಜನ ಎಷ್ಟು ನಿಖರವಾಗಿ ಬೃಹತ್‌ಗಾತ್ರದ ಕಲ್ಲುಗಳನ್ನು ಕೆತ್ತಿದ್ದಾರೆಂದರೆ, ಎಲ್ಲಿಯೂ ಬಿರುಕುಗಳಿಲ್ಲ. ಒಂದು ಕಲ್ಲಿಗೂ ಇನ್ನೊಂದು ಕಲ್ಲಿಗೂ ಇರುವ ಅತಿ ಹೆಚ್ಚಿನ ಅಂತರ ಎಂದರೆ ಕೇವಲ ಮೂರು ಮಿಲಿಮೀಟರ್. ಇಂಥ ಕಲ್ಲುಗಳನ್ನು ಸಾಗಿಸಿ ತಂದು, ಕಟ್ಟಡಕ್ಕೆ ಏರಿಸಲು ಒಂದು ಲಕ್ಷಕ್ಕೂ ಹೆಚ್ಚು ಜನ ಶ್ರಮಿಸಿದ್ದಾರೆ. ಎತ್ತಿಡಲು ಸಹಾಯ ಆಗುವ ಕಟ್ಟೆಗಳನ್ನು, ಸಾಗಿಸಲು ಅನುಕೂಲ ಆಗುವಂತೆ ಇಳಿಜಾರು ದಿಣ್ಣೆಗಳನ್ನು ಅವರು ನಿರ್ಮಿಸಿದ್ದರು ಎಂದು ಗ್ರೀಕ್ ಇತಿಹಾಸಕಾರ ಹೆರಡಾಟಸ್ ಹೇಳುತ್ತಾನೆ.

ಈಜಿಪ್ಟ್‌ನ ಜನಕ್ಕೆ ಸಾಕಷ್ಟು ಪರಿಜ್ಞಾನವಿತ್ತು. ಅವರು ನಕ್ಷತ್ರಗಳನ್ನು ಗುರುತಿಸ ಬಲ್ಲವರಾಗಿದ್ದರು. ನೈಲ್ ನದಿಯ ಏರಿಳಿತದ ನಿಖರ ಲೆಕ್ಕಾಚಾರ ಅವರ ಬಳಿ ಇರುತ್ತಿತ್ತು. ಲೆಕ್ಕಾಚಾರದ ವಿಷಯದಲ್ಲೂ ಅವರು ಪರಿಣತರು. 'ಪೈ'ನ ಮೌಲ್ಯ ಎಷ್ಟೆಂದು ಕೂಡ ಅವರಿಗೆ ತಿಳಿದಿತ್ತು. ಹಾಗೇ ವಿಸ್ತೀರ್ಣಗಳನ್ನು ಸರಿಯಾಗಿ ಲೆಕ್ಕ ಹಾಕುವ ಪದ್ಧತಿಯೂ ಅವರಿಗೆ ಗೊತ್ತಿತ್ತು. ಇದಲ್ಲದೇ ಪಿರಮಿಡ್‌ಗಳ ನಿರ್ಮಾಣಕ್ಕೆ ಬಳಸಲು ಸರಿಯಾದ ಆಯುಧಗಳೂ ಬೇಕಲ್ಲವೇ!

ಇವತ್ತು ಲೇಸರ್ ತಂತ್ರಜ್ಞಾನವಿದೆ. ಮಹಾನ್ ಪಿರಮಿಡ್‌ನ ನೆಲೆಗಟ್ಟನ್ನು ನಿಖರವಾಗಿ ಮಾಡಲು ಅದರಿಂದ ಮಾತ್ರ ಸಾಧ್ಯ. ಲೇಸರ್‌ನಿಂದ ನೆಲೆಗಟ್ಟು ನಿರ್ಮಿಸಿದಷ್ಟೇ ನಿಖರವಾಗಿ ನಾಲ್ಕೂವರೆ ಸಾವಿರ ವರ್ಷದ ಹಿಂದೆ ಈಜಿಪ್ಟಿಯನ್ನರು ಪಿರಮಿಡ್‌ಗಳ ನೆಲೆಗಟ್ಟು ನಿರ್ಮಿಸಿದ್ದೇ ವಿಸ್ಮಯಕ್ಕೆ ಕಾರಣ.

ಆ ಕಾಲಕ್ಕೆ ಇನ್ನೂ ಜನಕ್ಕೆ ಕಬ್ಬಿಣ, ಉಕ್ಕಿನ ಪರಿಚಯ ಇರಲಿಲ್ಲ. ಆಗಿನವರು ಬಳಸುತ್ತಾ ಇದ್ದುದು ತಾಮ್ರದ ಉಳಿ, ಸುತ್ತಿಗೆ, ಗರಗಸಗಳನ್ನು. ಇಂಥ ಸಾಧನಗಳನ್ನು ಬಳಸಿಯೇ ಅವರು ಬೃಹತ್ ಗಾತ್ರದ ಕಲ್ಲುಗಳನ್ನು ತಿದ್ದಿ ತೀಡಿ ಅದಕ್ಕೆ ನಿಖರ ಆಕಾರ ಕೊಟ್ಟರೆಂಬುದೇ ಇವತ್ತಿನವರಿಗೆ ಸೋಜಿಗದ ಸಂಗತಿಯಾಗಿ ಕಾಣುತ್ತದೆ.

ಒಂದು ದೇಶದ, ಒಂದು ಯುಗದ ಸಮೃದ್ಧ ಹಾಗೂ ಸೃಜನಾತ್ಮಕ ಕಲೆಗಳ ನಿರ್ಮಾಣವೇ ಆಯಾ ನಾಗರೀಕತೆಯನ್ನು ನಿರ್ಧರಿಸುತ್ತದೆ. ಹಾಗೆ ನೋಡಿದರೆ ಈಜಿಪ್ಟ್ ಅತ್ಯಂತ ಮಹತ್ವದ ಸಾಧನೆಗಳನ್ನು ಮಾಡಿದ ನಾಗರೀಕತೆ. ಆ ನಾಗರೀಕತೆಯನ್ನು ಮುಂದಿನ ಪೀಳಿಗೆಗೆ ನೆನಪಿಸಲೆಂದೇ ಪಿರಮಿಡ್‌ಗಳನ್ನು ಆ ಜನ ಬಿಟ್ಟು ಹೋಗಿದ್ದಾರೆ ಎನಿಸುತ್ತದೆ.

■ ಸದಾನಂದ.

## ಹೆಂಡತಿಯೇಕೆ ಅಪ್ಸರೆಯಂತೆ ಕಾಣುತ್ತಿಲ್ಲ ?

ಸುಪ್ರಸಿದ್ಧ ಹಾಲಿವುಡ್ ನಟ ಲಾರೆಲ್‌ಗೆ ಇದ್ದಕ್ಕಿದ್ದಂತೆ ಕಣ್ಣು ಮಂಜಾಗುತ್ತಿದೆ ಎಂಬ ಅನುಮಾನ ಬಂತು. ಕಣ್ಣಿನ ಡಾಕ್ಟರನ್ನು ಭೇಟಿಯಾಗಿ 'ಡಾಕ್ಟರ್ ಇತ್ತೀಚೆಗೆ ನನಗೇಕೋ ಕಣ್ಣು ಸರಿಯಾಗಿ ಕಾಣಿಸ್ತಿಲ್ಲವೇನೋ ಅಂತ ಅನುಮಾನ ಬಂದಿದೆ' ಎಂದ.

ಅದಕ್ಕೆ ಡಾಕ್ಟರ್ 'ನಿಮಗೆ ಹಾಗೆ ಅನುಮಾನ ಬರೋಕೆ ಕಾರಣ?' ಕೇಳಿದ. ಲಾರೆಲ್‌ಗೆ ಆ ಕ್ಷಣ ಏನು ಹೇಳಬೇಕೂಂತ ಹೊಳೆಯದೆ ತನ್ನ ಎಂದಿನ ಹಾಸ್ಯದ ಶೈಲಿಯಲ್ಲಿ 'ಮದುವೆಯಾದ ಹೊಸದರಲ್ಲಿ ನನ್ನ ಹೆಂಡತಿ ನನ್ನ ಕಣ್ಣಿಗೆ ಅಪ್ಸರೆ ಹಾಗೆ ಕಾಣಿಸ್ತಿದ್ಲು. ಈಗ ಹಾಗೆ ಕಾಣಿಸ್ತಾನೇ ಇಲ್ಲ ಡಾಕ್ಟರ್!' ಎಂದ.

## ಸೀತಮ್ಮನೋರ ಅದೃಷ್ಟ!

ಹೆಂಡತಿ - 'ನೋಡಿದಿರಾ ಪಕ್ಕದ ಮನೆ ರಾಮರಾಯರು ಸತ್ತು ಹೋದ್ರಲ್ಲ ಅವರ ಹೆಂಡತಿ ಸೀತಮ್ಮನವರಿಗೆ ಎರಡು ಲಕ್ಷ ರೂ ಇನ್‌ಷೂರೆನ್ಸ್ ಹಣ ಬಂತಂತೆ' ಎಂದಳು.

ಅದಕ್ಕೆ ಗಂಡ - 'ಇದರಲ್ಲೇನು ಆಶ್ಚರ್ಯ! ರಾಮರಾಯ ಇನ್‌ಷೂರೆನ್ಸ್ ಮಾಡಿದ್ದ ಅವನು ಸತ್ತು ಹೋದ. ಹೆಂಡತಿಗೆ ಎರಡು ಲಕ್ಷ ರೂ ಬಂತು' ಎಂದ.

ಹೆಂಡತಿ - 'ಹೂಂ, ನೀವು ಇನ್‌ಷೂರೆನ್ಸ್ ಮಾಡಿದೀರಿ, ಆದರೆ ನನಗೆಲ್ಲಿ ಬರಬೇಕು - ಸೀತಮ್ಮನೋರ ಅದೃಷ್ಟ!' ಎಂದಳು.

ಸಂಗ್ರಹ : ಶಾರದಾತನಯ

# ಅಭಾವಕ್ಕೆ ಮಳೆ ನೀರಿನ ಮದ್ದು

**ಸಾಮಾನ್ಯ ಜನ ಕೂಡ ತಮ್ಮ ತಮ್ಮ ಮನೆಗಳಲ್ಲೇ ಮಳೆ ನೀರನ್ನು ಶೇಖರಿಸಿ ಬಳಸಿಕೊಳ್ಳಬಹುದು. ವಿಧಾನ ಕೂಡ ಸುಲಭ ಮತ್ತು ಸರಳ. ಮನೆ ಕಟ್ಟುವಾಗಲೇ ಇದಕ್ಕೆ ಯೋಜನೆ ರೂಪಿಸಿಕೊಳ್ಳಬಹುದು.**



ನಗರೀಕರಣ ಸಮಸ್ಯೆಗಳ ಸರಮಾಲೆಯನ್ನೇ ಹೊತ್ತು ತರುತ್ತದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಂತೂ ಇಂತಹ ಸಮಸ್ಯೆಗಳು ಸರ್ವೆ ಸಾಮಾನ್ಯ ಎನಿಸಿಕೊಂಡಿದೆ. ಏಷ್ಯಾದಲ್ಲೇ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ನಗರವಾಗಿರುವ ಬೆಂಗಳೂರಿಗೆ ನೀರಿನ ಸಮಸ್ಯೆ ಇಂದಿನದಲ್ಲ. ದಿನದಿಂದ ದಿನಕ್ಕೆ ಈ ಸಮಸ್ಯೆ ತೀವ್ರವಾಗುತ್ತಿದೆ. ಪರಿಹಾರದ ಪ್ರಯತ್ನ ಯಶಸ್ಸನ್ನು ಕಂಡಿಲ್ಲ.

ಬೋರ್‌ವೆಲ್‌ಗಳು ಒಣಗಿ ನಿಂತಿವೆ. ಸುತ್ತಮುತ್ತಲಿನ ಕೆರೆಗಳು ಕಲುಷಿತಗೊಂಡಿವೆ. ಅಂತರ್ಜಲ ನೀರಿನ ಮಟ್ಟ ತೀರಾ ಕುಸಿದಿದೆ. 1995ರಲ್ಲಿ ಗಣಿ ಮತ್ತು ಭೂ ವಿಜ್ಞಾನ ಇಲಾಖೆ ನಡೆಸಿದ ವಿಶ್ಲೇಷಣೆ ಪ್ರಕಾರ ಬೆಂಗಳೂರಿನಲ್ಲಿ ಕುಡಿಯುವ ನೀರು ಭಾಗಶಃ ಕುಡಿಯಲು ಯೋಗ್ಯವಾದುದಲ್ಲ. ಹಳೆ ಬೆಂಗಳೂರಿನ ಸುಮಾರು 18 ಪ್ರದೇಶಗಳಲ್ಲಿ ನಡೆಸಿದ ವಿಶ್ಲೇಷಣೆ ನೋಡಿದರೇ ಬೆಚ್ಚಿ ಬೀಳುವಂತಹದ್ದು. ಶೇ.51ರಷ್ಟು ಭಾಗ ನೀರು ಬಳಕೆಗೆ ಯೋಗ್ಯವಲ್ಲ. ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ಎನ್ವಿರಾನ್‌ಮೆಂಟ್ ಮತ್ತು ಹೆಲ್ತ್ ಫೌಂಡೇಶನ್ ನಡೆಸಿದ ವಿಚಾರ ಸಂಕಿರಣ ಸಮಸ್ಯೆಯ ಪರಿಹಾರಕ್ಕೆ ದಾರಿ ತೋರಿಸಿದೆ. ಅದೆಂದರೆ ಮಳೆ ನೀರಿನ ಶೇಖರಣೆ ! ಬೆಂಗಳೂರಿನ ಜನತೆ, ಸಂಬಂಧಪಟ್ಟ ಇಲಾಖೆ, ಮಹಾನಗರ ಪಾಲಿಕೆ ಈ ನಿಟ್ಟಿನಲ್ಲಿ ಆಲೋಚಿಸಿದರೆ ಬೆಂಗಳೂರಿನ ನೀರಿನ ತೀವ್ರ ಕೊರತೆಯನ್ನು ಕೊಂಚವಾದರೂ ಬಗೆ ಹರಿಸಬಹುದು.

ಬೆಂಗಳೂರಿನ ಭೌಗೋಳಿಕ ಲಕ್ಷಣಗಳು ಮಳೆ ನೀರಿನ ಶೇಖರಣೆಗೆ ಅನುಕೂಲವಾಗಿದೆ. ಉತ್ತರ ಮತ್ತು ಪಶ್ಚಿಮ ಮಾನ್ಸೂನ್‌ನಿಂದಾಗಿ ವರ್ಷದಲ್ಲಿ ಒಂಭತ್ತು ತಿಂಗಳು ಇಲ್ಲಿ ಮಳೆ ಸುರಿಯುತ್ತದೆ. ಸುಮಾರು 800 ಮಿ.ಮೀ.ನಷ್ಟು ಮಳೆಯಾಗುತ್ತದೆ. ಈ ಮಳೆಯ ನೀರನ್ನು ಸೂಕ್ತ ರೀತಿಯಲ್ಲಿ ಶೇಖರಿಸಿದ್ದಲ್ಲಿ, ನಗರಕ್ಕೆ ಅಗತ್ಯವಿರುವ ಶೇ.5ರಷ್ಟು ಭಾಗ ಮಳೆ ನೀರಿನ ಶೇಖರಣೆಯಿಂದಲೇ ಸರಬರಾಜು ಮಾಡಬಹುದು! ಆದರೆ ದುರಾದೃಷ್ಟವಶಾತ್, ಈ ನೀರು ಚರಂಡಿ ನೀರಿನೊಂದಿಗೆ ಸೇರಿ ಅಪಾಯಕಾರಿ ರೋಗರುಜಿನಗಳ ಹರಡುವಿಕೆಗೆ ಕಾರಣವಾಗುತ್ತಿದೆ.

### ಬೆಂಗಳೂರಿನ ಮಳೆ ಬೀಳುವ ಪ್ರಮಾಣ

| ವರ್ಷ | ಒಟ್ಟು ಮಳೆ ಪ್ರಮಾಣ (ಮಿ.ಮೀ.) | ಒಟ್ಟು ಮಳೆಯ ದಿನಗಳು | ನೀರಿನ ಸಂಗ್ರಹಣೆ ಪ್ರಮಾಣ (ಲಕ್ಷ ಲೀಟರ್‌ಗಳಲ್ಲಿ) |
|---|---|---|---|
| 1994 | 587.10 | 107 | 46968.00 |
| 1995 | 1072.20 | 116 | 85776.00 |
| 1996 | 1173.30 | 118 | 93784.00 |
| 1997 | 714.40 | 88 | 57392.00 |
| 1998 | 143180 | 115 | 114544.00 |

ಸಾಮಾನ್ಯ ಜನ ಕೂಡ ತಮ್ಮ ತಮ್ಮ ಮನೆಗಳಲ್ಲೇ ಮಳೆ ನೀರನ್ನು ಶೇಖರಿಸಿ ಬಳಸಿಕೊಳ್ಳಬಹುದು. ವಿಧಾನ ಕೂಡ ಸುಲಭ ಮತ್ತು ಸರಳ. ಮನೆ ಕಟ್ಟುವಾಗಲೇ ಇದಕ್ಕೆ ಯೋಜನೆ ರೂಪಿಸಿಕೊಳ್ಳಬಹುದು. ಕೈಗಾರಿಕಾ ಕಟ್ಟಡಗಳನ್ನು ಅನುಕೂಲಕರವಾದ ರೀತಿಯಲ್ಲಿ ನಿರ್ಮಿಸಿದ್ದೇ ಆದಲ್ಲಿ ಪರಿಶುದ್ಧಗೊಳಿಸಿದ ಮಳೆ ನೀರನ್ನು ಬಳಸಿಕೊಳ್ಳಬಹುದು. ಕೈಗಾರಿಕೆಗಳ ಕಟ್ಟಡಗಳು ವಿಸ್ತಾರವಾಗಿದ್ದು, ಮೇಲ್ಛಾವಣಿ ಕೂಡ ವಿಶಾಲವಾಗಿ ಇರುತ್ತದೆ. ಮೇಲ್ಛಾವಣಿಯಿಂದ ಹರಿದು ಬರುವ ನೀರನ್ನು ಪೈಪುಗಳ ಮೂಲಕ ಕೆಳಕ್ಕೆ ಹಾಯಿಸಿ ಸಂಪು ಅಥವಾ ಟ್ಯಾಂಕಿನಲ್ಲಿ ಶೇಖರಿಸಿ, ನಂತರ ಬಳಸಬಹುದು. ಇಲ್ಲದಿದ್ದಲ್ಲಿ ಹೀರಿಕೊಳ್ಳುವಂತಹ ಗುಂಡಿಗಳಿಗೆ ಹಾಯಿಸಿ ಅಥವಾ ತಳಬಾವಿಗಳಿಗೆ ಹಾಯಿಸಿ ನೀರಿನ ಗುಣಮಟ್ಟ ಹೆಚ್ಚಿಸಬಹುದು. ತೋಟಕ್ಕೆ, ವಾಹನ ತೊಳೆಯಲು, ಬಟ್ಟೆ ಪಾತ್ರೆ ತೊಳೆಯಲು ಹಾಗೂ ಇನ್ನಿತರ ಉದ್ದೇಶಗಳಿಗೆ ಬಳಸಿಕೊಳ್ಳಬಹುದು. ಕುದಿಸಿ, ಫಿಲ್ಟರ್ ಮಾಡಿದಲ್ಲಿ ಕುಡಿಯಲು ಕೂಡ ಯೋಗ್ಯವಾದದ್ದೇ.

ಮಳೆ ನೀರಿನ ಶೇಖರಣೆಗೆ ಮನೆಯ ಮೇಲ್ಛಾವಣಿಯ ವಿನ್ಯಾಸ ಮುಖ್ಯ. ಮೇಲ್ಛಾವಣಿ ನಿರ್ಮಿಸುವಾಗಲೇ ಶೇಖರಣೆ ಸ್ಥಳಕ್ಕೆ ಹರಿದು ಬರುವ ನೀರಿನ ಪೈಪಿಗೆ ಬಲೆಯನ್ನು ಜೋಡಿಸಲಾಗುತ್ತದೆ. ಇಳಿಮುಖವಾಗಿರುವ ಮೇಲ್ಛಾವಣಿಗೆ PVC ಅಥವಾ ಝಿಂಕ್ ಷೀಟಿನ ಪೈಪನ್ನು ಅಳವಡಿಸಿದ್ದು, ಶೇಖರಣೆಯ ವ್ಯವಸ್ಥೆಗೆ ಅಳವಡಿಸುವ ಪೈಪಿಗೆ ಹರಿಯುವಂತೆ ಮಾಡಬೇಕು. ಸಂಗ್ರಹಗಾರ ಚೊಕ್ಕವಾಗಿ ಮತ್ತು ಸ್ವಚ್ಛವಾಗಿರಬೇಕು. ಪೈಪುಗಳು 90 ಮಿ.ಮೀ ವ್ಯಾಸದ, ಉತ್ತಮ ವಿನ್ಯಾಸದಾಗಿರಬೇಕು. ಪೈಪುಗಳು ಉಷ್ಣಾತೀತ ಕಿರಣಗಳಿಂದ ರಕ್ಷಣೆ ನೀಡುವುದರಿಂದ ಪಿವಿಸಿ ಪೈಪನ್ನೇ ಅಳವಡಿಸುವುದು ಒಳ್ಳೆಯದು. ಸುಮಾರು 1,000ದಿಂದ 1,200 ಚದುರ ಅಡಿಗಳಿಗೆ ಮೂರ್‍ನಾಲ್ಕು ಪೈಪುಗಳು ಸಾಕು. ನೀರನ್ನು ಶೇಖರಿಸುವ ಮೊದಲೇ ಫಿಲ್ಟರ್ ಮಾಡುವುದು ಒಳ್ಳೆಯದು. ಫಿಲ್ಟರ್ ಮಾಡುವ ರೀತಿ ಕೂಡ ಸರಳವಾದದ್ದು. ಕೆಳಕ್ಕೆ ಹರಿಸುವ ನೀರಿನ ಪೈಪಿನ ಮುಂಭಾಗಕ್ಕೆ ಸ್ಪಂಜಿನ ತುಂಡನ್ನು ಅಳವಡಿಸಿ, ಜಲ್ಲಿ, ಮರಳು, ಇದ್ದಲಿರುವ ಪಿ.ವಿ.ಸಿ. ಬಕೇಟಿನ ಅಳವಡಿಕೆ ಮತ್ತು ಉತ್ತಮ ಫಿಲ್ಟರ್ ವ್ಯವಸ್ಥೆಯಾಗಿರುತ್ತದೆ. ■

ಟಾಲ್‌ಸ್ಟಾಯ್ ಹೇಳಿದ

# ಮಕ್ಕಳ ಕತೆಗಳು

ಅನುವಾದ : ಚಂದ್ರಾ ನಾಗಭೂಷಣಸ್ವಾಮಿ

ಟಾಲ್‌ಸ್ಟಾಯ್ ರಶಿಯಾ ದೇಶದ ಲೇಖಕ, ಜಗತ್ತಿನ ಅತ್ಯುತ್ತಮ ಸಾಹಿತಿಗಳಲ್ಲಿ ಒಬ್ಬನು ಎಂದು ಪ್ರಸಿದ್ಧನಾಗಿದ್ದಾನೆ. ಆತ ತನ್ನ ರೈತರ ಮಕ್ಕಳಿಗೆಂದು ಕೆಲವು ಮಕ್ಕಳ ಕಥೆಗಳನ್ನು ಬರೆದಿದ್ದಾನೆ. ಬಹಳ ಹಿಂದಿನ ಕಾಲದಲ್ಲಿ ಈಸೋಪ್ ಎಂಬಾತ ಹೇಳಿದ ಕಥೆಗಳನ್ನು ಟಾಲ್‌ಸ್ಟಾಯ್ ಹೊಸ ರೀತಿಯಲ್ಲಿ ಹೇಳಿದ್ದಾನೆ. ಕಥೆಯ ಅರ್ಥ ಏನು, ನೀತಿ ಏನು ಎಂದು ಟಾಲ್‌ಸ್ಟಾಯ್ ಬಿಡಿಸಿ ಹೇಳುವುದಿಲ್ಲ. ಮಕ್ಕಳು ಜಾಣರು, ಕಥೆ ಅವರಿಗೆ ತಿಳಿಯುತ್ತದೆ ಎಂದು ಹೇಳುತ್ತಿದ್ದ. ಅವನು ಹೇಳಿದ ಕಥೆಗಳಲ್ಲಿ ಕೆಲವನ್ನು ಇಲ್ಲಿ ಪ್ರತಿ ತಿಂಗಳು ನೀಡುತ್ತೇವೆ. ನಿಮಗೂ ಇಷ್ಟ ಆದರೆ ಬೇರೆ ಮಕ್ಕಳಿಗೂ ಹೇಳಿ.

## ಬಣವೆಯಲ್ಲಿ ಮಲಗಿದ್ದ ನಾಯಿ



**ಒಂ**ದು ದಿನ ಒಂದು ನಾಯಿ ಹುಲ್ಲಿನ ಬಣವೆಯನ್ನು ಹತ್ತಿ ಮಲಗಿತ್ತು. ಆಗ ಒಂದು ಹಸು ಹೊಟ್ಟೆ ಹಸಿದುಕೊಂಡು ಹುಲ್ಲು ತಿನ್ನಲೆಂದು ಅಲ್ಲಿಗೆ ಬಂತು, ಹಸು ಹುಲ್ಲಿಗೆ ಬಾಯಿ ಹಾಕಿದ ಕೂಡಲೆ ನಾಯಿಗೆ ಎಚ್ಚರವಾಯಿತು. ಎದ್ದು ನಿಂತು ಜೋರಾಗಿ ಬೊಗಳುತ್ತಾ ಕಚ್ಚಲು ಬಂದಿತು. ಆಗ ಹಸು ''ಈ ನಾಯಿಗೆ ಎಲ್ಲೋ ಹುಚ್ಚು. ತಾನೂ ಹುಲ್ಲು ತಿನ್ನುವುದಿಲ್ಲ, ನನಗೂ ತಿನ್ನಲು ಬಿಡುವುದಿಲ್ಲ'' ಅಂದುಕೊಳ್ಳುತ್ತಾ ಹೊರಟು ಹೋಯಿತು.

## ರೈತ ಮತ್ತು ಅದೃಷ್ಟ ದೇವತೆ

**ಒಂ**ದು ದಿನ ಒಬ್ಬ ರೈತ ಹುಲ್ಲು ಕತ್ತರಿಸಲೆಂದು ಹೊಲಕ್ಕೆ ಹೋದ. ಸ್ವಲ್ಪ ಹೊತ್ತು ಕೆಲಸ ಮಾಡುತ್ತಿದ್ದಂತೆ ಅವನಿಗೆ ನಿದ್ದೆ ಮಾಡಬೇಕು ಅನ್ನಿಸಿತು. ಸರಿ, ಮಲಗಿ ನಿದ್ದೆ ಮಾಡಿಬಿಟ್ಟ.

ಆ ಹೊತ್ತಿಗೆ ಅದೃಷ್ಟ ದೇವತೆ ಅಲ್ಲಿಗೆ ಬಂದಳು. ಮಲಗಿದ್ದ ರೈತನನ್ನು ನೋಡಿದಳು. ''ಕೆಲಸ ಮಾಡುವ ಹೊತ್ತಿನಲ್ಲಿ ಮಲಗಿ ನಿದ್ದೆ ಮಾಡುತ್ತಿದ್ದಾನೆ. ಈಗ ಬೀಸುತ್ತಿರುವ ಗಾಳಿ ಸಂಜೆ ಹೊತ್ತಿಗೆ ಬಿರುಗಾಳಿ ಆಗುತ್ತದೆ. ಇವನು ಆಗ ಎದ್ದು ತನ್ನ ದುರದೃಷ್ಟವನ್ನು ಬಯ್ದುಕೊಳ್ಳುತ್ತಾನೆ. ನಾನೇನು ಮಾಡಲು ಆದೀತು'' ಎಂದುಕೊಂಡು ಹೊರಟು ಹೋದಳು.



# ಬೆಳಕು ನೀಡುವ ಬದುಕು

ಅವರು ಹಾಗೇ,

ಗಾಢಾಂಧಕಾರ. ಮುಂದೆ ಹೆಜ್ಜೆ ಇಡಲು ತಡವರಿಕೆ. ಇಲ್ಲಿಗೆ ಎಲ್ಲ ಮುಗಿಯಿತು ಎಂದು ನಿಶ್ಚಯಿಸುತ್ತೇವೆ. 'ದೇವರು ಮಾಡಿದಂತಾಗಲಿ' ಎಂದು ಸುಮ್ಮನಾಗಿ ಬಿಡುತ್ತೇವೆ. ಆದರೆ ಕೆಲವರಿರುತ್ತಾರೆ.

ತಾವಂತೂ ದಾರಿ ಸಾಗುವುದಾಗಲಿಲ್ಲ. ಈ ದಾರಿಯಲ್ಲಿ ಬರುವವರಿಗಾದರೂ ಬೆಳಕಾಗಲಿ ಎಂದು ಆಶಿಸುತ್ತಾರೆ. ಸಣ್ಣದೊಂದು ಕುಡಿ ದೀಪ ಹೊತ್ತಿಸಿ ಬಿಡುತ್ತಾರೆ. ತಮ್ಮ ಬದುಕು ಸುಟ್ಟುಕೊಂಡು ಅದಕ್ಕೆ ಎಣ್ಣೆ ಸುರುವಿ ಕಾಯುತ್ತಾ ಹೋಗುತ್ತಾರೆ. ಅಂಥವರ ಕತೆಗಳಿವು.

ಒಂದು ನಿಜ. ಅವರೆಲ್ಲ ನಮ್ಮ ನಿಮ್ಮಂಥವರೇ. ಆದರೆ ನನಗಾದ ಕೆಡುಕು ಇನ್ನೊಬ್ಬರಿಗೆ ತಟ್ಟದಿರಲಿ ಎಂದೋ, ಎಲ್ಲೋ ಕಂಡ ದಾರುಣತೆಗೆ ಮರುಗಿಯೋ ಛಲ ಹೊತ್ತು ನಿಂತು ಬಿಡುತ್ತಾರೆ. ಬೇರೆಯವರಿಗೆ ಬೆಳಕಾಗುತ್ತಾರೆ.

## ಪಟೇಲ್ ತೆರೆದಿಟ್ಟ ಜ್ಞಾನ ಭಂಡಾರ



■ ವ್ರಜಲಾಲ್ ಪಿ.ಪಟೇಲ್
4, ಪಾಂವ್ಯ್ಕಾ, ಮೊದಲ ಮಹಡಿ,
ಸ್ವಾಮಿ ನಾರಾಯಣ ಮಂದಿರದ ಎದುರು,
ದಾದರ್ (ಪೂರ್ವ),
ಮುಂಬಯಿ - 400 014
ದೂರವಾಣಿ : 022 - 4125174

ಈ ವಿಳಾಸ ನಿಮಗೆ ಬೇಕಾದೀತು.

ನೀವು ಐ.ಎ.ಎಸ್. ಮಾಡುವವರಿದ್ದರೆ, ಮಾಡಿದ್ದರೆ, ಅದೂ ಇಲ್ಲದಿದ್ದರೆ ನಿಮ್ಮ ಮಕ್ಕಳನ್ನು ಅಂಥದೊಂದು ಪರೀಕ್ಷೆ ಪಾಸು ಮಾಡಿಸಬೇಕು ಎಂದುಕೊಂಡಿದ್ದರೆ ಈ ವಿಳಾಸ ಇರುವುದಗತ್ಯ.

ಕಳೆದ ಹದಿನೈದು ವರ್ಷಗಳಿಂದ ಅಲ್ಲೊಂದು ಕಾಯಕ ನಡೆಯುತ್ತಿದೆ. ಶನಿವಾರ ಬಿಟ್ಟು ವಾರದ ದಿನಗಳಲ್ಲಿ ಬೆಳಿಗ್ಗೆ 7 ರಿಂದ 9.30ರವರೆಗೆ ಸಂಜೆಗಳಲ್ಲಿ ಸಂಜೆ 6 ರಿಂದ 9ರವರೆಗೆ ಮನೆಯ ಬಾಗಿಲು ನಿಮಗೆ ತೆರೆದಿರುತ್ತದೆ. ಭಾನುವಾರದ ಹಗಲಿಡೀ ಮನೆಯ ತೆರೆದ ಬಾಗಿಲಲ್ಲಿ ಹೋಗಿ ಬರುವ ಜನ.

ಅವರೆಲ್ಲರ ಕಣ್ಣುಗಳಲ್ಲಿ ಆಸೆ ಇದೆ. ಅಂತರಂಗದಲ್ಲಿ ತಮ್ಮದೇ ಬಡತನ, ಪುಸ್ತಕ ಕೊಳ್ಳಲಾಗದ ಅಸಹಾಯಕತೆಗಳ ಅರಿವಿದೆ. ತಾವು ಬರಲಿರುವ ಐ.ಎ.ಎಸ್ ಅಥವಾ ಐ.ಪಿ.ಎಸ್ ಪರೀಕ್ಷೆ ಪಾಸು ಮಾಡಲು ಇದೊಂದೇ ಕೊನೆಯ ದಾರಿ ಎಂದು ಅವರಿಗೆ ಗೊತ್ತು.

ಅಲ್ಲೊಂದು ಜ್ಞಾನ ಮಂದಿರವಿದೆ. ಅಪರೂಪದ, ಅತ್ಯಾಧುನಿಕ ಪುಸ್ತಕಗಳ ರಾಶಿಯೇ ಅಲ್ಲಿದೆ. ಒಮ್ಮೆಲೇ ಅಲ್ಲಿ ಹೋದರೆ ಹೇಗೆ ನಮಗೆ ಬೇಕಾದ ಪುಸ್ತಕ ಆರಿಸುವುದೆಂಬ ಸಂದಿಗ್ಧ. ಅದಕ್ಕಾಗಿ ಆತಂಕಪಡಬೇಕಾಗಿಲ್ಲ.

ಅಲ್ಲೊಬ್ಬ ಮನುಷ್ಯ ನಿಮಗಾಗಿಯೇ ಇರುತ್ತಾರೆ. ಪುಸ್ತಕದ ಹೆಸರು ಹೇಳುತ್ತಿದ್ದ ಹಾಗೆ ಅತ್ತಿತ್ತ ಕಣ್ಣಾಡಿಸಿ, ಮುರುಕು ಟೇಬಲ್ಲಿನ ಪುಸ್ತಕಗಳ ರಾಶಿಯಿಂದಲೋ, ಕಿಟಕಿಯಲ್ಲಿ ಕಿಕ್ಕಿರಿದು ತುಂಬಿದ ಪುಸ್ತಕಗಳ ನಡುವಿಂದಲೋ ಸರಕ್ಕನೆ ನಿಮಗೆ ಬೇಕಾದ ಪುಸ್ತಕ ಎತ್ತಿ ಮಮತೆಯಿಂದ ಕೈಗಿಡುತ್ತಾರೆ.

ಅವರ ಹೆಸರೇ ವ್ರಜಲಾಲ್ ಪಿ. ಪಟೇಲ್.

ಇಂಥ ಕಾಯಕ ಅವರು ಕಳೆದ ಹದಿನೈದು ವರ್ಷಗಳಿಂದ ನಡೆಸಿಕೊಂಡು ಬಂದಿದ್ದಾರೆ. ನಲವತ್ತರ ಪಟೇಲ್‌ಗೆ ಅದೊಂದು ಜೀವನ ಧರ್ಮ. ತನಗೆ ಅವತ್ತು ಆಸೆ ಇತ್ತು. ಕನಸುಗಳು ಇದ್ದವು. ದಾರಿ ತೋರುವ ಜನ ಇರಲಿಲ್ಲ. ಪುಸ್ತಕ ಕೊಳ್ಳಲು ದುಡ್ಡಿರಲಿಲ್ಲ. ಇವತ್ತು ಅಂಥ ಕಾರಣಕ್ಕೆ ಯಾರೂ ಐ.ಎ.ಎಸ್, ಐ.ಪಿ.ಎಸ್ ಎದುರಿಸಲಾಗದೇ ಬವಣೆ ಪಡಬಾರದು. ಅಂಥವರ ಹೆಗಲಾಸರೆಯಾಗಿ ತಾವು ನಿಲ್ಲಬೇಕೆಂಬ ಒಂದೇ ಆಶಯ.

ಇವತ್ತು ಹತ್ತು ಲಕ್ಷ ರೂಪಾಯಿ ಮೌಲ್ಯದ ಪುಸ್ತಕಗಳು ಅಲ್ಲಿವೆ.

'ಇದೆಲ್ಲ ಹ್ಯಾಗೆ ಸಾಧ್ಯ ಆಯಿತು?'

'ನೋಡಿ. ನಾನು ಸಿಗರೇಟು ಸೇದೋದಿಲ್ಲ. ಡ್ರಿಂಕ್ಸ್ ತಗೊಳ್ಳೋದಿಲ್ಲ. ಅಷ್ಟೇಕೆ ಚಹಾ ಕೂಡ ಕುಡಿಯೋದಿಲ್ಲ. ಸಾಕಷ್ಟು ದುಡ್ಡು ಉಳಿಯುತ್ತೆ'.

'ನಿಮ್ಮ ಹೆಂಡತಿ ಇನ್ನು ಪೊರಕೆ ಎತ್ತಿಕೊಂಡಿಲ್ಲವಾ ಕೈಗೆ?'

'ಅವಳು ನನ್ನ ಅರ್ಥ ಮಾಡಿಕೊಂಡಿದ್ದಾಳೆ'

ಶನಿವಾರದಂದು ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಬೇಕಾಗುವ ಪುಸ್ತಕಗಳನ್ನು ಹುಡುಕಿಕೊಂಡು ಅಲೆಯಲೆಂದೇ ಬಾಗಿಲು ಮುಚ್ಚಿ ಹೋಗುವ ಪಟೇಲ್ ಒಂದು ದಿನಕ್ಕೂ ತಮ್ಮ ಲೈಬ್ರರಿಗೆ ರಜಾ ಮಾಡಿಲ್ಲ. ಇಪ್ಪತ್ತೈದು ಸಾವಿರಕ್ಕೂ ಹೆಚ್ಚು ಪುಸ್ತಕಗಳ ನಡುವೆ ಜ್ಞಾನದಾಹಿಗಳನ್ನು ನಿತ್ಯ ಕಾಯುತ್ತಾ ಕುಳಿತುಕೊಳ್ಳುತ್ತಾರೆ.

ಸೌರಾಷ್ಟ್ರದ ಕುಗ್ರಾಮವೊಂದರಿಂದ ಬಂದ ವ್ರಜಲಾಲ್ ಪಟೇಲ್ ಈಗ ಎಕ್ಸೈಸ್ ಇಲಾಖೆಯಲ್ಲಿ ಇನ್ಸ್‌ಪೆಕ್ಟರ್. ದಿನಾ ಬೆಳಗಾದರೆ ತಪ್ಪದೇ ದಾದರ್‌ನಲ್ಲಿ 10.37ರ ಲೋಕಲ್ ಟ್ರೈನು ಹಿಡಿಯಬೇಕು. ಚರ್ಚ್‌ಗೇಟ್‌ನಲ್ಲಿ ಇಳಿದು ಆಫೀಸು ಸೇರಿದರೆ ಅಲ್ಲಿ ಆತ ಬೇರೆಯದೇ ವ್ಯಕ್ತಿ. ಕಚೇರಿ ದುಡಿತ ಮುಗಿಸಿ ಸಂಜೆ ಮನೆಗೆ ಬಂದರೆ, ಜ್ಞಾನಕಾಂಕ್ಷಿಗಳಿಗಾಗೇ ಕಾಯುವುದು, ಬಂದವರಿಗೆ ನೆರವಾಗುವುದು, ಸಲಹೆ ನೀಡುವುದು ಅವರ ಬದುಕಿನ ಅವಿಭಾಜ್ಯ ಅಂಗ.

ಕೆಲವು ವರ್ಷದ ಹಿಂದೆ ಅವರನ್ನು ಸಿಬಿಐಗೆ ವರ್ಗಾಯಿಸಲಾಯಿತು. ಅಲ್ಲಿ ತಿರುಗಾಟ ಬಹಳ. ನಾಲ್ಕು ವರ್ಷ ಅಲ್ಲಿ ದುಡಿದು, ಇದರಿಂದ ತಮ್ಮ ಲೈಬ್ರರಿಗೆ ತೊಂದರೆ ಎಂದರಿತು ಮೂಲ ಇಲಾಖೆಗೇ ಮತ್ತೆ ವರ್ಗಾ ಮಾಡಿಸಿಕೊಂಡರು.

'ಅವತ್ತು ನನ್ನಲ್ಲಿ ಐ.ಎ.ಎಸ್ ಮಾಡಬೇಕೆಂಬ ಕನಸಿತ್ತು. ಕೈಯಲ್ಲಿ ಹಣ ಇರಲಿಲ್ಲ. ದಾರಿ ತೋರುವವರೂ ಇರಲಿಲ್ಲ. ಉಳಿದವರಿಗೆ ನನ್ನಂಥ ತೊಂದರೆ ಬರದಿರಲಿ ಎಂಬುದು ನನ್ನ ಆಶಯ. ಸಾಧ್ಯವಾದಲ್ಲಿ ಅಂಥ ಕೆಲವರಿಗಾದರೂ ನೆರವಾಗುವುದು ನನ್ನ ಉದ್ದೇಶ'.

ವ್ರಜಲಾಲ್ ಪಟೇಲ್ ತಾವು ದಾದರಿನ ಮನೆಯಲ್ಲೇ ಉಚಿತ ಲೈಬ್ರರಿ ಆರಂಭಿಸಿದ್ದಕ್ಕೆ ಕಾರಣ ಹೇಳುತ್ತಾರೆ. ಕೆಲವೇ ದಿನಗಳಲ್ಲಿ ಕೇವಲ ಪುಸ್ತಕ ಎರವಲು ನೀಡುವುದರಿಂದ ಸಮಸ್ಯೆಯ ನಿವಾರಣೆ ಸಾಧ್ಯ ಇಲ್ಲ ಎಂದು ಅರಿತುಕೊಂಡರು. ತಜ್ಞರ ತಂಡ ಒಂದನ್ನು ಕಟ್ಟಿ ಅವರಿಂದ ಉಚಿತ ತರಬೇತಿ ತರಗತಿ ನಡೆಸುವುದೂ ಅವರು ಮಾಡುತ್ತಾರೆ. ಮುಂಬಯಿನ ಕೆಲವು ಕಾಲೇಜುಗಳ ಸಹಯೋಗದಲ್ಲಿ ಇಂಥ ಉಚಿತ ತರಬೇತಿ ಶಿಬಿರಗಳು ನಡೆಯುತ್ತಿವೆ.

ಈ ವರ್ಷ ಪಟೇಲರ ಲೈಬ್ರರಿ ಹೆಚ್ಚು ಉಪಯುಕ್ತ ಆಗಲೆಂದು ಕರಪತ್ರ ಮಾಡಿಸಿ ಕಾಲೇಜುಗಳಿಗೆ ಹಂಚಿದ್ದೇ ದೊಡ್ಡ ತೊಂದರೆ ಆಗಿದೆ. ಎಂದಿಗಿಂತ ಭಾರೀ ಸಂಖ್ಯೆಯಲ್ಲಿ ಪುಸ್ತಕ ಹುಡುಕಿಕೊಂಡು ಬರುವವರಿಗೆಂದೇ ಹೆಚ್ಚು ಪುಸ್ತಕ ಬೇಕಾದವು. ಕೈಯಲ್ಲಿ ಅಷ್ಟು ಕಾಸಿರಲಿಲ್ಲ. ಇದು ತಿಳಿದ ಯಾರೋ ಪುಣ್ಯಾತ್ಮರು ಐವತ್ತು ಸಾವಿರ ರೂಪಾಯಿ ನೀಡಿ ನೆರವಾದರು.

ಹಾಗೆಂದು ಇಲ್ಲಿ ಎಲ್ಲವೂ ಸುಗಮ ಎಂದೆಣಿಸಬೇಡಿ. ಭಂಡರು ಎಲ್ಲೆಲ್ಲೂ ಇರುತ್ತಾರೆ, ಒಮ್ಮೆ ಸಿಬಿಐ ಇನ್ಸ್‌ಪೆಕ್ಟರ್ ಆಗಿದ್ದ ಪಟೇಲರ ಕಣ್ಣೆದುರಲ್ಲೇ ಒಂದು ಲಕ್ಷ ರೂಪಾಯಿವರೆಗಿನ ಮೌಲ್ಯದ ಪುಸ್ತಕ ಕದ್ದುಕೊಂಡು ಹೋಗಿದ್ದಾರೆ.

ಅದಾದ ಮೇಲೆ ಈಗ ಪಟೇಲರು ಅನಿವಾರ್ಯವಾಗಿ 500 ರೂಪಾಯಿ ಠೇವಣಿ ಕಡ್ಡಾಯ ಮಾಡಿದ್ದಾರೆ.

ನೀವು ಮುಂಬಯಿಗೆ ಹೋದರೆ ಒಮ್ಮೆ ಪಟೇಲರ ಮನೆಗೆ ಹೋಗಿ 'ಹಲೋ' ಎನ್ನಬಹುದು. ಮೆಚ್ಚುಗೆಯ ನುಡಿಯಾಡಿ ಬರಬಹುದು. ಅಥವಾ ಅವರ ಸ್ಫೂರ್ತಿಯಿಂದಾಗಿ ನಿಮ್ಮಲ್ಲಿ ಏನಾದರೊಂದು ಸಾಧಿಸುವ ಆಸೆಯೂ ಚಿಗುರಬಹುದೇನೋ!

ಯಾರಿಗೆ ಗೊತ್ತು.

# ತನ್ನ ಊರಿಗೊಂದು ಭವಿಷ್ಯ ಕೊಟ್ಟ ಚೌಧುರಿ



ಅದೃಷ್ಟ ಕೂಡಿ ಬಂದು ದೊಡ್ಡ ಕೆಲಸ ಸಿಕ್ಕವರು, ವಿದೇಶಗಳಿಗೆ ಹೋಗಿ ಆರಾಮಾಗಿ ದುಡ್ಡು ಗಳಿಸಿದವರು ಸಾಮಾನ್ಯವಾಗಿ ತಮ್ಮ ಊರಲ್ಲಿ ಶ್ರೀಮಂತಿಕೆ ಮರೆಸಲು ಯತ್ನಿಸುತ್ತಾರೆ. ಒಂದಿಷ್ಟು ಕಾಸು ಎತ್ತಿಕೊಟ್ಟು ಮಹಾ ದಾನಿಗಳೆಂದು ಬೀಗುವುದೇ ಹೆಚ್ಚು.

ಅಂಥದರಲ್ಲಿ ಹದಿನಾಲ್ಕು ವರ್ಷದ ಹಿಂದೆ, ವಿದೇಶದಲ್ಲಿ ಒಳ್ಳೇ ಉದ್ಯೋಗದಲ್ಲಿದ್ದ ಡಿ.ಡಿ. ಚೌಧುರಿ ಅದನ್ನು ಬಿಟ್ಟು ಊರ ಉದ್ಧಾರಕ್ಕೆ ನಿಲ್ಲುತ್ತೇನೆ ಎಂದಾಗ, ಅಮೇರಿಕಾದ ಸಹೋದ್ಯೋಗಿಗಳು ಒಳಗೆ ನಕ್ಕಿದ್ದರು. ಇದೆಲ್ಲ ಒಂದೆರಡು ದಿನದ ಸೋಡಾಬಾಟಲ್ ಉತ್ಸಾಹ, ಅದು ತಣ್ಣಗಾದ ಮೇಲೆ ತೆಪ್ಪಗೆ ಇಲ್ಲಿಗೆ ಹಿಂದಿರುಗುತ್ತಾನೆ ಈ ಚೌಧುರಿ ಎಂದುಕೊಂಡಿದ್ದರು. ಆದರೆ ಆತನದು ಗಟ್ಟಿ ಜೀವ. ಹುಟ್ಟೂರಿಗೆ ಏನಾದರೂ ಮಾಡಿಯೇ ತೀರಬೇಕೆಂಬ ಛಲ. ಹದಿನಾಲ್ಕು ವರ್ಷ ಕಳೆದ ಮೇಲೂ ಆತ ಇಲ್ಲಿಯೇ ಉಳಿದಿದ್ದಾರೆ. ಅವರ ಪರಿಶ್ರಮದಿಂದ ಹಳ್ಳಿಯ ಸ್ವರೂಪ ಇವತ್ತು ಸಾಕಷ್ಟು ಬದಲಾಗಿದೆ. ಚೌಧುರಿ ಹುಟ್ಟಿ ಬೆಳೆದಿದ್ದು ಬಿಹಾರದ ಬಾಗಲ್ಪುರ ಜಿಲ್ಲೆಯ ಪೋಥಿಯಾ ಎಂಬ ಹಳ್ಳಿಯಲ್ಲಿ. ಇವತ್ತಿಗೂ ನೀವು ಆ ಹಳ್ಳಿಯಿಂದ ಪಕ್ಕಾ ರಸ್ತೆ ಕಾಣಬೇಕೆಂದರೆ ಐದು ಕಿಲೋಮೀಟರ್ ಕಾಡುಹಾದಿಯಲ್ಲಿ ನಡೆಯಲೇಬೇಕು. ಅದೂ ಹತ್ತಿರದ ಸಿನ್ ಹೌಲಾಗೇ ಬಂದರೆ ತರಕುಬರಕು ರಸ್ತೆ ಸಿಗುತ್ತದೆ. ಅಲ್ಲಿಂದ ಜಿಲ್ಲಾ ಕೇಂದ್ರವಾದ ಭಾಗಲ್ಪುರಕ್ಕೆ 30 ಕಿಲೋ ಮೀಟರ್.

ಡಿ.ಡಿ. ಚೌಧುರಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಲ್ಲಿ ಪೆಟ್ರೋಕೆಮಿಕಲ್ಸ್ ವಿಷಯದಲ್ಲಿ ಡಿಗ್ರಿ, ಜೊತೆಗೊಂದು ಎಂ.ಬಿ.ಎ. ಡಿಗ್ರಿಯನ್ನು ಪಡೆದು, ಅಮೇರಿಕಾಕ್ಕೆ ಹೋಗಿ ಎಕನಾಮಿಕ್ಸ್‌ನಲ್ಲಿ ಪಿ.ಎಚ್.ಡಿ. ಪದವಿಯನ್ನು ಪಡೆದರು. ಅಲ್ಲಿ ಇಪ್ಪತ್ತು ವರ್ಷಗಳ ಸುಖದ ಜೀವನ. ದಂಡಿಯಾಗಿ ದುಡ್ಡು. ಹದಿನಾಲ್ಕು ವರ್ಷಗಳ ಹಿಂದೆ ಹುಟ್ಟೂರಿಗೆ ಬಂದಾಗ ಆಘಾತ.

ಸ್ವತಂತ್ರ ಭಾರತದ ಮಟ್ಟಿಗೆ ಅವರ ಹುಟ್ಟೂರು ಪೋಥಿಯಾ ಅಸ್ತಿತ್ವದಲ್ಲಿಯೇ ಇರಲಿಲ್ಲ. 1200 ಜನಸಂಖ್ಯೆಯ ಆ ಹಳ್ಳಿಯ ಜನ ಮಕ್ಕಳನ್ನು ಶಾಲೆಗೆ ಕಳಿಸಬೇಕೆಂದರೆ, ನಿತ್ಯ ಅವರು ಹತ್ತು ಕಿಲೋಮೀಟರ್ ನಡೆದುಹೋಗಿ, ವಾಪಸು ಬರಬೇಕಿತ್ತು. ತೀರಾ ಹತ್ತಿರದ ಆಸ್ಪತ್ರೆ ಎಂದರೆ ಕೇವಲ ಇಪ್ಪತ್ತೈದು ಕಿಲೋಮೀಟರ್ ದೂರವಿತ್ತು. 'ಅಂಚೆ ಕಚೇರಿ' ಎಂದರೆ 'ಹಾಗೆಂದರೇನು?' ಎಂದು ಜನ ಕೇಳುವಂಥ ಪರಿಸ್ಥಿತಿ.

ಇದೆಲ್ಲ ನೋಡಿದ ಅಮೇರಿಕಾದಿಂದ ವಾಪಸಾದ ಚೌಧುರಿಗೆ ರೇಗಿತು. ಹಳ್ಳಿಯ ಜನಕ್ಕೆ ಮನುಷ್ಯರಾಗಿ ಬದುಕುವುದು ಕಲಿಸಬೇಕು. ಅವರ ಹಕ್ಕುಗಳ ಬಗ್ಗೆ ತಿಳಿಸಿ ಹೇಳಬೇಕು ಎನ್ನಿಸಿತು. ಈ ಜನ ತಾವಾಗಿ ಹೋಗಿ ಕೇಳುತ್ತಿಲ್ಲ. ಅದಕ್ಕಾಗಿಯೇ ಸರ್ಕಾರ ಸುಮ್ಮನಿದೆ ಎಂದುಕೊಂಡರು. ತಾವೇ 'ಹಳ್ಳಿಗೆ ಇಂಥದ್ದು ಬೇಕು' ಎಂದು ಅರ್ಜಿ ಹಿಡಿದು ಓಡಾಡಲು ಆರಂಭಿಸಿದರು. ಆಗ ಇಲ್ಲಿಯ ಅಧಿಕಾರ ಶಾಹಿಯ ಭ್ರಷ್ಟತೆ, ಕಪಿಮುಷ್ಟಿ ಏನೆಂದು ಅರಿವಾಯಿತು. ಎಷ್ಟೋ ಸಲ ಹಳ್ಳಿಗೆ ಆಗಬೇಕಾದ ಕೆಲಸಗಳಿಗಾಗಿ ತಮ್ಮ ಜೇಬಿನಿಂದ ಇವರು ದುಡ್ಡು ಎತ್ತಿ ಕೊಡಬೇಕಾಯಿತು.

ಇದು ತನ್ನೊಬ್ಬನಿಂದ ಆಗುವ ಕೆಲಸ ಅಲ್ಲವೇ ಅಲ್ಲ ಎಂದು ಅರಿವಾದದ್ದು ಆಗ. ಶಾಲೆ ಎಂಬುದು ಕೂಡ ಇಲ್ಲದ ಹಳ್ಳಿಯಲ್ಲಿ ಹಕ್ಕುಗಳ ಅರಿವಾದರೂ ಹೇಗೆ ಬರಬೇಕು?

ಹುಟ್ಟೂರು ಪೋಥಿಯಾದಲ್ಲಿ ಶಾಲೆ ಆರಂಭಿಸಿದರು. ಅದೂ ತಮ್ಮ

ಮನೆಯಲ್ಲೇ. ಬಂದವರು ಬರೀ ಆರು ಜನ. ಅದೂ ಹುಡುಗರು. ಹುಡುಗಿಯರನ್ನು ಶಾಲೆಗೆ ಕಳಿಸಲು ಹೇಳಿದರೆ ಹಳ್ಳಿಯ ಜನ ಬಿದ್ದು ಬಿದ್ದು ನಕ್ಕರು. ಈ ಮನುಷ್ಯ ವಿದೇಶಕ್ಕೆ ಹೋಗಿ ಬಂದು, ಊರಿನ ಹುಡುಗಿಯರನ್ನೆಲ್ಲ ನಾಶ ಮಾಡಲು ಹೊರಟಿದ್ದಾನೆ ಎಂಬುದೇ ಅವರ ಭಾವನೆ. ಹುಡುಗಿಯರು ಶಾಲೆಗೆ ಹೋಗುವುದೆಂದರೇನು? ಅಕ್ಷರ ಕಲಿಯುವುದೆಂದರೇನು?' ಇದೆಲ್ಲ ಕಲಿಗಾಲದ ಮಹಿಮೆ. ಕೇಡುಗಾಲಕ್ಕೆ ಇದೆಲ್ಲ ಎಂಬುದೇ ಆ ಹಳ್ಳಿಗರ ಭಾವನೆ.

ಅಂಥದರಲ್ಲಿಯೇ ಶಾಲೆಗೆ ಬಂದ ಆರು ಜನಕ್ಕೆ ತಾವೇ ಪಾಠ ಮಾಡುತ್ತಾ ಚೌಧುರಿ ಮನ ಒಲಿಸುತ್ತಾ ಹೋದರು. ಈ ಮನುಷ್ಯ ಕೆಟ್ಟವನಲ್ಲ. ಆತನಲ್ಲಿ ದುರುದ್ದೇಶವಿಲ್ಲ. ನಮ್ಮ ಉದ್ಧಾರಕ್ಕಾಗಿಯೇ ಇದೆಲ್ಲ ಮಾತು ಹೇಳುತ್ತಾ ಇದ್ದಾನೆ ಎಂದು ನಿಧಾನವಾಗಿ ಆದರೂ ಅರಿತುಕೊಂಡರು. ಈಗ ಅಲ್ಲಿ ಎರಡು ಶಾಲೆಗಳಿವೆ. ಒಂದು ಹುಡುಗರಿಗೆ, ಇನ್ನೊಂದು ಹುಡುಗಿಯರಿಗೆ. ಹುಡುಗಿಯರು ಶಾಲೆ ಮುಗಿಸಿದ ನಂತರ ಜೀವನದಲ್ಲಿ ಆಧಾರವಾಗಲೆಂದು ನಾನಾ ಬಗೆಯ ವೃತ್ತಿ ಶಿಕ್ಷಣ ಕೂಡ ನೀಡಲಾಗುತ್ತಿದೆ. ಇಂಥ ಶಾಲೆಗಳಿಂದ ಹೊರ ಬೀಳುವ ಹುಡುಗಿಯರಿಗಾಗಿ, ಏನಾದರೊಂದು ವೃತ್ತಿಯಲ್ಲಿ ತೊಡಗಲು, ಚೌಧುರಿಯವರೇ ಆರಂಭಿಸಿದ ಗ್ರಾಮೀಣ ಬ್ಯಾಂಕ್‌ನಿಂದ ಮೂರು ಸಾವಿರ ರೂಪಾಯಿ ಸಾಲ ನೀಡಲಾಗುತ್ತಿದೆ. ಎಂಜಿನಿಯರಿಂಗ್, ವೈದ್ಯಕೀಯ ಕೋರ್ಸ್ ಸೇರಬಯಸುವ ಹುಡುಗರನ್ನು ಆರಿಸಿ ಅವರಿಗೆ ವಿಶೇಷ ಬಗೆಯ ಶಿಕ್ಷಣ, ತರಬೇತಿ ನೀಡಲಾಗುತ್ತಿದೆ.

ಈಗ ಹಳ್ಳಿ ಸುಧಾರಿಸಿದೆ. ಹಳ್ಳಿಯವರೇ ಹೋರಾಡಿ ಊರಿನವರೆಗೆ ರಸ್ತೆ ಬರಲು ಸರ್ಕಾರದ ಪರವಾನಗಿ ತಂದಿದ್ದಾರೆ. ಕಳೆದ ಬಾರಿ ಬಿದ್ದ ಮಳೆಯಿಂದ ಮನೆಗಳು, ಚೌಧುರಿ ಕಟ್ಟಿದ ಶಾಲೆಗಳು ಬಿದ್ದು ಹೋಗಿದ್ದರೂ ಆತಂಕಕ್ಕೆ ಕಾರಣವಿಲ್ಲ. ಅವುಗಳು ಮತ್ತೆ ತಲೆ ಎತ್ತಲು ಅಗತ್ಯವಾದ ಕ್ರಮ ಕೈಗೊಳ್ಳಲಾಗಿದೆ. ಇಂಥ ನೂರು ಅಡೆತಡೆ ಅವರು ಎದುರಿಸಿದ್ದಾರೆ. ಇದೊಂದು ಸಣ್ಣ ವಿಷಯ, ಸದ್ಯಕ್ಕೆ ಊರಿಗೊಂದು ಇಂಟರ್ ಮೀಡಿಯೆಟ್ ಕಾಲೇಜು ತರಬೇಕು.

ಇಂಥ ಉದಾತ್ತ ಜೀವಕ್ಕೆ ನೀವೊಂದು ಮೆಚ್ಚುಗೆಯ ನುಡಿ ಹೇಳುವಿರಾದರೆ ಇಲ್ಲಿದೆ ವಿಳಾಸ:

ಡಿ.ಡಿ. ಚೌಧುರಿ, ಪೋಥಿಯಾ ಗ್ರಾಮ,
ಭಾಗಲ್ಪುರ ಜಿಲ್ಲೆ, ಬಿಹಾರ ರಾಜ್ಯ - 813205.

# ಪ್ರಕೃತಿಯನ್ನು ಪರಿಚಯಿಸುವ ಸೇನ್ ಗುಪ್ತಾ

ನಗರಗಳು ಕಾಂಕ್ರೀಟ್ ಕಾಡುಗಳಾಗುತ್ತಿವೆ. ಎಳೆಯ ಮಕ್ಕಳು ಈ ಅರಣ್ಯದ ಪಂಜರದಲ್ಲಿ ಬಂದಿಗಳಾಗುತ್ತಿವೆ. ಭತ್ತ ಎಲ್ಲಿಂದ ಬರುತ್ತದೆ? ಎಂದರೆ ಅಂಗಡಿಯಿಂದ ಎಂದೋ ಹಾಲು ಉತ್ಪಾದನೆ ಆಗುವುದು ಡೈರಿಯಿಂದ ಎಂದು ಸಹಜವಾಗಿಯೇ ಇಂದಿನ ಮಕ್ಕಳು ಮುಗ್ಧವಾಗಿ ಉತ್ತರಿಸಬಲ್ಲವರಾಗಿರುತ್ತಾರೆ. ಉಸಿರು ಕಟ್ಟಿಸುವ ನಗರಗಳಿಂದ ಈ ಮಕ್ಕಳನ್ನು ದೂರ ಕರೆದೊಯ್ದು ಕಾಡಿನ ನಡುವೆ ಸ್ವಚ್ಛ ಗಾಳಿ, ಪರಿಸರ ಪರಿಚಯಿಸುವ ಸಣ್ಣದೊಂದು ಕಾಯಕ ಸೇನ್ ಗುಪ್ತಾದು. ಕಲ್ಕತ್ತಾದ ಮಕ್ಕಳಿಗೊಂದು ವರದಾನದಂತೆ ಬಂದವರು ಅವರು.



ಅಶೋಕ್ ಸೇನ್ ಗುಪ್ತಾ ಕಲ್ಕತ್ತಾದ ಕಾಂಕ್ರೀಟ್ ಕಾಡಿನಲ್ಲಿ ಕಳೆದು ಹೋಗುವ ಎಲ್ಲ ಸಾಧ್ಯತೆಗಳೂ ಇದ್ದವು. ಖಾಸಗಿ ಕಂಪನಿಯೊಂದರಲ್ಲಿ ಆತ ಡ್ರಾಫ್ಟ್ಸ್‌ಮನ್. ಚಿಕ್ಕಂದಿನಿಂದಲೂ ಅಲ್ಲಲ್ಲಿ ತಿರುಗಿ ಅಭ್ಯಾಸ. ಆ ಅಭ್ಯಾಸ ಕೆಲಸಕ್ಕೆ ಸೇರಿದ ಮೇಲೂ ಅವರನ್ನು ಬಿಡಲಿಲ್ಲ. ಬಿಡುವು ಸಿಕ್ಕಾಗೆಲ್ಲ ಕಾಡು ಸುತ್ತುವ, ಹಿಮಾಲಯದ ಗಿರಿಪಂಕ್ತಿಯಲ್ಲಿ ತಿರುಗಾಡುವ ಕೆಲಸ ಮುಂದುವರಿಸಿದರು.

ತಾನು ಕಂಡುಂಡ ಪ್ರಕೃತಿಯ ಸೊಬಗನ್ನು ಎಳೆಯರಿಗೂ ಉಣಬಡಿಸಬೇಕು. ಕಲ್ಕತ್ತಾದಂಥ ಉಸಿರು ಕಟ್ಟಿಸುವ ನಗರದಂತೆ, ಪ್ರಕೃತಿಯ ಮಡಿಲಲ್ಲಿ ಎಳೆಯ ಜೀವಗಳು ನಲಿದಾಡಬೇಕು. ಇದು ಅಶೋಕ್ ಸೇನ್ ಗುಪ್ತಾಗೆ ಹದಿಮೂರು ವರ್ಷದ ಹಿಂದೆ ಮೂಡಿದ ಆಸೆ. ಆಗ ಕಲ್ಕತ್ತಾದ ಮೌಂಟೆನೀರಿಂಗ್ ಕ್ಲಬ್ ಸಹಯೋಗದಲ್ಲಿ ಪ್ರಕೃತಿ ಶಿಬಿರಗಳನ್ನು ನಡೆಸಲು ಮುಂದಾದರು. ಇಪ್ಪತ್ತರಿಂದ ಮೂವತ್ತು ಜನ ಹದಿಮೂರು ವರ್ಷಕ್ಕಿಂತ ಚಿಕ್ಕವರಾದ ಹುಡುಗರನ್ನು ಕಟ್ಟಿಕೊಂಡು ವಾರ, ಹದಿನೈದು ದಿನ ಕಾಡಿನಲ್ಲಿ ಶಿಬಿರ ಹೂಡಿದರು. ಹೀಗೆ ಆರು ವರ್ಷ ಪ್ರಕೃತಿಯ ಪಾಠ ಹೇಳಿಕೊಡುವ ಕೆಲಸ ಮುಂದುವರಿಯಿತು. ಕ್ಲಬ್ ಜೊತೆಗಿನ ಸಂಬಂಧ ಕಡಿಯಿತು.

ಮುಂದಿನ ಮೂರು ವರ್ಷ ಕಾಲ ಇನ್ನೊಂದು ಸ್ವಯಂ ಸೇವಾ ಸಂಸ್ಥೆಯ ನೆರವಿನಿಂದ ಮಕ್ಕಳನ್ನು ನಗರದಿಂದಾಚೆ ದೂರದ ಕಾಡಿಗೆ, ಪ್ರಕೃತಿಯ ಮಡಿಲಿಗೆ ಕರೆದೊಯ್ದು ಶಿಬಿರ ಹಾಕುವ ಕೆಲಸ ಮುಂದುವರಿಸಿದರು. ಅದೂ ತೃಪ್ತಿ ತರಲಿಲ್ಲ. ಕೊನೆಗೆ ಯಾರ ಹಂಗೂ ಬೇಡವೆಂದು ತಮ್ಮದೇ ಸಂಸ್ಥೆ 'ವಾಂಡರ್ ಲಸ್ಟ್' ಕಟ್ಟಿಕೊಂಡರು. ಆದರರ್ಥ 'ತಿರುಗಾಟದ ಹಸಿವು'. ಪ್ರತಿವರ್ಷ ಈ ಸಂಸ್ಥೆಯಡಿ ಒಂಬತ್ತರಿಂದ ಹದಿಮೂರು ವರ್ಷದೊಳಗಿನ ಮಕ್ಕಳ ತಂಡಗಳು ಕಾಡಿನಲ್ಲಿ ಹೋಗಿ ಬೀಡು ಬಿಡುತ್ತವೆ.

ಇಂಥ ಮಕ್ಕಳಿಗೆ ಅಮಿತ ಸ್ವಾತಂತ್ರ್ಯ. ಹಕ್ಕಿಗಳನ್ನು ನೋಡಬಹುದು, ಕೀಟಗಳನ್ನು ಗುರುತಿಸಬಹುದು, ಕಲ್ಲು ಬಂಡೆಗಳ ವೈವಿಧ್ಯ ಅರಿಯಬಹುದು. ಮರವೇರಿ ಉಲ್ಲಾಸದಿಂದ ತೂಗಿಕೊಳ್ಳಬಹುದು. ನ್ಯೂಸ್ ಓದುವುದನ್ನು ಕಲಿಯಬಹುದು. ಒಟ್ಟಾರೆ ಒಂದು ಸಲ ಇಂಥ ಶಿಬಿರದಲ್ಲಿ ಪಾಲ್ಗೊಂಡರೆ ಸಾಕು, ಮುಂದೆ ಅವರೇ ಸ್ವತಂತ್ರವಾಗಿ ಶಿಬಿರ ಹೂಡುವಷ್ಟು ಪರಿಜ್ಞಾನ ಪಡೆಯುತ್ತಾರೆ. ಅಡುಗೆ ಮಾಡುವುದೂ ಅವರದೇ ಖುಷಿಯ ಕೆಲಸವಾದ್ದರಿಂದ ಮಕ್ಕಳಿಗೆ ಹೊಸ ಹೊಸ ಪ್ರಯೋಗಕ್ಕೆ ಅನುಕೂಲ. ಒಂದು ತಂಡ ಐದು ವರ್ಷ ಸತತವಾಗಿ, ಪ್ರತಿ ವರ್ಷಕ್ಕೆ ಒಂದು ವಾರದಂತೆ ಶಿಬಿರದಲ್ಲಿ ಪಾಲ್ಗೊಂಡು ನಾನಾ ವಿಚಾರಗಳನ್ನು ಕುರಿತು ಪರಿಪಕ್ವವಾಗುತ್ತಾರೆ. ಸುತ್ತಲಿನ ಸಂಗತಿಗಳನ್ನು ಬೆರಗುಗಣ್ಣಿಂದ ನೋಡುತ್ತಾ ಮಕ್ಕಳು ಕಲಿಯುತ್ತಾ ಹೋಗುತ್ತವೆ.

ಇಂಥ ಶಿಬಿರಗಳು ಕೇವಲ ಅನುಕೂಲ ಪಡೆದ, ಸಿರಿವಂತರ ಮಕ್ಕಳಿಗೆ ಮಾತ್ರ ಮೀಸಲಿಲ್ಲ. ಕಳೆದೆರಡು ವರ್ಷಗಳಿಂದ ಕಿವುಡ, ಮೂಗ ಮಕ್ಕಳಿಗೆಂದೇ ವಿಶೇಷ ಶಿಬಿರ ಒಂದನ್ನು ಅವರು ನಡೆಸುತ್ತಾ ಬಂದಿದ್ದಾರೆ. ಕಲ್ಕತ್ತಾದ ಎರಡು ಕಿವುಡು, ಮೂಗರ ಶಾಲೆಯಿಂದ ಬಂದ ಮಕ್ಕಳೇ ಈ ಶಿಬಿರಗಳಲ್ಲಿ ಪಾಲ್ಗೊಳ್ಳುತ್ತಾ ಇದ್ದಾರೆ. ಎಲ್ಲರಿಂದ ಗೇಲಿಗೆ, ಅಪಮಾನಕ್ಕೆ ಒಳಗಾದ ಈ ನತದೃಷ್ಟ ಮಕ್ಕಳು ಕಾಡಲ್ಲಿ ದಿನ ಕಳೆಯುವುದೇ ಒಂದು ಅದ್ಭುತ ಅನುಭವ.

ಹಾಗೆಂದು ಅಶೋಕ್ ಸೇನ್ ಗುಪ್ತಾರ ಶಿಬಿರಗಳೆಲ್ಲ ತೀರಾ ಸಲೀಸಾಗಿ ನಡೆದುಬಿಡುತ್ತವೆ ಎಂದುಕೊಳ್ಳಬೇಡಿ. ಕೆಲವು ವರ್ಷದ ಹಿಂದೆ ಪುರುಲಿಯಾದ ಕಾಡಲ್ಲಿ ಮಕ್ಕಳ ತಂಡ ಬೀಡು ಬಿಟ್ಟಿದ್ದಾಗ, ಒಂದೇ ರಾತ್ರಿಯಲ್ಲಿ ಏನೆಲ್ಲ ಅನಾಹುತ ನಡೆದು ಹೋಯಿತೆಂದರೆ, ಅದನ್ನು ಇವತ್ತಿಗೂ ಅಶೋಕ್ ಸೇನ್‌ಗುಪ್ತರಿಗೆ ನಂಬುವುದು ಸಾಧ್ಯವಾಗುವುದೇ ಇಲ್ಲ.

ಶಿಬಿರದಲ್ಲಿದ್ದ ಬಾಲಕಿಯೊಬ್ಬಳು ಇದ್ದಕ್ಕಿದ್ದಂತೆ ಮೂರ್ಛೆರೋಗಕ್ಕೆ ತುತ್ತಾಗಿ ಒದ್ದಾಡತೊಡಗಿದಳು. ಶಿಬಿರದಲ್ಲಿದ್ದ ಇನ್‌ಸ್ಟ್ರಕ್ಟರ್‌ಗಳಿಬ್ಬರು ಮೋಟಾರ್ ಬೈಕ್‌ನಲ್ಲಿ ಇಂಜೆಕ್ಷನ್ ಟ್ಯೂಬ್ ತರಲೆಂದು ಹತ್ತಿರದ ಊರಿಗೆ ಹೊರಟರು. ಟ್ಯೂಬ್ ಕೊಂಡು ವಾಪಸು ಬರುವಾಗ ಅವರ ಮೇಲೆ ಕಳ್ಳರು

ದಾಳಿ ನಡೆಸಿದರು. ಹೇಗೋ ಅವರಿಂದ ಪಾರಾಗಿ, ಇನ್ನೂ ಒದ್ದಾಡುತ್ತಿದ್ದ ಬಾಲಕಿಗೆ ಇಂಜೆಕ್ಷನ್ ನೀಡಲಾಯಿತು.

ಸದ್ಯ ಎಲ್ಲ ಮುಗಿಯಿತಪ್ಪ ಎಂದು ನಿಟ್ಟುಸಿರು ಬಿಡುವಷ್ಟರಲ್ಲಿ ಶಿಬಿರದ ಮೇಲೆ ಕಾಡಾನೆಗಳ ಹಿಂಡು ದಾಳಿ ನಡೆಸಿತು. ಹತ್ತಿರದ ಗ್ರಾಮಸ್ಥರು ಓಡೋಡಿ ಬಂದು ಗದ್ದಲವೆಬ್ಬಿಸಿ ಆನೆಗಳನ್ನು ಆಚೆ ಅಟ್ಟದೇ ಇದ್ದಿದ್ದರೆ ಏನೆಲ್ಲ ಅನಾಹುತ ಆಗುತ್ತಾ ಇತ್ತೋ! ಇಷ್ಟೆಲ್ಲ ಸಂಗತಿ ಒಂದೇ ರಾತ್ರಿ ಕೆಲವೇ ತಾಸಿನ ಅಂತರದಲ್ಲಿಯೇ ನಡೆದಿದ್ದು ವಿಚಿತ್ರ.

ಸೇನ್‌ಗುಪ್ತಾ ಉತ್ಸಾಹದಿಂದಲೇ ಶಿಬಿರ ಹಮ್ಮಿಕೊಳ್ಳುತ್ತಾರೆ. ಅವರಿಗೆ ಸಾಕಷ್ಟು ಕಷ್ಟಗಳಿವೆ. ಮುಖ್ಯವಾಗಿ ಹಣದ ಕೊರತೆ. ಈಗೀಗ ಶಿಬಿರಾರ್ಥಿಯಿಂದ, ಅಲ್ಲಿಗೆ ಬರುವ ಇನ್‌ಸ್ಟ್ರಕ್ಟರ್‌ಗಳಿಂದಲೂ ತಲಾ ಐನೂರು ರೂಪಾಯಿ ಪಡೆಯುತ್ತಾ ಇದ್ದಾರಾದರೂ ಅದು ಯಾತ್ಯಾತಕ್ಕೂ ಸಾಲುವುದಿಲ್ಲ.

ಕೆಲವು ಸಲ ಮಕ್ಕಳನ್ನು ಒಂದೆಡೆಯಿಂದ ಇನ್ನೊಂದೆಡೆ ಸಾಗಿಸಲು, ಅವರಿಗೆ ಬೇಕಾದ ಟೆಂಟ್‌ಗಳನ್ನು ಒದಗಿಸಲು ಪೊಲೀಸರೇ ಮುಂದಾಗಿದ್ದಾರೆ. ಪುರುಲಿಯಾದಲ್ಲಿ ಇಂಥ ಘಟನೆ ನಡೆಯಿತು. ಮುಖ್ಯವಾಗಿ ಶಿಬಿರಾರ್ಥಿಗಳಿಗೆ ಮಾಹಿತಿ, ಅನುಭವ ಒದಗಿಸಬಲ್ಲ ನುರಿತ ಇನ್‌ಸ್ಟ್ರಕ್ಟರ್‌ಗಳ ಕೊರತೆ ಅವರನ್ನು ಕಾಡುತ್ತಿದೆ. ದಿನದಿಂದ ದಿನಕ್ಕೆ ಖರ್ಚಾದರೂ ಚಿಂತೆ ಇಲ್ಲ ಶಿಬಿರಕ್ಕೆ ಬರುತ್ತೇವೆ ಎನ್ನುವ ಎಳೆಯರ ಸಂಖ್ಯೆ ಜಾಸ್ತಿಯಾಗಿದೆ. ಅದೇ ಮಟ್ಟದಲ್ಲಿ ಇನ್‌ಸ್ಟ್ರಕ್ಟರ್‌ಗಳು ತಯಾರಾಗಿಲ್ಲ.

ಸೇನ್ ಗುಪ್ತರ ಕಾರ್ಯದಲ್ಲಿ ನೆರವಾಗುವ ಮನಸ್ಸಿದ್ದರೆ
ಇಲ್ಲಿದೆ ಅವರ ವಿಳಾಸ :
ಅಶೋಕ್ ಸೇನ್ ಗುಪ್ತಾ,
ಎಜಿ- 182, ಪ್ರಫುಲ್ಲ ಕಾನಾ, ಕಲ್ಕತ್ತಾ - 700 059,
ದೂರವಾಣಿ : 033-4254006.

# ಬೀದಿ ಮಕ್ಕಳಿಗೊಬ್ಬ ಜರ್ಮನಿಯ ದೇವದೂತ

ಆತನ ಹೆಸರು ಡಾ. ಜೋಹಾನ್ಸ್ ಆಸ್ಮಾಸ್. ಮೂಲ ಜರ್ಮನಿ. ಈಗ ಎಪ್ಪತ್ತು ವರ್ಷ ಆತನಿಗೆ. ಇಪ್ಪತ್ತು ವರ್ಷದ ಹಿಂದೆ ಹೀಗೆ ಖಯಾಲಿಗಾಗಿ ಇಂಡಿಯಾಕ್ಕೆ ಬಂದಿದ್ದ. ದೆಹಲಿಗೆ ಬಂದ ವಿದೇಶಿಯರು ಇಷ್ಟ ಪಡುವುದು ಕನ್ನಾಟ್ ಪ್ಲೇಸ್. ಅಲ್ಲಿ ದೊರೆಯುವ 'ಎಥ್ನಿಕ್' ಡಿಸೈನುಗಳ ಬಟ್ಟೆ, ಕಲಾಕೃತಿಗಳನ್ನು ನೋಡಿ ಖರೀದಿಸುವುದೇ ಒಂದು ಬಹು ದೊಡ್ಡ ಕಾರ್ಯಕ್ರಮ. ಹಾಗೆ ಬಂದ ಆಸ್ಮಾಸ್‌ನ ಬದುಕನ್ನು ಸಣ್ಣದೊಂದು ಘಟನೆ ಬದಲಿಸಿತು. ಆತ ಊರು, ಕೇರಿ ಬಿಟ್ಟು ದೂರದ ದೆಹಲಿಗೆ ಬಂದ. ಅಲ್ಲಿಯೇ ಇದ್ದು ಬಿಟ್ಟ. ಈಗ ಹದಿನೈದು ವರ್ಷಗಳಿಂದ ದೆಹಲಿಯ ಕನ್ನಾಟ್‌ಪ್ಲೇಸ್ ಡಾ. ಆಸ್ಮಸ್‌ನ ಕ್ರಿಯಾರಂಗ.



ಅಲ್ಲಿನ ಮುನ್ನೂರಕ್ಕೂ ಹೆಚ್ಚು ಬೀದಿ ಮಕ್ಕಳಿಗೆ ಆತ ಅನ್ನದಾತ, ರೋಗ ನಿವಾರಕ, ಎಲ್ಲ. ಹಾಗಾಗಿಯೇ ಮಕ್ಕಳೆಲ್ಲ ಅವನನ್ನು ಭಗವಾನ್ ಬಾಬಾ ಎಂದೇ ಕರೆಯುತ್ತವೆ. ಹಾಗೆಂದರೆ 'ಗಾಡ್ ಫಾದರ್' ಎಂದರ್ಥ.

ಸಣ್ಣ ಘಟನೆ ಬದುಕು ಬದಲಿಸಿತು ಎಂದೆ.

ಅದು ಸಣ್ಣ ಘಟನೆಯೇ. ಡಾ. ಆಸ್ಮಸ್ ಪಾಲಿಗದು ಬಹುದೊಡ್ಡ ಘಟನೆ. 1981ರಲ್ಲಿ ಆತ ಮೊದಲು ಭಾರತಕ್ಕೆ ಬಂದಿದ್ದು. ದೆಹಲಿಯೆಲ್ಲ ಸುತ್ತಿ, ಕೊನೆಯ ಕಾರ್ಯಕ್ರಮವಾಗಿ ಕನ್ನಾಟ್ ಪ್ಲೇಸ್‌ನಲ್ಲಿ ಖರೀದಿ ನಡೆಸುವ ಸಲುವಾಗಿ ಅಲ್ಲಿ ಬಂದಿದ್ದು. ರಸ್ತೆ ಬದಿಯಲ್ಲಿ ವ್ಯಕ್ತಿಯೊಬ್ಬ 'ಸ್ಕೇಟಿಸ್'ನಿಂದ ಉಂಟಾದ ನೋವಿನಿಂದ ಒದ್ದಾಡುತ್ತಿದ್ದ. ಅದನ್ನು ನೋಡಿಯೂ ಸುಮ್ಮನೆ ಇರಲಾರದೇ, ಡಾ|| ಆಸ್ಮಸ್ ಮೆಡಿಕಲ್ ಶಾಪ್ ಹುಡುಕಾಡಿ, ಆಯಿಂಟ್‌ಮೆಂಟ್ ತಂದು ಲೇಪಿಸಿದ. ಅವನ ಹೆಂಡತಿಯೂ ಆತನ ಜೊತೆಗಿದ್ದಳು. ಇಲ್ಲಿನ ಜನ, ಬೀದಿಯಲ್ಲಿ ನೋವಿಂದ ನರಳುತ್ತಾ ಇದ್ದವನಿಗೆ ಆಯಿಂಟ್‌ಮೆಂಟ್ ಲೇಪಿಸುತ್ತಿದ್ದ ವಿದೇಶೀ ವ್ಯಕ್ತಿಯನ್ನು 'ಮಂಗ ಕುಣಿಯುತ್ತಾ ಇದೆಯೇನೋ!' ಎಂಬಂತೆ ನೋಡಿದರೇ ಹೊರತು ಒಬ್ಬರಾದರೂ ನೆರವಿಗೆ ಮುಂದಾಗಲಿಲ್ಲ.

ಆ ಘಟನೆ ನಡೆದು ಇಪ್ಪತ್ತು ವರ್ಷಗಳೇ ಆಗುತ್ತಾ ಬಂದಿವೆ. ಬೀದಿಯಲ್ಲಿ ಬಿದ್ದವರಿಗಾಗಿ ಬದುಕು ಮುಡುಪಿಡಲೆಂದು ಡಾ|| ಆಸ್ಮಸ್ ದೆಹಲಿಗೆ ಬಂದು ಹದಿನೈದು ವರ್ಷಗಳೇ ಆಗುತ್ತಾ ಬಂದಿವೆ. ಆತನ ಅನುಭವದ ಮೂಸೆಯಿಂದ ಉಕ್ಕಿದ ವಿಷಾದದ ಮಾತು ಇದು.

'ಈ ದೇಶದಲ್ಲಿ ಬಡವರ ನೆರವಿಗೆ ಧಾವಿಸುವುದು ಇರಲಿ, ಅವರ ಮೊರೆ ಕೂಡ ಕೇಳುವವರಿಲ್ಲ ಅನ್ನಿಸಿತು'

ಮಾತು ಮುಗಿಸಿದ ಮರುಕ್ಷಣ ಫಕ್ಕನೆ ನಕ್ಕು ಹಾರಿಸಿ ಬಿಡುತ್ತಾರೆ. ಆತನ ಮನದಲ್ಲಿ ಅವತ್ತೇ ನಿಶ್ಚಯ ಹುಟ್ಟಿತು. 'ಇಲ್ಲೇ ಏನಾದರೂ ಮಾಡಬೇಕು' ಈ ದೇಶ ಎಂಥ ವಿಚಿತ್ರಗಳ, ವೈಪರೀತ್ಯಗಳ ನೆಲೆ ಎಂಬುದು ಡಾ|| ಆಸ್ಮಸ್‌ಗೆ ಅವತ್ತೇ ತಿಳಿಯಬೇಕಿತ್ತು. ಒದ್ದಾಡುತ್ತಾ ಬಿದ್ದವನ ಸೇವೆಗೆ ನಿಂತರೆ ಮುಗಿಬಿದ್ದು ತಮಾಷೆ ನೋಡುವ ಜನ ಇರುವೆಡೆ, ಒಳ್ಳೆಯ ಮನಸ್ಸಿನ ಜನರ ಬದುಕು ಕಷ್ಟ ಎಂದು ಅರಿವಾಗಬೇಕಿತ್ತು.

ಹಾಗಾಗಲಿಲ್ಲ ಎಂದೇ ಆಸ್ಮಸ್ ನಾನಾ ರೀತಿಯ ಕಿರುಕುಳಕ್ಕೆ, ಮಾನಸಿಕ ಹಿಂಸೆಗೆ ಗುರಿಯಾಗಬೇಕಾಯಿತು. ಕನ್ನಾಟ್ ಪ್ಲೇಸ್‌ನ ಬೀದಿ ಮಕ್ಕಳಿಗೆ ಏನಾದರೂ ಒಂದು ರೀತಿಯಲ್ಲಿ ನೆರವಾಗಲು ಆತ ಬಂದಿದ್ದು, ಅಲ್ಲಿ ನಾನಾ ಬಗೆಯ ಚರ್ಮರೋಗಿಗಳಿದ್ದರು. ಮನೆಯವರೇ ತಂದು ಬೀದಿಗೆ ಬಿಸಾಕಿ ಹೋದ ಕುಷ್ಠರೋಗಿಗಳಿದ್ದರು. ಇಂಥವರ ಸೇವೆಗಾಗಿ ಬಂದ ಡಾ|| ಆಸ್ಮಸ್ ಮೊದಲು ಕಂಡಿದ್ದು ಪೊಲೀಸರ ಆತಿಥ್ಯ. ಈತ ಡ್ರಗ್‌ಗಳನ್ನು ಮಾರಲೋ ಅಥವಾ ಹುಡುಗರನ್ನು ಲೈಂಗಿಕ ಸುಖಕ್ಕಾಗಿ ಬಳಸಲೆಂದೇ ಅಲ್ಲಿ ಠಳಾಯಿಸುತ್ತಿದ್ದಾನೆ ಎಂದು ಅವರ ಗುಮಾನಿ. ಯಾವುದೊಂದು ಸಾಕ್ಷಿ, ಪುರಾವೆ ಇಲ್ಲದೆ ಈತನನ್ನು ಎಳೆದೊಯ್ದು ತಿಹಾರ್ ಜೈಲಿನಲ್ಲಿ ತುಂಬಿದರು.

ಪೊಲೀಸರ ಆರೋಪ ಹುರುಳಿಲ್ಲದ್ದು ಎಂದು ನ್ಯಾಯಾಧೀಶರು ಈತನನ್ನು ಬಿಟ್ಟು ಕಳಿಸಿದರು. ಮರಳಿ ಡಾ|| ಆಸ್ಮಸ್ ಬಂದಿದ್ದು ಅದೇ ಕನ್ನಾಟ್ ಪ್ಲೇಸ್‌ಗೆ, ಅಲ್ಲಿನ ಬೀದಿ ಮಕ್ಕಳು ಜೊತೆಗಿದ್ದು ನೆರವಾಗಲು.

ಪೊಲೀಸರ ಪಾಲಿಗಂತೂ ಈತ ಬಹುದೊಡ್ಡ ಪೀಡೆ ಎನಿಸಿಬಿಟ್ಟಿತು. ಎಷ್ಟು ಸಲ ಕರೆದೊಯ್ದು ಜೈಲಲ್ಲಿ ಕೂರಿಸಿದರೆ, ಬಿಡುಗಡೆ ಆದ ಮೇಲೆ ಮತ್ತೆ ಅದೇ ಜಾಗಕ್ಕೆ ಬರುತ್ತಿದ್ದ ಇದರಿಂದ ಹೆಂಡತಿಗೂ ರೇಗಿತು. 'ಇಲ್ಲದ ಉಪದ್ವ್ಯಾಪತನ ನಿನಗೇಕೆ?' ಎಂದು ತಿಳಿಸಿ ಹೇಳಲು ಯತ್ನಿಸಿ, ಇವನು ಬದಲಾಗುವ ಆಸಾಮಿಯಲ್ಲ ಎಂದು ತಿಳಿದು 'ಟಾಟಾ' ಹೇಳಿ ಅವನ ಬದುಕಿಂದಲೇ ನಿರ್ಗಮಿಸಿದಳು.

ಇದೆಲ್ಲ ರೇಜಿಗೆ ಎನಿಸಿಯೋ ಏನೋ ಮರಳಿ ಜರ್ಮನಿಗೆ ಹೋದರೂ ಆಸ್ಮಸ್‌ಗೆ ಜೀವ ತಡೆಯಲಿಲ್ಲ. 1985ರಲ್ಲಿ ಹುಟ್ಟಿದೂರಿಗೆ, ತಾಯ್ನಾಡಿಗೆ ವಿದಾಯ ಹೇಳಿ ಮತ್ತದೇ ಕನ್ನಾಟ್‌ಪ್ಲೇಸಿಗೆ ಬಂದು ಬಿಟ್ಟ. ಇವನನ್ನು ಕಂಡರೇ ಪೊಲೀಸರು ರೇಗುತ್ತಾ ಇದ್ದರು. ಎತ್ತಾಕಿಕೊಂಡು ಹೋಗುತ್ತಿದ್ದರು. ಅಂಥ ಮನುಷ್ಯನ ಸಹವಾಸ ಯಾರು ಬಯಸುತ್ತಾರೆ?

ಯಾರಿಗೆ ನೆರವಾಗಬೇಕು ಎಂದು ಬಂದಿದ್ದನೋ ಅದೇ ಬೀದಿ ಮಕ್ಕಳು ಆತನಿಂದ ದೂರವಾದರು. ಹತ್ತಿರ ಬಂದರೆ, ತಮಗೆಲ್ಲ ಮತ್ತೆ ಫಜೀತಿ

ಅಂಟಿಕೊಳ್ಳುತ್ತದೊ! ಎಂದು ಭಯ.

ಅಂಥ ಸ್ಥಿತಿಯಲ್ಲೂ ಪಟ್ಟು ಬಿಡದೆ, ರೋಗಿಷ್ಠರನ್ನು ಡಾ॥ ಆಸ್ಮಸ್ ಹುಡುಕುತ್ತಾ ಇದ್ದ. ಕೈಯಲ್ಲಿನ ದುಡ್ಡು ಚೆಲ್ಲಿ ಔಷಧಿ ಖರೀದಿಸಿ ಒದಗಿಸುತ್ತಿದ್ದ. ಯೂರೋಪಿನ ಕೆಲವು ಸ್ವಯಂ ಸೇವಾ ಸಂಸ್ಥೆಗಳು ನೀಡಿದ ಹಣದಿಂದ ಕಾಯಕ ನಡೆಯುತ್ತಾ ಇತ್ತು. ಹೀಗೇ ಇಪ್ಪತ್ತು ವರ್ಷಗಳೇ ದಾಟಿವೆ. ಡಾ. ಆಸ್ಮಸ್‌ನ ತಲೆಗೂದಲು ಹಣ್ಣಾಗಿದೆ. ಮೊದಲಿನ ಶಕ್ತಿ ಇಲ್ಲ. ಆದರೆ ಕಾಯಕ ಮಾತ್ರ ನಿಂತಿಲ್ಲ.

ಡಾ. ಆಸ್ಮಸ್ ಮಾಡುವ ನಿತ್ಯದ ಮೊದಲ ಕೆಲಸ ಎಂದರೆ, ಕನ್ನಾಟ್ ಪ್ಲೇಸ್‌ಗೆ ಭೇಟಿ ನೀಡುವ ವಿದೇಶೀಯರನ್ನು ಕಾಣುವುದು. ತಾನು ಮಾಡುತ್ತಿರುವ ಕೆಲಸ. ಅದಕ್ಕಾಗಿ ಬೇಕಾಗಿರುವ ಅವರ ನೆರವಿಗಾಗಿ ಕೋರಿಕೆ ಸಲ್ಲಿಸುವುದು. ಯಾವತ್ತೂ ಆತ ಬರಿಗೈಯಿಂದ ಹಿಂದಿರುಗಿಲ್ಲ. ಅವರು ನೀಡುವ ದಾನದ ಹಣದಿಂದ ಔಷಧಿ ಖರೀದಿಸಿ, ಎರಡು ಬ್ಯಾಗ್‌ಗಳಲ್ಲಿ ತುಂಬಿಕೊಂಡು ಕನ್ನಾಟ್ ಪ್ಲೇಸ್‌ಗೆ ಧಾವಿಸುತ್ತಾನೆ. ಅಲ್ಲಿ ಅವನಿಗಾಗಿ ಕಾದಿರುವ ನೂರಾರು ರೋಗಿಗಳನ್ನುಪರೀಕ್ಷಿಸಿ ಔಷಧಿ ವಿತರಿಸುತ್ತಾನೆ.

ಈತನ ನಿರಂತರ ಕಾಯಕದಿಂದಾಗಿ ಈಗ ಕನ್ನಾಟ್ ಪ್ಲೇಸ್‌ನ ಬೀದಿ ಮಕ್ಕಳು ಆರೋಗ್ಯಪೂರ್ಣವಾಗಿ ನಡೆದಾಡುತ್ತಿವೆ. ಮೊದಲಿದ್ದ ಚರ್ಮರೋಗ, ನಾನಾ ಬಗೆಯ ತೊಂದರೆಗಳು ಇವತ್ತು ಇಲ್ಲವಾಗಿವೆ. ದೇವದೂತನಂತೆ ಬಂದು ತಮಗೆ ನೆರವಾಗುವ ಈ ಜರ್ಮನಿಯ ತಾತನನ್ನು ಮಕ್ಕಳು 'ಭಗವಾನ್ ಬಾಬಾ' ಎಂದು ಮಮತೆಯಿಂದ ಕರೆಯುತ್ತವೆ.

ವಿದೇಶಗಳಿಂದ ಬಂದ ಪ್ರವಾಸಿಗಳಲ್ಲಿ, ಯುವ ಜನಾಂಗದವರಂತೂ ಖುಷಿಯಿಂದ ಡಾ. ಆಸ್ಮಸ್‌ನ ಕೆಲಸದಲ್ಲಿ ಕೈಗೂಡಿಸುತ್ತಾರೆ. ಆತನ ಕೆಲಸದ ಹೊರೆ ತಗ್ಗಿಸುತ್ತಾರೆ. ಮರಳಿ ಊರಿಗೆ ಹೋದ ಮೇಲೂ ಮರೆಯದೆ ಹಣ, ಬಟ್ಟೆ, ಔಷಧಿಗಳನ್ನು ಕಳುಹಿಸಿ ಕೊಡುತ್ತಾರೆ. ಅವೆಲ್ಲ ನಿರ್ವಂಚನೆಯಿಂದ ದೆಹಲಿಯ ಕನ್ನಾಟ್‌ಪ್ಲೇಸ್‌ನ ಅರ್ಹ ಬೀದಿ ಮಕ್ಕಳಿಗೆ ವಿನಿಯೋಗ ಆಗುತ್ತದೆ.

ನೀವು ದೆಹಲಿಗೆ ಹೋದಾಗ ಏನೆಲ್ಲ ಪ್ರೇಕ್ಷಣೀಯ ಸ್ಥಳ ನೋಡುತ್ತೀರಿ. ಹಾಗೆ ಖಂಡಿತ ಕನ್ನಾಟ್ ಪ್ಲೇಸ್‌ಗೂ ಹೋಗುತ್ತೀರ, ಅಲ್ಲಿನ ಸುಪ್ರಸಿದ್ಧ 'ಕಾಫೀ ಹೋಂ' ಬಳಿ ಒಂದಿಷ್ಟು ಆಚೀಚೆ ಕಣ್ಣಾಡಿಸಿದರೆ, ಖಾದಿ ತೊಟ್ಟ ಡಾ. ಜೋಹಾನ್ಸ್ ಆಸ್ಮಸ್ ನಿಮ್ಮ ಕಣ್ಣಿಗೂ ಬೀಳಬಹುದು.

# ಒಂಟಿ ಹೆಜ್ಜೆಯ ಪಯಣ



**ಹೆ**ಸರು ಪೋಖರ್‌ಸಿಂಗ್. ಆಗ ಆತನಿಗೆ ಎಂಬತ್ತಾರು ವರ್ಷ. ಕೋಲೂರಿಕೊಂಡು ಕಷ್ಟದಿಂದ ನಡೆಯುತ್ತಾರೆ. ಭಾರತ-ಪಾಕ್ ಗಡಿಯ ಜಲಾಲಾಬಾದ್ ಈಗ ಅವರ ತವರು. ಪಾಕೀಸ್ತಾನದ ಪಂಜಾಬ್‌ನಲ್ಲಿ ಹುಟ್ಟಿದ ಪೋಖರ್ ರಾಯ್ ಸಿಖ್ ಸಮುದಾಯಕ್ಕೆ ಸೇರಿದವರು. ಈಗ ಭಾರತದಲ್ಲಿ ಇರುವ ಈ ಸಮುದಾಯ ಸದಸ್ಯರ ಸಂಖ್ಯೆ ಕೇವಲ ಐದು ಲಕ್ಷ. ದೇಶ ವಿಭಜನೆ ಸಮಯಕ್ಕೆ ಭಾರತಕ್ಕೆ ವಲಸೆ. ಬರಿಗೈಯಲ್ಲಿ ಬಂದಿದ್ದು. ಆದರೆ ರಕ್ತಗತವಾಗಿದ್ದ ಕಲೆ...!

ಅದನ್ನು ಯಾರೂ ಕಸಿದು ಕೊಳ್ಳುವಂತಿರಲಿಲ್ಲ.

ಊರಂಚಿನ ಗದ್ದೆಯ ಬಯಲಲ್ಲಿ ಡ್ರಂಗಳ ತಾಳಕ್ಕೆ ಹೆಜ್ಜೆ ಹಾಕುವ ಯುವಕರು. ಗದ್ದೆಯಂಚಿನಲ್ಲಿ ನಿಂತು ನೋಡುವ ಪೋಖರ್. ಹೊಸಬರಿಗೆ ಈತ ಯಾರೋ ಕುತೂಹಲಕ್ಕೆ ನೃತ್ಯ ನೋಡಲು ಬಂದು ನಿಂತ ಮುದುಕ ಅನ್ನಿಸಬಹುದು. ತಂಡದ ಯುವಕರ್ಯಾರಾದರೂ ತಪ್ಪು ಹೆಜ್ಜೆ ಇಟ್ಟರೆ ಮುಗಿಯಿತು. ಈ ಎಂಬತ್ತರ ಮುದುಕ ಜಿಗಿದೋಡಿ ಅವರ ಬಳಿ ಸಾರಿ, ಹೆಜ್ಜೆ ಇಟ್ಟು ಕುಣಿದು ತೋರಿಸುತ್ತಾರೆ. ಅದೇ ಅವರು ಪಾಕಿಸ್ತಾನದಿಂದ ಬರುವಾಗ ಹೊತ್ತು ತಂದ ಆಸ್ತಿ. ಅದನ್ನು ಝುಮ್ಮೀರ್ ನೃತ್ಯ ಎನ್ನುತ್ತಾರೆ. ಮೂಲ ಬಲೂಚಿಸ್ತಾನ. ಅಲ್ಲಿಗೆ ಹೋಗಿ ಬರುತ್ತಿದ್ದ ಒಂಟೆ ಸವಾರರು, ವರ್ತಕರು ಝುಮ್ಮೀರ್ ನೃತ್ಯದ ಮೋಹಕತೆಗೆ ಮಾರುಹೋಗಿ ಅದನ್ನು ಕಲಿತು ಬಂದರು. ಪಾಕೀಸ್ತಾನ, ಭಾರತಗಳಲ್ಲಿ ಅದನ್ನು ಜನಪ್ರಿಯಗೊಳಿಸಿದರು.

ಪೋಖರ್ ಸಿಂಗ್ ಅದನ್ನು ಕಲಿತಿದ್ದು ಹದಿಮೂರನೇ ವಯಸ್ಸಲ್ಲಿ. ಚಿಕ್ಕಪ್ಪ ಹೇಳಿಕೊಟ್ಟ ಹಾಗೆ ಹೆಜ್ಜೆ ಇಟ್ಟು ಕುಣಿಯುತ್ತ ಕುಣಿಯುತ್ತಾ, ನೃತ್ಯದ ಲಯ ಮತ್ತು ಸೊಗಸು ಅವರ ರಕ್ತದಲ್ಲಿ ಬೆರೆತು ಹೋಯಿತು. ಅವರ ಮನೆಯವರೇ ತಂಡಕಟ್ಟಿಕೊಂಡು. ಮದುವೆಗಳಲ್ಲಿ, ಜಾತ್ರೆಗಳಲ್ಲಿ ಝುಮ್ಮೀರ್ ನೃತ್ಯದ ಪ್ರದರ್ಶನ ನೀಡಲು ಹೋಗುತ್ತಾ ಇದ್ದರು. ದೇಶ ವಿಭಜನೆಯಾಗಿ ಪೋಖರ್ ಹಾಗೆ ಉಳಿದ ರಾಯ್‌ಸಿಖ್ ಜನಾಂಗದ ಕುಟುಂಬಗಳೂ ಈಗಿನ ಪಂಜಾಬಿಗೆ ಬಂದು ನೆಲೆಸಿದರು. ಆನಂತರ ಝುಮ್ಮೀರ್ ನೃತ್ಯ ನಿಧಾನವಾಗಿ ಜನರ ಬದುಕಿಂದ ಮರೆಯಾಗುತ್ತಾ ಹೋಯಿತು.

ಅದ್ಭುತ ಜಾನಪದ ನೃತ್ಯ ಕಲೆಯೊಂದು ಕಣ್ಣೆದುರೇ ಮಸಕಾಗುತ್ತಾ ನಡೆಯುವುದು ಪೋಖರ್‌ಸಿಂಗ್‌ಗೆ ಸಹನೆಯಾಗಲಿಲ್ಲ. ಭಾರತಕ್ಕೆ ಬಂದ ಕೂಡಲೇ ತಮ್ಮದೇ ಕುಟುಂಬದವರ ಝುಮ್ಮೀರ್ ನೃತ್ಯತಂಡ ರಚಿಸಿದರು.

ಅಂದಿನ ದಿನಗಳನ್ನು ನೆನಪಿಂದ ಹೆಕ್ಕಿ ತೆಗೆದು ಮುಂದಿಡುವ ಪೋಖರ್ ಅವರ ಮಗ ಗುರುಬಚನ್‌ಸಿಂಗ್‌ಗೇ ಈಗ ಐವತ್ತಾರು ವರ್ಷ. ಅವರ ಕುಗ್ರಾಮ ಚಿರಾಗ್‌ಧನಿಯ ಮನೆಯಂಗಳದಲ್ಲೇ ಕುಣಿತ. ಊರಿನ ಹಬ್ಬ, ಹರಿದಿನಗಳಲ್ಲಿ ಹೆಜ್ಜೆಗಳು ನೆಲ ಒತ್ತಿ ನರ್ತಿಸುವಾಗ ನೋಡುವವರ ಕಣ್ಣುಗಳಲ್ಲಿ ಉತ್ಸಾಹ, ಉಲ್ಲಾಸಗಳು ಮಿಡಿಯುತ್ತಿದ್ದವು.

ಈ ನೃತ್ಯಕಲೆಯ ಬಗ್ಗೆ ಪೋಖರ್‌ಗೆ ತೀರದ ಮೋಹ. ಆತನ ಹೆಂಡತಿಯೇ ಗಂಡನನ್ನು ಗೀಳಿನಂತೆ ಹಿಡಿದುಕೊಂಡ ನೃತ್ಯದಿಂದ ಕುಪಿತಳಾಗಿ 'ಅವರು ಮದುವೆ ಆದದ್ದು ನನ್ನನ್ನಲ್ಲ, ಆ ನೃತ್ಯವನ್ನು' ಎನ್ನುತ್ತಾಳೆ.

ಐವರು ಸದಸ್ಯರ ಕುಟುಂಬದ ಹಿರಿಯರಾಗಿ ಪೋಖರ್‌ಗೆ ಜವಾಬ್ದಾರಿಗಳು ಇದ್ದವು. ಅದರ ನಡುವೆಯೂ ನಶಿಸುತ್ತಿದ್ದ ಕಲೆಗೊಂದು ಗಟ್ಟಿ ನೆಲೆ ಒದಗಿಸಲೆಂದೇ ಜೀವನವಿಡಿ ಶ್ರಮಿಸುತ್ತಾ ಬಂದರು. ಝುಮ್ಮಿರ್ ಎಷ್ಟೆಂದರೂ ಪಾಕಿಸ್ತಾನದಿಂದ ಬಂದಿದ್ದು, ಪಂಜಾಬಿನಲ್ಲಿ, ಸಿಖ್ಖರಲ್ಲಿ ಹೆಚ್ಚು ಜನಪ್ರಿಯ ಎನಿಸಿದ್ದು ರಭಸದಿಂದ ಹೆಜ್ಜೆ ಹಾಕುವ ಭಾಂಗಡಾ ನೃತ್ಯ.

ಝುಮ್ಮೀರ್‌ನಲ್ಲಿ ಪಾಲ್ಗೊಳ್ಳುವವರು ಬರೀ ಗಂಡಸರೇ. ಆದರೆ ಅದರಲ್ಲಿ ಒಂದು ಲಾಲಿತ್ಯವಿದೆ. ಹೆಜ್ಜೆಯ ಲಯದ ಜೊತೆಗೇ ಆಂಗಿಕ ಅಭಿನಯಕ್ಕೆ ಹಾಗೂ ಹಾಡಿಗೂ ಅಲ್ಲಿ ಅಪೂರ್ವ ಹದ ಇರುತ್ತದೆ. ಅದೇಕೋ ಈ ನೃತ್ಯಕ್ಕೆ ಸರ್ಕಾರ, ಅಧಿಕಾರಿಗಳು ಮಾನ್ಯತೆಯನ್ನೇ ನೀಡಲು ನಿರಾಕರಿಸಿದವು. ಅವರ ಪ್ರಾಶಸ್ತ್ಯ ಏನಿದ್ದರೂ ಭಾಂಗಡಾ ನೃತ್ಯಕ್ಕೆ. ಈ ನಡುವೆ ಎಲ್ಲೆಲ್ಲಿಂದಲೋ ಬಂದು ನೃತ್ಯ ಪ್ರದರ್ಶನ ಏರ್ಪಡಿಸುತ್ತೇವೆ. ಎಂದು ದುಡ್ಡು ಬಾಚುವ ವಂಚಕರು ಝುಮ್ಮೀರ್ ನೃತ್ಯದ ಹೆಸರಲ್ಲಿ ಪ್ರದರ್ಶಿಸಲು ಯತ್ನಿಸಿದ್ದು ಭಾಂಗಡಾ ಹಾಗೂ ಝುಮ್ಮೀರ್‌ನ ಕಲಬೆರಕೆಯನ್ನು-ಝುಮ್ಮೀರ್ ಹೆಸರು ಜನಪ್ರಿಯವಾಗಲಿ ಎಂಬ ಒಂದೇ 'ಕಾರಣಕ್ಕೆ ಇಂಥದ್ದೆಲ್ಲ ಹುಚ್ಚಾಟಗಳನ್ನು ಸಾಗಿಸಲು ಪೋಖರ್ ಸಿದ್ಧವಿರಲಿಲ್ಲ. ಅದನ್ನು ಪರಿಶುದ್ಧವಾಗಿ ಇಟ್ಟುಕೊಂಡೇ ಜನರಲ್ಲಿಗೆ ಕೊಂಡೊಯ್ಯಬೇಕು. ಇನ್ನೂರಕ್ಕೂ ಹೆಚ್ಚು ತರುಣರು ಇವರಿಂದ ಹೆಜ್ಜೆ ಹಾಕಲು ಕಲಿತಿದ್ದಾರೆ. ಅವರೆಲ್ಲರ ಪಾಲಿಗೆ ಈತ ತೀರಾ ಖಡಕ್ ಗುರು. ಒಂದಿಷ್ಟು ಹೆಚ್ಚು ಕಮ್ಮಿ ಆದರೂ ಸಹಿಸುವವರಲ್ಲ. ಆದರೆ ಅವರ ನೃತ್ಯದ ಬಗೆಗಿನ ಕಾಳಜಿಯಿಂದಲೇ ಇಂಥ ಕಾಠಿನ್ಯ ಎಂಬುದು ಹುಡುಗರಿಗೂ ಗೊತ್ತು.

ಸೈನ್ಯ ಸೇರಿರುವ ಅವರ ಮೊಮ್ಮಗ ಸತ್‌ವೀಂದರ್‌ಸಿಂಗ್‌ನ್ನ ಸಿಖ್‌ರೆಜಿಮೆಂಟಿನಲ್ಲಿಯೇ ಒಂದು ಝುಮ್ಮೀರ್ ನೃತ್ಯ ತಂಡ ಕಟ್ಟಿ ಅಜ್ಜನಲ್ಲಿ

ಸಂತಸ ಮೂಡಿಸಿದ್ದಾನೆ.

'ನನ್ನ ನಂತರವೂ ಈ ನೃತ್ಯ ಪರಂಪರೆ ಅಳಿಯಬಾರದು, ಉಳಿದು ಬೆಳೆಯಬೇಕು' ಎಂಬ ಪೋಖರ್ ಸಿಂಗ್ ಅವರ ಜೀವನೋದ್ದೇಶ ಸಫಲತೆಯ ಹಾದಿಯಲ್ಲಿದೆ. ಹಾಗಾಗಿಯೇ ಎಂಬತ್ತಾರರ ಈ ವೃದ್ಧನ ಕಸುವು ತುಂಬಿದ ಹೆಜ್ಜೆಗಳ ಜೊತೆ ಪಂಜಾಬಿನ ತರುಣರ ಹೆಜ್ಜೆಗಳು ಮೇಳವಿಸತೊಡಗಿವೆ. ಅವರದೀಗ ಒಂಟಿ ಹೆಜ್ಜೆಯಲ್ಲ ಎಂಬುದೇ ಅವರ ಕನಸಾಯಿತು, ತಪಸ್ಸಾಯಿತು.

ಏಳು ವರ್ಷದ ಹಿಂದೆ ಪಂಜಾಬ್ ಸರ್ಕಾರ ಪೋಖರ್‌ಸಿಂಗ್ ಅವರಿಗೆ ಪ್ರಶಸ್ತಿ ನೀಡಿ ಸನ್ಮಾನಿಸಿದಾಗ, ಅವರ ನೃತ್ಯಕಲೆಯತ್ತ ಜನರ ಕಣ್ಣು ಹೊರಳಿತು. ಆರು ವರ್ಷದ ಹಿಂದೆ ಜಲಾಲಾಬಾದ್‌ನ ಡಿಎವಿ ಕಾಲೇಜು, ತಮ್ಮ ಹುಡುಗರಿಗೆ ಝುಮ್ಮೀರ್ ನೃತ್ಯ ಹೇಳಿಕೊಡಲು ಕೇಳಿಕೊಂಡರು. ತವರೂರಿಂದ ಇಪ್ಪತ್ತು ಕಿಲೋಮೀಟರ್ ದೂರದ ಜಲಾಲಾಬಾದ್‌ನಲ್ಲಿ ಹೊಸ ಉತ್ಸಾಹದೊಡನೆ ಮಿಡಿಯುವ ತರುಣನಿಗೆ ಹೆಜ್ಜೆ ಇಕ್ಕುವ, ಭಂಗಿಯ ವಿನ್ಯಾಸ, ಹಾಡಿನ ಲಯ, ಹಿನ್ನೆಲೆಯಾಗಿ ನುಡಿಸುವ ಡೋಲಿನ ತಾಳ ಎಲ್ಲ ನೇರ್ಪುಗೊಳಿಸುತ್ತಾ ಅವರು ತಮ್ಮ ವಯಸ್ಸು ಮರೆತರು.

ಅವರ ಶ್ರಮ ಸಾರ್ಥಕವಾಯಿತು. ಕಳೆದ ಮೂರುವರ್ಷಗಳಲ್ಲಿ ಸತತವಾಗಿ ಅವರ ತಂಡ ಅಂತರ ವಿಶ್ವವಿದ್ಯಾಲಯ ನೃತ್ಯ ಸ್ಪರ್ಧೆಯಲ್ಲಿ ಮೊದಲ ಸ್ಥಾನ ಗಳಿಸಿದೆ. ಅದರ ಪರಿಣಾಮವೆಂದರೆ ಝುಮ್ಮೀರ್ ಪ್ರತ್ಯೇಕ ನೃತ್ಯಶೈಲಿಯೆಂದು ಮಾನ್ಯತೆ ದೊರಕಿದೆ. ಆ ವಿಭಾಗದಲ್ಲಿಯೇ ಸ್ಪರ್ಧೆ ಈಗೀಗ ನಡೆಯುತ್ತವೆ. ಪೋಖರ್‌ಗೆ ಶಿಷ್ಯರ ಪರಂಪರೆ ದೊಡ್ಡ ಪ್ರಮಾಣದಲ್ಲೇ ಇದೆ ಈವರೆಗೆ. ■

# ಪ್ಲಾಸ್ಟಿಕ್ ಮಾರಿ ವಿರುದ್ಧ ತಟ್ಟೀಸರ



**ಯಾ**ವುದೇ ವ್ಯಕ್ತಿಯಾಗಲಿ, ತಪ್ಪು ಎಂದು ತಿಳಿದೂ ಮತ್ತೊಮ್ಮೆ ಅದನ್ನೇ ಮಾಡಿದರೆ ಅದಕ್ಕೆ ಕ್ಷಮೆ ಇಲ್ಲ; ತಿಳಿಯದೇ ಮಾಡುವ ತಪ್ಪಿಗೆ ಕ್ಷಮೆ ಇದೆ ಎನ್ನುತ್ತಾರೆ. ಬಹಳಷ್ಟು ವಿಚಾರಗಳಲ್ಲಿ ತಪ್ಪು ಎಂದು ತಿಳಿದೂ ಅದನ್ನೇ ಮಾಡುವ ಅನಿವಾರ್ಯ ಸ್ಥಿತಿಯನ್ನು ನಾವಿಂದು ತಲುಪಿದ್ದೇವೆ.

ಮನೆ ಪ್ರವೇಶಿಸಿದೊಡನೆ ಕುಳಿತುಕೊಳ್ಳಲು ತೋರಿಸುವ ಖುರ್ಚಿ, ಚಾಪೆ, ಕೈಕಾಲು ತೊಳೆಯಲು ನೀರಿಡುವ ಬಕೇಟ್, ತಂಬಿಗೆ, ಈಗೀಗ ಚಹಾ ಅಥವಾ ಇನ್ನಾವುದೋ ಪಾನೀಯ ಕುಡಿದೋ ಬಿಸಾಡುವ ಲೋಟ, ಮಾರ್ಕೆಟ್‌ನಿಂದ ಸಾಮಾನು ತರುವ ಚೀಲ, ಹಾಲಿನ ಪಾಕೀಟನಿಂದ ಹಿಡಿದು ಆಲ್ಕೋಹಾಲ್ ಬಾಟಲುವರೆಗೆ, ನೀರಿನ ಪ್ಯಾಕೇಟ್‌ನಿಂದ ಗುಟ್ಕಾ, ಚಾಕಲೇಟ್ ರ್‍ಯಾಪರ್‌ವರೆಗೆ ವ್ಯಾಪಿಸಿರುವ ಪ್ಲಾಸ್ಟಿಕ್ ಈಗ ''ಸರ್ವಂ ಪ್ಲಾಸ್ಟಿಕ್ ಮಯಂ'' ಎನ್ನುವ ಸ್ಥಿತಿ ನಿರ್ಮಿಸಿದೆ.

ಈ ಪ್ಲಾಸ್ಟಿಕ್ ಒಂದು ದೊಡ್ಡ ಪಿಡುಗು ಎಂದು ಉಪಯೋಗಿಸುವವರಿಗೆಲ್ಲ ಗೊತ್ತಿದೆ. ಯಾವುದೋ ಒಂದು ರೂಪಿನಲ್ಲಿ ಜನಿಸಿದ ನಂತರ ಇದಕ್ಕೆ ಸಾವು ಇಲ್ಲ. ಸುಟ್ಟರೂ ಬಿಡದು ಇದರ ಪೀಡೆ. ಇದನ್ನು ಸುಡಹೋಗಿ ಉಂಟಾಗಬಹುದಾದ ಹೊಗೆಯಿಂದ ಪರಿಸರದ ಮೇಲೆ ತೀವ್ರ ಪರಿಣಾಮ ಅಲ್ಲದೇ ಓಜೋನ್ ಪದರದ ಮೇಲೂ ಪರಿಣಾಮವಾಗುತ್ತದೆ ಎನ್ನುವ ವರದಿ ಇದೆ. ಇಷ್ಟಿದ್ದರೂ ಪ್ಲಾಸ್ಟಿಕ್ ನಿಯಂತ್ರಣಕ್ಕೆ ಸಾರ್ವತ್ರಿಕ ಆಂದೋಲನವಾಗಿಲ್ಲ. ಕಾರಣವಿಷ್ಟೇ, ಪ್ಲಾಸ್ಟಿಕ್ ಉಪಯೋಗ ಈಗ ಮಾನವನಿಗೆ ತಪ್ಪಿಸಿಕೊಳ್ಳಲಾಗದಷ್ಟು ವ್ಯಾಪಕವಾಗಿ ಬೆಳೆದಿದೆ. ಆದರೂ ಅಲ್ಲೊಂದು ಇಲ್ಲೊಂದು ಸಂಘಟನೆಗಳು ಅಥವಾ ವ್ಯಕ್ತಿಗಳು ಪ್ಲಾಸ್ಟಿಕ್ ವಿರುದ್ಧ ತಮ್ಮ ಕೈಲಾದ ಸಮರ ಸಾರುತ್ತಲೇ ಇದ್ದಾರಾದರೂ ರಕ್ತಬೀಜಾಸುರನ ವಂಶದ ಈ ಕುಲದ ನಾಶ ಸಾಮಾನ್ಯರಿಂದ ಸಾಧ್ಯವಾಗುತ್ತಿಲ್ಲ.

ಹೊಸ ಶತಮಾನದ ಜನವರಿ 26 ಗಣರಾಜ್ಯೋತ್ಸವದ ಸ್ವರ್ಣ ವರ್ಷವೂ ಹೌದು. ಅಂದು ಶಿರಸಿ ತಾಲೂಕಿನ ತಟ್ಟೀಸರ ಸೇವಾ ಸಹಕಾರಿ ಸಂಘದವರು ಪ್ಲಾಸ್ಟಿಕ್ ನಾಶಕ್ಕಾಗಿ ವಿನೂತನ ಕಾರ್ಯಕ್ರಮವೊಂದನ್ನು ಪ್ರಾರಂಭಿಸಿದರು. ಸೇವಾ ಸಹಕಾರಿ ಸಂಘದ ವ್ಯಾಪ್ತಿಯಲ್ಲಿ ಒಟ್ಟು 12 ಪ್ರಾಥಮಿಕ ಹಾಗೂ 1 ಮಾಧ್ಯಮಿಕ ಶಾಲೆಯಿದ್ದು ಅಲ್ಲಿಯ ವಿದ್ಯಾರ್ಥಿಗಳು ತೋಟಪಟ್ಟಿ, ಮನೆಯಂಗಳ, ಆಟದ ಮೈದಾನ ಹೀಗೆ ಎಲ್ಲೆಂದರಲ್ಲಿ ಕಾಣಸಿಗುವ ಪ್ಲಾಸ್ಟಿಕ್‌ನ್ನು ಆರಿಸಿ ತಂದು ಸಂಘಕ್ಕೆ ನೀಡುತ್ತಾರೆ. ಸಂಘ ವಿದ್ಯಾರ್ಥಿಗೆ ಕಿಲೋ ಒಂದಕ್ಕೆ 5ರೂ ಬೆಲೆಯನ್ನು ನೀಡುವುದು. ಇದರಿಂದ ಸಂಘದಲ್ಲಿ ಸಂಗ್ರಹವಾದ ಪ್ಲಾಸ್ಟಿಕ್‌ನ್ನು, ಪ್ಲಾಸ್ಟಿಕ್ ಪುನರ್ ಬಳಕೆ ಮಾಡುವ ಕೈಗಾರಿಕೆಗೆ ನೀಡಲಾಗುತ್ತದೆ. ತನ್ಮೂಲಕ ಆ ಪ್ರದೇಶದಲ್ಲಿಯ ಮಣ್ಣು ಹಾಗೂ ಪರಿಸರದ ಮೇಲಾಗುವ ಪ್ಲಾಸ್ಟಿಕ್‌ನ ದುಷ್ಪರಿಣಾಮವನ್ನು ತಡೆಯುವುದು ಸಂಘದ ಉದ್ದೇಶ.

ಈಗಾಗಲೇ ಸಂಘದ ವ್ಯಾಪ್ತಿಯ ನಾಲ್ಕೈದು ಶಾಲೆಗಳಿಂದ 5 ಕ್ವಿಂಟಲ್‌ಗಳಷ್ಟು ಪ್ಲಾಸ್ಟಿಕ್ ಒಟ್ಟಾಗಿದೆ. ಕಳೆದ ಎರಡು ವರ್ಷಗಳಿಂದ ಪ್ಲಾಸ್ಟಿಕ್ ಹಾವಳಿ ನಿಯಂತ್ರಿಸಲು ಏನು ಕ್ರಮ ಎಂದು ಚಿಂತಿಸಿ ಈ ಯೋಜನೆ ರೂಪಿಸಿದ್ದೇವೆ ಎಂದು ಅಧ್ಯಕ್ಷ ಹಾಗೂ ಕಾರ್ಯದರ್ಶಿ ವಿವರಣೆ ನೀಡಿದ್ದು ಮುಂಬರುವ ದಿನಗಳಲ್ಲಿ ಪ್ಲಾಸ್ಟಿಕ್ ಬಳಕೆ ನಿಯಂತ್ರಣಕ್ಕೂ ಅಗತ್ಯವಾದ ತಿಳುವಳಿಕೆ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದೇವೆ ಎನ್ನುತ್ತಾರೆ.

ತಟ್ಟೀಸರ ಸೇವಾ ಸಹಕಾರಿ ಸಂಘ ವ್ಯವಹಾರದಲ್ಲಿ ಮಾದರಿ ಸಂಘ ಎಂದು ಕಳೆದ ಸಾಲಿನಲ್ಲಿ ರಾಜ್ಯ ಮಾರಾಟ ಮಹಾಮಂಡಳಿಯ ಪ್ರಶಸ್ತಿಯನ್ನು ಪಡೆದಿದ್ದು ಪ್ಲಾಸ್ಟಿಕ್ ನಾಶದ ವಿಚಾರದಲ್ಲೂ ಇತರರಿಗೆ ಮಾದರಿಯಾಗಿರುವುದು ವಿಶೇಷ.

■ ಚಿತ್ರಲೇಖನ : ಸೀತಾರಾಂ ಬೆಳಖಂಡ

